# ತತ್ವಪದ ಅಧ್ಯಯನಗಳು : ವಿಮರ್ಶಾತ್ಮಕ ಸಮೀಕ್ಷೆ

(ಪಿಎಚ್.ಡಿ. ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ ಸಾದರಪಡಿಸಿದ ಮಹಾಪ್ರಬಂಧ)


ಸಂಶೋಧಕ

ಜಗದೀಶ ಕೆರೆನಳ್ಳಿ

ಮಾರ್ಗದರ್ಶಕರು

ಡಾ. ವೆಂಕಟೇಶ ಇಂದ್ವಾಡಿ

ಸಹ ಪ್ರಾಧ್ಯಾಪಕರು





ಕನ್ನಡ ಸಾಹಿತ್ಯ ಅಧ್ಯಯನ ವಿಭಾಗ

ಭಾಷಾ ನಿಕಾಯ

ಕನ್ನಡ ವಿಶ್ವವಿದ್ಯಾಲಯ, ಹಂಪಿ

ವಿದ್ಯಾರಣ್ಯ ೫೮೩ ೨೭೬

೨೦೦೯


376

# ತತ್ವಪದ ಅಧ್ಯಯನಗಳು : ವಿಮರ್ಶಾತ್ಮಕ ಸಮೀಕ್ಷೆ

(ಪಿಎಚ್.ಡಿ. ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ
ಸಾದರಪಡಿಸಿದ ಮಹಾಪ್ರಬಂಧ)


ಸಂಶೋಧಕ

ಜಗದೀಶ ಕೆರೆನಳ್ಳಿ

ಮಾರ್ಗದರ್ಶಕರು

ಡಾ. ವೆಂಕಟೇಶ ಇಂದ್ವಾಡಿ

ಸಹ ಪ್ರಾಧ್ಯಾಪಕರು





ಕನ್ನಡ ಸಾಹಿತ್ಯ ಅಧ್ಯಯನ ವಿಭಾಗ

ಭಾಷಾ ನಿಕಾಯ

ಕನ್ನಡ ವಿಶ್ವವಿದ್ಯಾಲಯ, ಹಂಪಿ

ವಿದ್ಯಾರಣ್ಯ ೫೮೩ ೨೭೬

೨೦೦೯

## ದೃಢೀಕರಣ ಪತ್ರ

ಜಗದೀಶ ಕೆರೆನಳ್ಳಿ ಅವರು ತತ್ವಪದ ಅಧ್ಯಯನಗಳು : ವಿಮರ್ಶಾತ್ಮಕ ಸಮೀಕ್ಷೆ ಎಂಬ ಶೀರ್ಷಿಕೆಯ ಸಂಶೋಧನ ಮಹಾಪ್ರಬಂಧವನ್ನು ನನ್ನ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿದ್ದಾರೆ. ಪಿಎಚ್.ಡಿ. ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ ಸಲ್ಲಿಸುತ್ತಿರುವ ಪ್ರಸ್ತುತ ಮಹಾಪ್ರಬಂಧವನ್ನು ಇವರು ಈ ಮೊದಲು ಯಾವುದೇ ಪದವಿಗಾಗಿ ಸಲ್ಲಿಸಿರುವುದಿಲ್ಲವೆಂದು ದೃಢೀಕರಿಸುತ್ತೇನೆ.

ಡಾ. ವೆಂಕಟೇಶ ಇಂದ್ವಾಡಿ
ಸಹ ಪ್ರಾಧ್ಯಾಪಕರು
ಮುಖ್ಯಸ್ಥರು, ದೇಸಿ ಸಂಸ್ಕೃತಿ
ಅಧ್ಯಯನ ಕೇಂದ್ರ
ಕನ್ನಡ ವಿಶ್ವವಿದ್ಯಾಲಯ
ಕುರುಬನಕಟ್ಟೆ, ಕೊಳ್ಳೇಗಾಲ

ದಿನಾಂಕ : ೮.೭.೨೦೧೦

# ಪ್ರಮಾಣ ಪತ್ರ

ತತ್ವಪದ ಅಧ್ಯಯನಗಳು : ವಿಮರ್ಶಾತ್ಮಕ ಸಮೀಕ್ಷೆ ಎಂಬ ಮಹಾಪ್ರಬಂಧವನ್ನು ಕನ್ನಡ ವಿಶ್ವವಿದ್ಯಾಲಯದ ಕನ್ನಡ ಸಾಹಿತ್ಯ ಅಧ್ಯಯನ ವಿಭಾಗಕ್ಕೆ ಪಿಎಚ್.ಡಿ. ಪದವಿಗಾಗಿ ಡಾ.ವೆಂಕಟೇಶ ಇಂದ್ವಾಡಿ ಅವರ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿ ಸಲ್ಲಿಸುತ್ತಿದ್ದೇನೆ. ಪ್ರಸ್ತುತ ಮಹಾಪ್ರಬಂಧವು ನನ್ನ ಸ್ವಂತ ಪರಿಶ್ರಮದ ಫಲವಾಗಿದ್ದು, ಈ ಮೊದಲು ಇದನ್ನು ಇನ್ನಾವುದೇ ಪದವಿಗಾಗಿ ಸಲ್ಲಿಸಿರುವುದಿಲ್ಲವೆಂದು ಪ್ರಮಾಣೀಕರಿಸುತ್ತೇನೆ.

ಜಗದೀಶ ಕೆರೆನಳ್ಳಿ
ಸಂಶೋಧಕ
**ಕನ್ನಡ ಸಾಹಿತ್ಯ ಅಧ್ಯಯನ ವಿಭಾಗ**
ಕನ್ನಡ ವಿಶ್ವವಿದ್ಯಾಲಯ, ಹಂಪಿ

ಸ್ಥಳ : ವಿದ್ಯಾರಣ್ಯ
ದಿನಾಂಕ : ೮.೨.೨೦೧೦

## ಕೃತಜ್ಞತೆಗಳು

ಕನ್ನಡ ವಿಶ್ವವಿದ್ಯಾಲಯದಲ್ಲಿ ಪಿಎಚ್.ಡಿ.ಅಧ್ಯಯನಕ್ಕೆ ಅವಕಾಶ ಮಾಡಿಕೊಟ್ಟ ಹಿಂದಿನ ಕುಲಪತಿಗಳಾದ ಡಾ.ಬಿ.ಎ.ವಿವೇಕ ರೈ ಅವರಿಗೆ, ಈಗಿನ ಕುಲಪತಿಗಳಾದ ಡಾ.ಎ.ಮುರಿಗೆಪ್ಪ ಅವರಿಗೆ ಹಾಗೂ ಕುಲಸಚಿವರಾದ ಡಾ.ಮಂಜುನಾಥ ಬೇವಿನಕಟ್ಟಿ ಅವರಿಗೆ ಮತ್ತು ಅಧ್ಯಯನಾಂಗದ ನಿರ್ದೇಶಕರಾದ ಡಾ.ವೀರೇಶ ಬಡಿಗೇರ ಅವರಿಗೆ ಕೃತಜ್ಞತೆಗಳನ್ನು ಸಲ್ಲಿಸುತ್ತೇನೆ.

ಭಾಷಾ ನಿಕಾಯದ ಡೀನರು, ಅಧ್ಯಯನಕ್ಕೆ ಸಲಹೆ, ಸೂಚನೆಗಳನ್ನು ನೀಡಿದ ಮೇಷ್ಟ್ರು ಪ್ರೊ.ರಮಹತ್ ತರೀಕೆರೆ ಅವರಿಗೆ, ಪ್ರೀತಿಯಿಂದ ಮಾರ್ಗದರ್ಶನ ಮಾಡಿದ ಮೇಷ್ಟ್ರು ಡಾ.ವೆಂಕಟೇಶ ಇಂದ್ವಾಡಿ ಅವರಿಗೆ, ವಿಭಾಗದ ಮುಖ್ಯಸ್ಥರಾದ ಡಾ.ಮಲ್ಲಿಕಾರ್ಜುನ ವಣೇನೂರ ಅವರಿಗೆ, ಅಧ್ಯಯನದ ಕಾಲಕ್ಕೆ ಚರ್ಚೆಗೆ ಸಹಕರಿಸಿ ಮುಗೀತಾ ಪಿಎಚ್.ಡಿ ಎನ್ನುತ್ತಿದ್ದ ಮೇಷ್ಟ್ರು ಡಾ.ಅಮರೇಶ ನುಗಡೋಣಿ ಅವರಿಗೆ ಮತ್ತು ಡಾ.ಬಿ.ಎಂ.ಪುಟ್ಟಯ್ಯ ಅವರಿಗೆ ಕೃತಜ್ಞತೆಗಳನ್ನು ಸಲ್ಲಿಸುತ್ತೇನೆ.

ಅಧ್ಯಯನದ ಕಾಲದಲ್ಲಿ ತಾಂತ್ರಿಕವಾಗಿ ಕೊಳೂರು ಶಿವಪ್ಪ ಮತ್ತು ಕರೀಂಸಾಬ್ ಅವರು ನೀಡಿದ ಸಲಹೆ, ಸಹಕಾರ ದೊಡ್ಡದು. ಸಹಾಯಕರಾದ ನಿಂಗಪ್ಪ ಅವರನ್ನು ಈ ಸಂದರ್ಭದಲ್ಲಿ ನೆನೆಯುತ್ತೇನೆ.

ಅಧ್ಯಯನದ ಸಮಯದಲ್ಲಿ ಚರ್ಚೆಗೆ ಸಹಕರಿಸಿದ ಡಾ. ಎಂ.ಚಿದಾನಂದಮೂರ್ತಿ, ಡಾ.ಎಚ್.ಎಸ್. ಶಿವಪ್ರಕಾಶ್, ಪ್ರೊ.ಕಿ.ರಂ.ನಾಗರಾಜ, ಡಾ.ಕೆ.ರವೀಂದ್ರನಾಥ, ಡಾ.ಶಿವಾನಂದ ವಿರಕ್ತಮಠ, ಡಾ.ಸರ್ವಮಂಗಳ ಶಂಕರ, ಡಾ.ವಿಕ್ರಮ ವಿಸಾಜಿ ಅವರಿಗೆ ಕೃತಜ್ಞತೆಗಳು. ನಿನ್ನ ಪಿಎಚ್.ಡಿ.ಮುಗೀತೇ ಎಂದು ಕಾಳಜಿಯಿಂದ ಪದೇ ಪದೇ ವಿಚಾರಿಸುತ್ತಿದ್ದ ವೈದ್ಯರಾದ ಡಾ.ಬಿ.ಜಿ.ಚನ್ನಬಸಪ್ಪ, ಕನ್ನಡ ಮತ್ತು ಸಂಸ್ಕೃತಿ ಇಲಾಖೆಯ ಸಹಾಯಕ ನಿರ್ದೇಶಕರಾದ ಶ್ರೀ ಚೋರುನೂರು ಕೊಟ್ರಪ್ಪ ಅವರಿಗೆ ಕೃತಜ್ಞತೆಗಳು.

ಪ್ರಬಂಧ ಸಿದ್ಧತೆಯ ಕ್ಷೇತ್ರಕಾರ್ಯದ ಸಂದರ್ಭದಲ್ಲಿ ಅನೇಕ ಅಧ್ಯಾಪಕರು ಮತ್ತು ವಿವಿಧ ಕಾಲೇಜುಗಳ ವಿದ್ಯಾರ್ಥಿಗಳು ನೆರವಾಗಿದ್ದಾರೆ. ಅವರೆಲ್ಲರಿಗೂ ಕೃತಜ್ಞತೆಗಳು. ಸ್ನೇಹಿತರಾದ ದತ್ತುರಾಜ್, ಟಿ.ರಮೇಶ, ತುಕಾರಾಮ, ಧರ್ಮವೀರ, ಜಬ್ಬೀರ್, ಗುರುಸ್ವಾಮಿ, ನಿಂಗಪ್ಪ, ಬಸವರಾಜ ಮತ್ತು ಕನ್ನಡ ವಿಶ್ವವಿದ್ಯಾಲಯದ ಅನಿಕೇತನ ಮತ್ತು ಅನನ್ಯ ವಿದ್ಯಾರ್ಥಿನಿಲಯದ ಎಲ್ಲ ಸ್ನೇಹಿತರನ್ನು ಪ್ರೀತಿಯಿಂದ ನೆನೆಯುತ್ತೇನೆ.

ನನ್ನ ತಾಯಿ ತಂದೆ ಹಾಗೂ ನಮ್ಮ ಕುಟುಂಬ ಪರಿವಾರ ಮತ್ತು ಅವರ ಪ್ರೀತಿ ನನ್ನ ಅಧ್ಯಯನದ ಹಿಂದಿರುವ ದೊಡ್ಡ ಶಕ್ತಿ. ಈ ಸಂದರ್ಭದಲ್ಲಿ ಅವರನ್ನು ಪ್ರೀತಿಯಿಂದ ನೆನೆಯುತ್ತೇನೆ.

ಕನ್ನಡ ವಿಶ್ವವಿದ್ಯಾಲಯದ ಗ್ರಂಥಾಲಯದ ಸಿಬ್ಬಂದಿಗೆ, ಅಕ್ಷರ ಸಂಯೋಜನೆ ಮಾಡಿದ ಶ್ರೀಮತಿ ರಶ್ಮಿಕೃಪಾಶಂಕರ್ ಅವರಿಗೆ, ಪ್ರಬಂಧದ ಕರಡು ತಿದ್ದಿ, ವಿನ್ಯಾಸಕ್ಕೆ ನೆರವಾದ ಪ್ರಸಾರಾಂಗದ ಸಹಾಯಕ ನಿರ್ದೇಶಕರಾದ ಶ್ರೀ ಬಿ.ಸುಜ್ಞಾನಮೂರ್ತಿ ಅವರಿಗೆ ಕೃತಜ್ಞತೆಗಳನ್ನು ಸಲ್ಲಿಸುತ್ತೇನೆ.

**ಜಗದೀಶ ಕೆರೆನಳ್ಳಿ**

## ಪರಿವಿಡಿ

## ಅಧ್ಯಾಯ ಒಂದು

# ಅಧ್ಯಯನದ ತಾತ್ವಿಕ ಸ್ವರೂಪ

### ೧.೧. ಪ್ರಸ್ತಾವನೆ

ಆಧುನಿಕ ಕನ್ನಡ ಸಾಹಿತ್ಯ ಒಂದು ಶತಮಾನವನ್ನು ಕಳೆದಿದೆ. ಕಳೆದ ಶತಮಾನವು ಕಂಡ ಎಲ್ಲ ಕಾಲಘಟ್ಟಗಳ ಮತ್ತು ಪ್ರಕಾರಗಳ ಪ್ರಮುಖ ವಿಷಯಗಳು ಒಂದಲ್ಲ ಒಂದು ಕಾರಣದಿಂದ ಆಗಾಗ್ಗೆ ಸಮೀಕ್ಷೆಗೆ ಒಳಪಡುತ್ತಲೇ ಬಂದಿವೆ. ಕರ್ನಾಟಕ ಏಕೀಕರಣವಾದ ಮೇಲಂತೂ ಕನ್ನಡ ಸಾಹಿತ್ಯ ಹಾಗೂ ಸಂಸ್ಕೃತಿಯ ಪರಿಚಯವನ್ನು ಬಹುಸ್ತರೀಯ ಮತ್ತು ಬಹುಮುಖಿ ನೆಲೆಯಲ್ಲಿ ಮಾಡಿಕೊಡುವ ಪ್ರಯತ್ನಗಳು ಭರದಿಂದ ನಡೆದಿವೆ.

ಹೊಸಗನ್ನಡದ ಹಲವು ಸಾಹಿತ್ಯ ಪ್ರಕಾರಗಳು ಪಾಶ್ಚಾತ್ಯ ಸಾಹಿತ್ಯ ಪ್ರಭಾವದಿಂದ ಬಂದಂತೆ ವಿಮರ್ಶೆ, ಅವಲೋಕನ (ಸಮೀಕ್ಷೆ) ಬರಹಗಳೂ ರೂಢಿಗೆ ಬಂದವು ಎನ್ನಲಾಗುತ್ತಿದೆ. ಆದರೆ ವಿಮರ್ಶೆ ಮತ್ತು ಅವಲೋಕನಗಳು ಬೇರೆ ಬೇರೆಯೇ? ಅವುಗಳ ಉದ್ದೇಶ, ಸ್ವರೂಪ, ಸಾಧ್ಯತೆಗಳ ಬಗೆಗಿನ ಎಚ್ಚರ ನಮ್ಮಲ್ಲಿ ಇತ್ತೀಚಿಗೆ ಉಂಟಾಗಿದೆ. ಆದರೆ ಖಚಿತ ಗಡಿ ಗೆರೆ ಎಳೆಯಲು ಸಾಧ್ಯವೆ ಎಂಬುದು ವಿದ್ವಾಂಸರ ಅನುಮಾನ.

ಇಂಗ್ಲಿಷ್‌ನಲ್ಲಿ ೨೦ನೆಯ ಶತಮಾನದಲ್ಲಿ ಸಮೀಕ್ಷಾ, ಅವಲೋಕನ ಬರಹಗಳು ಶುರುವಾಗಿವೆ. 'The Times literary Supplement', 'Weekend Reviw', 'New Stateman' ಮುಂತಾದವು ಗಮನಿಸುವಂತವು. ಆದರೆ ಕನ್ನಡದಲ್ಲಿ ಇಡಿಯಾಗಿ ಸಮೀಕ್ಷೆಯ ರೂಪದ ಬರಹಗಳು ಮಾತ್ರ ೧೯೭೦ ರಿಂದೀಚಿಗೆ ನಡೆದಿವೆ. ಇದಕ್ಕೆ ಬೆಂಗಳೂರು ವಿಶ್ವವಿದ್ಯಾಲಯವೇ ನಾಂದಿ ಹಾಡಿದಂತೆ ತೋರುತ್ತದೆ. ಈ ಹಿಂದೆ ಪತ್ರಿಕೆಗಳು ಈ ಕಾರ್ಯವನ್ನು ಬಿಡಿಯಾಗಿ ಮಾಡಿವೆ. ಪ್ರಬುದ್ಧಕರ್ನಾಟಕ, 'ಸಾಹಿತ್ಯ ಪರಿಷತ್ಪತ್ರಿಕೆ', 'ಜೀವನ', 'ಸಾಕ್ಷಿ', 'ರುಜುವಾತು', 'ಶರಣಸಾಹಿತ್ಯ', 'ಶೂದ್ರ', 'ಸಂಕ್ರಮಣ' ಮೊದಲಾದ ನಿಯತ ಕಾಲಿಕೆಗಳು, ಲಂಕೇಶ, ಸುಧಾ ಮುಂತಾದ ವಾರಪತ್ರಿಕೆಗಳು, ಮಾಸಿಕಗಳು, ಸಾಹಿತ್ಯಕ, ಸಾಂಸ್ಕೃತಿಕ ಅಂಶಗಳ ಕುರಿತ ಸಮೀಕ್ಷಾತ್ಮಕ ಬಿಡಿ ಬರಹಗಳನ್ನು ಪ್ರಕಟಿಸಿವೆ. ಈ ನಿಟ್ಟಿನಲ್ಲಿ ಈಗಲೂ ಕೆಲವು

ದಿನಪತ್ರಿಕೆಗಳು, ಅದೇ ಪತ್ರಿಕೆಗಳ ದೀಪಾವಳಿ ವಿಶೇಷ ಸಂಚಿಕೆಗಳು ಸಮೀಕ್ಷಾತ್ಮಕ ಬರಹಗಳನ್ನು ಪ್ರಕಟಿಸುತ್ತಿವೆ. ಸೃಜನಶೀಲ ಕೃತಿಗಳಲ್ಲದೆ ಮೀಮಾಂಸೆ, ವಿಮರ್ಶೆ ಹಾಗೂ ಸಂಶೋಧನೆಗಳಂತಹ ಹಲವು ಕ್ಷೇತ್ರದಲ್ಲಿಯೂ, ಸಾಹಿತ್ಯೇತರವಾದ ಇತರ ಜ್ಞಾನ ಶಾಖೆಗಳಲ್ಲಿಯೂ ಸಮೀಕ್ಷೆಯ ಕಾರ್ಯ ನಡೆದಂತೆ ತೋರುತ್ತದೆ.

ಈ ಹೊತ್ತು ಸಾಹಿತ್ಯ ಶುದ್ಧ ಸಾಹಿತ್ಯವಾಗಿ ಉಳಿದಿಲ್ಲ. ಬದಲಿಗೆ ಅದು ಉಳಿದೆಲ್ಲ ಜ್ಞಾನ ಶಾಖೆಗಳ ಜೊತೆ ರಕ್ತ ಮಾಂಸವನ್ನು ಹಂಚಿಕೊಂಡು ಬದುಕುತ್ತಿದೆ. ಈ ಕಾರಣವಾಗಿ ಇಂದು ಸಾಹಿತ್ಯದ ವ್ಯಾಪ್ತಿ ವಿಸ್ತಾರಗೊಂಡಿದೆ. ಇಷ್ಟು ವಿಸ್ತಾರಗೊಂಡ ಸಾಹಿತ್ಯದ ಫಲಿತಾಂಶಗಳನ್ನು ಓದುಗರಿಗೆ ತಿಳಿಸಿಕೊಡುವ ಸಮೀಕ್ಷಾ ಕಾರ್ಯಗಳು ನಮ್ಮಲ್ಲಿ ಮೂರು ನೆಲೆಯಲ್ಲಿ ನಡೆದು ಬಂದಿವೆ.

೧. ಕಾಲಕ್ಕನುಗುಣವಾಗಿ ಆಯಾ ಪ್ರಕಾರಕ್ಕೆ ಸಂಬಂಧಿಸಿದಂತೆ ಉತ್ತಮ ಪಠ್ಯಗಳನ್ನು ಸಂಕಲಿಸಿಕೊಡುವ ಸಂಪಾದನ ಕ್ರಮ. ಈ ಹಿನ್ನೆಲೆಯಲ್ಲಿ ಕರ್ನಾಟಕ ಸಾಹಿತ್ಯ ಅಕಾಡೆಮಿಯು ತಂದ ವಾರ್ಷಿಕ, ದಶವಾರ್ಷಿಕ, ಕಾಲು ಶತಮಾನ ಹಾಗೂ ಶತಮಾನದ ಸಾಹಿತ್ಯವನ್ನು ಪುನರವಲೋಕನ ಮಾಡಿಕೊಡುವ ಉದ್ದೇಶದಿಂದ ಕಾವ್ಯ, ಸಣ್ಣಕಥೆ, ಲಲಿತ ಪ್ರಬಂಧ, ವಿಮರ್ಶೆ, ಸಂಶೋಧನೆ, ವಿಚಾರ ಸಾಹಿತ್ಯ, ವಿನೋದ ಸಾಹಿತ್ಯ ಹಾಗೂ ಮಕ್ಕಳ ಸಾಹಿತ್ಯ, ಪ್ರಕಾರಗಳ ಪಠ್ಯವನ್ನು ಹೊರತಂದಿವೆ. ಹಾಗೆಯೇ ಕನ್ನಡ ಮತ್ತು ಸಂಸ್ಕೃತಿ ಇಲಾಖೆಯು 'ಸುವರ್ಣ ಸಾಹಿತ್ಯ ಗ್ರಂಥಮಾಲೆ'(೨೦೦೬) ಅಡಿಯಲ್ಲಿ ಸಾಹಿತ್ಯದ ಬೇರೆ ಬೇರೆ ಪ್ರಕಾರಗಳನ್ನು ಸಂಪುಟಗಳಲ್ಲಿ ಹೊರತಂದಿದೆ. ಪ್ರಿಸಂ ಬುಕ್ ಪ್ರೈವೇಟ್ ಲಿಮಿಟೆಡ್‌ನಂತಹ ಖಾಸಗಿ ಪ್ರಕಾಶನ ಸಂಸ್ಥೆಗಳೂ 'ಶತಮಾನದ ಸಣ್ಣಕಥೆಗಳು' (೧೯೯೭) ಇತ್ಯಾದಿ ಹೆಸರಿನ ಸಂಕಲನಗಳನ್ನು ಪ್ರಕಟಿಸಿರುವುದು ಗಮನಿಸಬೇಕಾದ ಸಂಗತಿ.

೨. ಒಟ್ಟು ರಚನೆಗೊಂಡ ಸಾಹಿತ್ಯವನ್ನು ಅನುಲಕ್ಷಿಸಿ ವಿಮರ್ಶಾತ್ಮಕವಾಗಿ ಪರಿಚಯಾತ್ಮಕವಾಗಿ ಮೌಲ್ಯಮಾಪನ ಮಾಡುವ ವಿಶ್ಲೇಷಣಾ ಕ್ರಮ ಇದೆ. ಈ ದೃಷ್ಟಿಯಿಂದ ಬೆಂಗಳೂರು ವಿಶ್ವವಿದ್ಯಾಲಯದ ಸಾಹಿತ್ಯ ವಾರ್ಷಿಕ, ದಶವಾರ್ಷಿಕ ಮತ್ತು ಸಾಹಿತ್ಯರೂಪಗಳ (ಚಂಪು, ವಚನ, ಷಟ್ಪದಿ ಹೀಗೆ) ಮೂಲ ಮಾನವಾಗಿಟ್ಟುಕೊಂಡು ಸಾಹಿತ್ಯಾಸಕ್ತರಾದ ಸಾಮಾನ್ಯರಿಗೆ ಕನ್ನಡ ಸಾಹಿತ್ಯ ಚರಿತ್ರೆ ಪರಿಚಯಿಸುವ ಮುಖ್ಯವಿಷಯಗಳ ಸಾರಾಂಶ ರೂಪದ ಚರ್ಚೆಗಳನ್ನು ೧೦ ಕಿರು ಸಂಪುಟಗಳಲ್ಲಿ 'ಸಾಮಾನ್ಯನಿಗೆ ಸಾಹಿತ್ಯ ಚರಿತ್ರೆ' ಮಾಲೆಯಲ್ಲಿ ಹೊರತಂದಿದೆ. ಕವಿಗಳನ್ನಾಗಲಿ, ಮತಧರ್ಮಗಳನ್ನಾಗಲಿ ಮೂಲವಾಗಿಸಿಕೊಳ್ಳದೆ ಕನ್ನಡ ಸಾಹಿತ್ಯ ಬೆಳೆದು ಬಂದ ಇತಿಹಾಸವನ್ನು ತಿಳಿಸುತ್ತವೆ. ಕಾಲಮಾನವನ್ನು ವಿಭಜಿಸಿಕೊಂಡು ಕನ್ನಡ ಸಾಹಿತ್ಯ ಚರಿತ್ರೆ ಪ್ರಮಾಣಭೂತವು ಪುನರ್‌ಮೌಲ್ಯಮಾಪನ ದೃಷ್ಟಿಯುಳ್ಳದ್ದು ಆಗಿರಬೇಕೆಂಬ ಉದ್ದೇಶವನ್ನೊಳಗೊಂಡಿವೆ. ಜೊತೆಗೆ 'ಕರ್ನಾಟಕದ ಸಾವಿರ ವರ್ಷಗಳ ಸಮಷ್ಟಿ ಮನಸ್ಸು ಯಾವ ಯಾವ ಅಭಿವ್ಯಕ್ತಿ ಪ್ರಕಾರಗಳಲ್ಲಿ ತನ್ನನ್ನು ತಾನು ಪ್ರಕಟಪಡಿಸಿಕೊಂಡಿದೆಯೋ

ಆ ಸಮಸ್ತ ವಾಙ್ಮಯದ ಪರಿಶೀಲನೆ ಮಾಡುವ ಆಶಯದಿಂದ' (ಜಿ.ಎಸ್.ಎಸ್.ಶಿವರುದ್ರಪ್ಪ, ಮುನ್ನುಡಿ : ೧೯೭೫) 'ಸಮಗ್ರ ಕನ್ನಡ ಸಾಹಿತ್ಯ ಚರಿತ್ರೆ'ಯ ಸಂಪುಟಗಳನ್ನು ಹೊರತಂದಿದೆ. ಹಾಗೆಯೇ ಕರ್ನಾಟಕ ಸಾಹಿತ್ಯ ಅಕಾಡೆಮಿಯು ಹೊರತಂದ 'ಸಾಹಿತ್ಯ ಸಮೀಕ್ಷೆ' ಕೃತಿಯಲ್ಲದೆ, ಭಾರತದ ೧೫ ಭಾಷೆಗಳ ಸಾಹಿತ್ಯ ಮತ್ತು ಇಂಗ್ಲಿಷ್ ಹಾಗೂ ಇನ್ನೂ ಕೆಲವು ಭಾಷೆಗಳಲ್ಲಿನ ಸಾಹಿತ್ಯಗಳು ನಡೆದುಬಂದ ದಾರಿಯನ್ನು ಗುರುತಿಸುವ ಮತ್ತು 'ಸಮಗ್ರ ಭಾರತೀಯ ಸಾಹಿತ್ಯ ಪರಿಚಯಿಸುವ ಮುಖ್ಯ ಉದ್ದೇಶದಿಂದ ಕೆ.ಎಂ.ಜಾರ್ಜ್ ಅವರು ಸಂಪಾದಿಸಿದ ಇಂಗ್ಲಿಷ್‌ನ 'ಕಂಪ್ಯಾರೆಟಿವ್ ಇಂಡಿಯನ್ ಲಿಟರೇಚರ್' ಕೃತಿಯ ಕನ್ನಡ ಅನುವಾದ ಎರಡು ಸಂಪುಟಗಳ 'ಭಾರತೀಯ ಸಾಹಿತ್ಯ ಸಮೀಕ್ಷೆ'(೧೯೯೦), ಧಾರವಾಡದ ಕರ್ನಾಟಕ ವಿಶ್ವವಿದ್ಯಾಲಯ 'ಭಾರತೀಯ ಸಾಹಿತ್ಯಗಳ ಅವಲೋಕನದ ಉದ್ದೇಶದಿಂದ ಕೆ.ಸಂತಾನಂ ಅವರು 'ಭಾರತೀಯ ಸಾಹಿತ್ಯ' ಕುರಿತು ಸಂಪಾದಿಸಿದ ಇಂಗ್ಲಿಷ್ ಕೃತಿಯ ಕನ್ನಡ ಅನುವಾದ 'ಭಾರತೀಯ ಸಾಹಿತ್ಯ ಸಂಕಲನ (೧೯೮೩), ಕನ್ನಡ ವಿಶ್ವವಿದ್ಯಾಲಯ ಹೊರತಂದ 'ಕನ್ನಡ ವಾರ್ಷಿಕಗಳು (೧೯೯೧-೯೪ರವರೆಗೆ). ಕನ್ನಡ ಸಾಹಿತ್ಯದ ವಿವಿಧ ಪ್ರಕಾರಗಳ ಹೆಜ್ಜೆಗುರುತುಗಳನ್ನು ಸಮೀಕ್ಷಿಸಿದ 'ದಶಕದ ಕನ್ನಡ ಸಾಹಿತ್ಯ (೨೦೦೨)', ಮೈಸೂರು ವಿಶ್ವವಿದ್ಯಾನಿಲಯ ಕನ್ನಡ ಅಧ್ಯಯನ ಸಂಸ್ಥೆಯು ಹೊರತಂದ 'ಹರಿದಾಸ ಸಾಹಿತ್ಯ ಸಮೀಕ್ಷೆ (೧೯೮೭)', ಕನ್ನಡ ಮತ್ತು ಸಂಸ್ಕೃತಿ ಇಲಾಖೆ ಹೊರತಂದ ಕರ್ನಾಟಕ ಪರಂಪರೆಯ ಸಮೀಕ್ಷೆ 'ಅವಲೋಕನ' (೧೯೮೫) , ಬೆಂಗಳೂರಿನ ಉದಯಭಾನು ಕಲಾಸಂಸ್ಥೆಯ 'ಸ್ವಾತಂತ್ರ್ಯೋತ್ತರ ಕನ್ನಡ ಸಾಹಿತ್ಯ ಮತ್ತು ಸಂಸ್ಕೃತಿ', ಪ್ರಕಾರಾನುಕ್ರಮದಲ್ಲಿ ೨೦ನೆಯ ಶತಮಾನದ ಕನ್ನಡ ಸಾಹಿತ್ಯದ ವಿಮರ್ಶಾತ್ಮಕ ಸಮೀಕ್ಷೆಯ ಉದ್ದೇಶದಿಂದ ಅಂಕೋಲದ ಶ್ರೀ ರಾಘವೇಂದ್ರ ಪ್ರಕಾಶನದವರು ಎರಡು ಸಂಪುಟಗಳಲ್ಲಿ ಹೊರತಂದ 'ಶತಮಾನದ ಕನ್ನಡ ಸಾಹಿತ್ಯ(೨೦೦೦)', ವಿ.ಸೀ. ಸಂಪದ ಬೆಂಗಳೂರು ಇವರು ಪ್ರಕಟಿಸಿದ ವಿ.ಸೀ.ಯವರು ಬರೆದ ಸಮಾರೋಪದ ಸಮೀಕ್ಷಾ ಬರೆಹಗಳ ಸಂಗ್ರಹ ವಿಮರ್ಶೆ ಸಂಪುಟ - ೩ 'ಕವಿಕಾವ್ಯ ಪರಂಪರೆ (೨೦೦೩)', ಮತ್ತು ವಿವಿಧ ಪತ್ರಿಕೆಗಳಿಗೆ ವಿ.ಸೀ. ಅವರು ಬರೆದ ಪುಸ್ತಕಾವಲೋಕನ ಕುರಿತ ಲೇಖನಗಳ ಸಂಗ್ರಹ ವಿಮರ್ಶಾ ಸಂಪುಟ-೪ 'ಸಾಹಿತ್ಯಾವಲೋಕನ (೨೦೦೩)', ಕಾವ್ಯಾಲಯ ಮೈಸೂರು ಇವರು ಹೊರತಂದ 'ಕಾವ್ಯಸಮೀಕ್ಷೆ' (೨೦೦೫ -೦೬), ಸಂವಹನ ಮೈಸೂರು ಇವರು ಹೊರತಂದ 'ಮಹಿಳಾ ಸಾಹಿತ್ಯ ಸಮೀಕ್ಷೆ'(೨೦೦೪), ಗೀತಾ ಬುಕ್ ಹೌಸ್ ಮೈಸೂರು ಇವರು ಹೊರತಂದ 'ಪುಸ್ತಕ ಸಂಸ್ಕೃತಿ'(೧೯೯೭), ರೂಪರಶ್ಮಿ ಪ್ರಕಾಶನ ಗುಲಬರ್ಗಾ ಅವರ 'ಜನಪದ ಭಾಷಾ ಸಮೀಕ್ಷೆ'(೧೯೮೯) ಮುಂತಾದವು ಗಮನಿಸುವಂತವು.

೩. ಕೃತಿ ಸಮೀಕ್ಷೆ, ವಿಮರ್ಶಾತ್ಮಕ ಸಮೀಕ್ಷೆ, ಸಾಹಿತ್ಯಾಧ್ಯಯನ ಸಮೀಕ್ಷೆ ಎಂಬ ಹೆಸರಿನಲ್ಲಿ ಕರ್ನಾಟಕದ ವಿಶ್ವವಿದ್ಯಾಲಯಗಳಲ್ಲಿ ಒಂದಲ್ಲ ಒಂದು ಸಾಹಿತ್ಯ ಪ್ರಕಾರದ ಮೇಲೆ ಪಿಎಚ್.ಡಿ ಅಧ್ಯಯನಗಳು,

ವ್ಯಕ್ತಿಗತ ಅಧ್ಯಯನಗಳು ನಡೆದಿವೆ. ಇವುಗಳಲ್ಲಿ ಇದುವರೆಗೂ ನಡೆದ ಸಾಹಿತ್ಯ ಅಧ್ಯಯನದ ಅನೇಕ ಹಂತಗಳನ್ನು ಗುರುತಿಸಿ ಸಮೀಕ್ಷಿಸುವುದು ಮುಖ್ಯ ಉದ್ದೇಶವಾಗಿರುತ್ತದೆ. ಅಂತವುಗಳಲ್ಲಿ 'ಹಳಗನ್ನಡ ಸಾಹಿತ್ಯಾಧ್ಯಯನ ಸಮೀಕ್ಷೆ' ಗಮನಿಸುವಂತದ್ದು. ಅಲ್ಲದೇ 'ಬಿ.ಬಿ.ಹೆಂಡಿ, ಮಧುರಚೆನ್ನ ಇವರ ಜೀವನ ಕೃತಿಗಳ ಸಮೀಕ್ಷೆಯೂ ನಡೆದಿದೆ. 'ಕರ್ನಾಟಕ ಸಂಸ್ಕೃತಿ ಸಮೀಕ್ಷೆ'ಯೂ ಈ ನಿಟ್ಟಿನಲ್ಲಿ ಗಮನಾರ್ಹವಾದುದು. ಈ ಎಲ್ಲ ಸಂಕಲನ, ಅಧ್ಯಯನಗಳು ಕೆಲವು ತಾತ್ವಿಕ ಮತ್ತು ವೈಧಾನಿಕತೆಯನ್ನು ಒಳಗೊಂಡಿರುವಂತೆ ತೋರುತ್ತದೆ.

- ಆಧುನಿಕ ಕಾಲವನ್ನು ಅನುಲಕ್ಷಿಸಿ, ಸಾವಿರಾರು ವರ್ಷಗಳ ಸಾಹಿತ್ಯ ಪರಂಪರೆಯನ್ನು ಪುನರವಲೋಕನಕ್ಕೆ ಗುರಿಪಡಿಸುವುದು.
- ಸುದೀರ್ಘವಾದ ಕನ್ನಡ ಸಾಹಿತ್ಯ ಚರಿತ್ರೆಯನ್ನು ಅದರ ಸಾಂಸ್ಕೃತಿಕ ಹಿನ್ನೆಲೆಯ ಪರಿಚಯದೊಂದಿಗೆ ಜನಸಮುದಾಯಗಳಿಗೆ ತಿಳಿಸಿಕೊಡುವುದು.
- ಆ ಇಡೀ ಸಾಹಿತ್ಯದ ಸಾಧನೆ, ಅದರ ಬೆಳವಣಿಗೆಯನ್ನು ಚರ್ಚಿಸುವ, ತೌಲನಿಕವಾಗಿ ಪರಿಶೀಲಿಸುವ ಅಧ್ಯಯನದಿಂದ ಆ ಸಾಹಿತ್ಯದ ಸಮಗ್ರ ಗ್ರಹಿಕೆ ಸಾಧ್ಯ ಮತ್ತು ಅದು ತನ್ನ ಮುಂದಿನ ಅಧ್ಯಯನದ ಹಾದಿಯನ್ನು ಕಂಡುಕೊಳ್ಳಲು ನೆರವಾಗುತ್ತದೆಂಬ ನಂಬಿಕೆ.
- ಆಯಾ ಕಾಲಘಟ್ಟದ ಲೇಖಕರ ಒಪ್ಪಂದದ, ವಿರುದ್ಧದ ನಿಲುವೂ, ಸಾಮಾಜಿಕ, ರಾಜಕೀಯ, ಆರ್ಥಿಕ ಸಂಗತಿಗಳ ಒಳತಲ್ಲಣಗಳು ಇದರಿಂದ ಅರಿಯಬಹುದು. ಸಾಂಸ್ಕೃತಿಕ, ಸಾಹಿತ್ಯಕ ವಾಗ್ವಾದಗಳನ್ನು ಮಂಡಿಸಬಹುದೆಂಬ ನಿಲುವೂ ಇವುಗಳ ಹಿಂದೆ ಇದ್ದಂತೆ ತೋರುತ್ತದೆ. ಈ ಹಿನ್ನೆಲೆಯಲ್ಲಿ ಪ್ರಸ್ತುತ ಅಧ್ಯಯನವು ಕನ್ನಡ ಸಾಹಿತ್ಯ ಪ್ರಕಾರಗಳಲ್ಲಿ ಒಂದಾದ 'ತತ್ವಪದ ಸಾಹಿತ್ಯ ಅಧ್ಯಯನಗಳ ಕುರಿತ ನಡೆಯನ್ನು ಸಮೀಕ್ಷಿಸುವುದಾಗಿದೆ.

## ೧.೨. ಅಧ್ಯಯನದ ಉದ್ದೇಶ ಮತ್ತು ಮಹತ್ವ

ಕನ್ನಡ ಸಾಹಿತ್ಯದಲ್ಲಿ ಒಂದು ವಿಶಿಷ್ಟ ಪ್ರಕಾರವಾದ 'ತತ್ವಪದ ಸಾಹಿತ್ಯ'ವು ಅನುಭಾವ ಪ್ರಧಾನ ಸಾಹಿತ್ಯವಾಗಿದೆ. ಇದು ವಚನ, ದಾಸ ಸಾಹಿತ್ಯಕ್ಕಿಂತಲೂ ಭಿನ್ನವಾಗಿದೆ. ಕಾಲದ ಒತ್ತಡಗಳಿಂದ ಸೃಷ್ಟಿಯಾದ ತತ್ವಪದಗಳು ರಾಜಕೀಯ ಅರಾಜಕತೆಗೆ ಸಾಮಾಜಿಕ ಸಂಕಷ್ಟಗಳಿಗೆ, ಕೌಟುಂಬಿಕ ವಿಘಟನೆಗೆ, ಜಾತಿಯ ಅಸಮಾನತೆಗೆ ತೀವ್ರವಾಗಿ ಪ್ರತಿಭಟಿಸಿವೆ. ಹೊಂದಿಕೊಂಡು ಬದುಕಲಾರದ, ಬಿಟ್ಟು ಇರಲಾರದ ಇಕ್ಕಟ್ಟಿನಲ್ಲಿ ಅಭಿವ್ಯಕ್ತಗೊಂಡಿವೆ. ಇಂಥ ಸಂದಿಗ್ಧತೆಯಲ್ಲಿ ಸೃಷ್ಟಿಯಾದ ತತ್ವಪದಗಳಲ್ಲಿ ವೈವಿಧ್ಯತೆಯನ್ನು ಕಾಣಬಹುದು. ಈ ವೈವಿಧ್ಯತೆಯಿಂದ ಕೂಡಿದ ತತ್ವಪದಗಳ ಅಧ್ಯಯನಗಳು ಹಲವು ನೆಲೆಯಲ್ಲಿ ನಡೆದಿವೆ.

ಅಧ್ಯಯನಗಳಲ್ಲಿ ತತ್ವಪದಗಳ ಮೇಲೆ ವಚನಕಾರರ ಪ್ರಭಾವವಿದೆ ಎಂದು ಈ ರಚನೆಗಳನ್ನು ೧೨ನೆಯ ಶತಮಾನದಿಂದಲೇ ಗುರುತಿಸಲಾಗುತ್ತಿದೆ. ಅವಕ್ಕೆ ಸ್ವರವಚನಗಳೆಂದೂ ಕರೆಯಲಾಗಿದೆ. ಶರಣರ ರಚನೆಗಳನ್ನು ನಾವು 'ವಚನಗಳು' ಎಂದು ಕರೆಯುತ್ತೇವೆ. ಆದರೆ ತತ್ವಪದಗಳು ಬೆಡಗಿನಿಂದ ಕೂಡಿದ ಕೆಲವು ವಚನಗಳನ್ನು ಹೋಲುತ್ತವೆ. ಹೀಗೆಯೇ ದಾಸರ ಕೆಲವು ರಚನೆಗಳು ಇವೆ. ಆದರೆ ದಾಸರ ರಚನೆಗಳನ್ನು ಕೀರ್ತನೆಗಳು ಎಂದು ಕರೆಯಲಾಗಿದೆ. ಇವುಗಳಲ್ಲಿಯೂ ತತ್ವಪದಗಳನ್ನು ಹೋಲುವ ರಚನೆಗಳು ಇವೆ. ಈ ದೃಷ್ಟಿಯಿಂದ ೧೨ನೆಯ ಶತಮಾನದ ಶರಣರ ನಂತರ ಅವರ ಪರಂಪರೆ ಮುಂದಿನ ಅನುಭಾವಿಗಳು, ತತ್ವಪದಕಾರರಲ್ಲಿ ಬೆಳೆದು ಬಂದಿತು ಎನ್ನಲಾಗುತ್ತಿದೆ. ಒಬ್ಬ ಕವಿಯನ್ನು, ಸಂತನನ್ನು ನಾವು ಎಷ್ಟೇ ಕ್ರಾಂತಿಕಾರಿ ಎಂದು, ಯುಗಪ್ರವರ್ತಕನೆಂದು ಕರೆದರೂ, ಆತ ತನಗಿಂತ ಹಿಂದಿನ ಪರಂಪರೆಯ ಮುಂದುವರಿಕೆಯಾಗಿಯೇ ರೂಪುಗೊಳ್ಳುತ್ತಾನೆ. 'ಒಬ್ಬ ಕವಿ ವರ್ತಮಾನದಲ್ಲಿ ಸಲ್ಲುವಂತಾಗುವುದು ಪರಂಪರೆಯ ಅರಿವಿನಿಂದಲೇ. ಈ ಅರ್ಥದಲ್ಲಿಯೇ ಸಂಪೂರ್ಣ ಸ್ವೋಪಜ್ಞತೆ ಎನ್ನುವುದು ಸಾಹಿತ್ಯದಲ್ಲಿ ಸಾಧ್ಯವಿಲ್ಲ ಎನ್ನುವುದು. ಪರಂಪರೆಯ ಪ್ರಭಾವಮುದ್ರೆಯಿಂದ ಸಂಪೂರ್ಣ ಬಚಾವಾಗಿ ತನ್ನದೇ ಮಾರ್ಗವನ್ನು ನಿರ್ಮಾಣ ಮಾಡಿದ್ದೇನೆಂದು ಹೇಳುವ ಒಬ್ಬ ಪ್ರಧಾನ ಕವಿ (Major poet) ಕೂಡ ಪರಂಪರೆಯ ಋಣದಿಂದ ತಪ್ಪಿಸಿಕೊಳ್ಳಲಾಗುವುದಿಲ್ಲ' (ಆರ್.ಪಿ.ಹೆಗಡೆ : ೧೯೯೭, ಪು.೧೩೦). ಈ ಮಾತು ನಿಜ. ಹಾಗೆ ನೋಡಿದರೆ ಕನ್ನಡ ಸಾಹಿತ್ಯ ಪರಂಪರೆಯಲ್ಲಿ ಒಬ್ಬರ ಪ್ರಭಾವ ಮತ್ತೊಬ್ಬರ ಮೇಲೆ ಆಗಿರುವುದು ಸಹಜವಾಗಿ ಕಂಡುಬರುತ್ತದೆ. 'ಕವಿರಾಜಮಾರ್ಗ' ಬರೆದ ಶ್ರೀವಿಜಯನ ಮೇಲೆ ದಂಡಿಯ 'ಕಾವ್ಯಾದರ್ಶ' ಎಂಬ ಸಂಸ್ಕೃತ ಕೃತಿಯ ಪ್ರಭಾವ, ೧೦ನೇ ಶತಮಾನದ ಕವಿಗಳ ಮೇಲೆ (ಪಂಪ, ಮೊದಲಾದವರು) ಅಸಗ, ಗುಣನಂದಿ, ಗುಣವರ್ಮ ಮುಂತಾದವರ ಪ್ರಭಾವವಿದೆ. ೧೨ನೆಯ ಶತಮಾನದ 'ವಚನ ಮತ್ತು ಚಂಪೂ ಸಾಹಿತಿಗಳ ವಸ್ತು, ಭಾಷೆ, ಶೈಲಿ, ಧೋರಣೆಗಳಲ್ಲಿ ಸಂಬಂಧವಿಲ್ಲದಂತೆ ತೋರಿದರೂ ವಚನಕಾರರು ತಮಗಿಂತ ಹಿಂದಿನ ಸಾಹಿತ್ಯವನ್ನು ಓದಿ ಅದರ ಪ್ರಭಾವದಿಂದ ಸಂಪೂರ್ಣ ಮುಕ್ತರಾಗಿ ತಮ್ಮ ಕೃತಿಗಳನ್ನು ರಚಿಸಿದರೆಂದು ತಿಳಿಯಬೇಕೆ ಹೊರತು ಅವರು ಜೈನ ಸಾಹಿತ್ಯವನ್ನೇ ಅಭ್ಯಸಿಸಿರಲಿಲ್ಲವೆಂದು ತಿಳಿಯುವುದು ತಪ್ಪಾಗುತ್ತದೆ. ಬಸವಣ್ಣನ ಕೆಲವು ವಚನಗಳಲ್ಲಿ ನಯಸೇನನ (ಕ್ರಿ.ಶ.೧೧೧೨) 'ಧರ್ಮಾಮೃತ'ದ ಪ್ರಭಾವವನ್ನು ಕಾಣಬಹುದು.'(ಉಲ್ಲೇಖ: ಜಿ.ನಾರಾಯಣಸ್ವಾಮಿ, ೨೦೦೮, ಪು.೩). ಹೀಗಿಯೇ ತಮಿಳುನಾಡಿನ ನಾಯನಾರರು, ಹಿರಿಯ ಸಮಕಾಲೀನರಾದ ಜೇಡರ ದಾಸಿಮಯ್ಯ ಮೊದಲಾದವರ ಪ್ರಭಾವ ವಚನಕಾರರ ಮೇಲೂ ಆಗಿದೆ. ಮುಂದಿನ ಹರಿಹರ, ರಾಘವಾಂಕ ಮೊದಲಾದವರ ಮೇಲೆ ವಚನಕಾರರ (ಬಸವಣ್ಣನ) ಪ್ರಭಾವ ಆದ ಹಾಗೆ ತತ್ವಪದಕಾರರ ಮೇಲೂ ಆಗಿದೆ. ಇಲ್ಲಿ ಬಸವಣ್ಣನವರ ಉದಾರ ಮಾನವೀಯತೆಗೆ, ವೀರಶೈವ (ಲಿಂಗಾಯತ) ಧರ್ಮದ ಪ್ರಭಾವಕ್ಕೆ ಒಲಿದವರೂ ಇದ್ದಾರೆ. ಹಾಗೆಯ ಸ್ಥಾಪಿತ ವ್ಯವಸ್ಥೆಯನ್ನು ದಿಕ್ಕರಿಸುವ ಅಲ್ಲಮನ, ಸೂಫಿಗಳ ಪ್ರಭಾವಕ್ಕೂ ಒಳಗಾಗಿದ್ದಾರೆ. ಆಧುನಿಕ ಸಾಹಿತ್ಯ ಸಂದರ್ಭದಲ್ಲಿ

ಮಧುರಚೆನ್ನ, ಬೇಂದ್ರೆಯವರಿಗೆ ತತ್ವಪದಗಳ ಅನುಭಾವ, ದೇಸಿ ನುಡಿಗಟ್ಟಿನ ಪ್ರಭಾವವಿದ್ದಂತೆ ತೋರುತ್ತದೆ. ಕುವೆಂಪು, ಬಿ.ಎಂ.ಶ್ರೀ., ಅಡಿಗ ಮೊದಲಾದವರಿಗೆ ಪಾಶ್ಚಾತ್ಯ ಸಾಹಿತ್ಯದ ಪ್ರಭಾವವಿದೆ. ಕಡಕೋಳ ಮಡಿವಾಳಪ್ಪ ದುಷ್ಟರನ್ನು ತರಾಟೆಗೆ ತೆಗೆದುಕೊಂಡ, "ದಡ್ಡ ಸೂಳೆಮಕ್ಕಳಿವರಣ್ಣ.., ಮಂಡಮೂಳರು ಕೂಡಿ..." ಅನ್ನುವ ರಚನೆಗಳು, ಸಮಾಜಕ್ಕೆ ಕೇಡು ಮಾಡುವವರನ್ನು "ಕೆರ ಹರಿಯುವತನಕ ಹೊಡೆಯಬೇಕು" ಎನ್ನುವುದು ಇವೆಲ್ಲ ದಲಿತಕವಿ ಸಿದ್ಧಲಿಂಗಯ್ಯನವರ ರಚನೆಗಳವರೆಗೂ ಬಂದು ನಿಲ್ಲುತ್ತವೆ.

ಹೀಗೆ ಪ್ರಭಾವ ಎನ್ನುವುದು ಪರಂಪರೆಯಿಂದ ಬಂದ ಸಂಗತಿಯಾಗಿದೆ. ಈ ಪರಸ್ಪರ ಪ್ರಭಾವ ಅವರಲ್ಲಿ ಹೊಸ ಸಾಹಿತ್ಯವನ್ನು ಹುಟ್ಟು ಹಾಕಲಿಲ್ಲವೆ? ಈ ಅನುಸಂಧಾನದ ಮೂಲಕ ಭಿನ್ನವಾದದ್ದನ್ನು ಅವರು ಸೃಷ್ಟಿಸಲಿಲ್ಲವೆ? ಎನ್ನುವುದು ಅಧ್ಯಯನಗಳಲ್ಲಿ ಕೇಳಿಕೊಳ್ಳಬೇಕಾದ ಪ್ರಶ್ನೆಯಾಗಿದೆ. ಈ ಅಧ್ಯಯನಕ್ಕಿರುವ ಕೆಲವು ಉದ್ದೇಶಗಳನ್ನು ಈ ಕೆಳಗಿನಂತೆ ಪಟ್ಟಿ ಮಾಡಬಹುದು.

ಒಂದು : ತತ್ವಪದಕಾರರ ಮೇಲೆ ವಚನಕಾರರ ಪ್ರಭಾವವಾದರೂ ತಮ್ಮದೇ ಆದ ಅಭಿವ್ಯಕ್ತಿ ಕ್ರಿಯೆಯಿಂದ, ಆಶಯಗಳಿಂದ ತತ್ವಪದಕಾರರು ಭಿನ್ನರಾಗಿ ಉಳಿಯುತ್ತಾರೆ. ಇದನ್ನು ತತ್ವಪದಗಳು ರೂಪುಗೊಂಡ ಚಾರಿತ್ರಿಕ, ಸಾಂಸ್ಕೃತಿಕ ಸಂದರ್ಭದ ಹಿನ್ನೆಲೆಯಿಂದ ತಿಳಿಯಬಹುದಾಗಿದೆ. ತತ್ವಪದಗಳು ಸೃಷ್ಟಿಗೊಂಡ ಕಾಲದ ಸಾಮಾಜಿಕ, ರಾಜಕೀಯ, ಆರ್ಥಿಕ ಸಂದರ್ಭಗಳನ್ನು ಅರಿಯುವುದು ತತ್ವಪದ ಅಧ್ಯಯನಗಳ ಸಮೀಕ್ಷೆಗೆ ಪೂರಕವೆಂದು ಭಾವಿಸಲಾಗಿದೆ.

ಎರಡು : ಸ್ವರವಚನ ಮತ್ತು ತತ್ವಪದ ಈ ಪರಿಭಾಷೆಯನ್ನು ಯಾಕೆ ಸೃಷ್ಟಿಮಾಡಲಾಗಿದೆ? ಈ ಸಾಹಿತ್ಯವನ್ನು ಯಾಕೆ ಬೇರೆ ಬೇರೆ ಪರಿಭಾಷೆಯ ಹಿನ್ನೆಲೆಯಲ್ಲಿ ಗುರುತಿಸಲಾಗಿದೆ? ಇದಕ್ಕೆ ಸಂಪಾದಕರ, ಅಧ್ಯಯನಕಾರರ ಮನೋಭಾವ ಕಾರಣವೇ ಈ ಮುಂತಾದ ಅಂಶಗಳನ್ನು ಪರಿಕಲ್ಪನಾತ್ಮಕವಾಗಿ ಪರಿಶೀಲಿಸುವುದು ಮುಖ್ಯವಾಗಿದೆ.

ಮೂರು : ತತ್ವಪದ ಅಧ್ಯಯನದ ದೃಷ್ಟಿಯಿಂದ ಮೊದಲ ಹಂತದಲ್ಲಿ ಅಧ್ಯಯನಕ್ಕೆ ಪೂರಕವಾದ ಆಕರಗಳ ಸಂಗ್ರಹ ಮತ್ತು ಕೃತಿಗಳ ಸಂಕಲನ ಕಾರ್ಯ ಹೆಚ್ಚಾಗಿ ೭೦ರ ದಶಕದಿಂದೀಚೆಗೆ ನಡೆದಿದೆ. ಹಸ್ತಪ್ರತಿಗಳಲ್ಲಿರುವ ಮತ್ತು ಮೌಖಿಕವಾಗಿರುವ ಹಾಡುಗಳನ್ನು ಸಂಗ್ರಹಿಸಲಾಗಿದೆ. ಅಧ್ಯಯನ ಮಾಡಿ ಪಾಠಗಳನ್ನು ನಿಷ್ಕರ್ಷಿಸಿ, ಪರಿಷ್ಕೃತ ಪ್ರತಿಗಳನ್ನು ಹೊರತರಲಾಗಿದೆ. ಇದರಿಂದಾಗಿ ಅವಕ್ಕೆ ಬೇಡವಾದ ಸಂಪಾದನೆಯ ಶಿಸ್ತು ಇವುಗಳಲ್ಲಿ ಸಹಜವಾಗಿ ಕಾಣಿಸಿಕೊಂಡಿದೆ. ಈ ಹಿನ್ನೆಲೆಯಲ್ಲಿ ತತ್ವಪದಗಳನ್ನು ಅನೇಕ ನೆಲೆಯಲ್ಲಿ ಸಂಪಾದಿಸಲಾಗಿದೆ. ತತ್ವಪದಗಳನ್ನು ವೀರಶೈವ ಮಠಗಳು 'ಸ್ವರವಚನ'ಗಳ ಹೆಸರಿನಲ್ಲಿಯೇ ಹೆಚ್ಚಾಗಿ ಪ್ರಕಟಿಸಿದ್ದಾರೆ. ಹಾಗೆಯೇ ಮಧ್ಯಕಾಲೀನ ಕನ್ನಡ ಸಾಹಿತ್ಯ ಪರಂಪರೆಯ 'ಭಕ್ತಿಯ ಹಾಡುಗಳನ್ನೆಲ್ಲ ತತ್ವಪದಗಳ ಹೆಸರಿನಲ್ಲಿ ಪ್ರಕಟಿಸಲಾಗಿದೆ. ಕರ್ನಾಟಕ ಸಾಹಿತ್ಯ ಅಕಾಡೆಮಿ,

ಕನ್ನಡ ಮತ್ತು ಸಂಸ್ಕೃತಿ ಇಲಾಖೆ ಮತ್ತು ಖಾಸಗಿ ಪ್ರಕಾಶನ ಸಂಸ್ಥೆಗಳು ತತ್ವಪದಗಳನ್ನು ಪ್ರಕಟಿಸಿವೆ. ಇವು ಧಾರ್ಮಿಕ, ಧಾರ್ಮಿಕೇತರ ಮತ್ತು ಜಾತಿಯ ಹಿನ್ನೆಲೆಯಲ್ಲಿಯೂ ಸಂಪಾದನೆಗಳು ಬಂದಿವೆ. ಇವುಗಳ ಹಿಂದಿನ ಮನೋಭಾವವನ್ನು, ಪ್ರಕಟಣೆಯ ರಾಜಕಾರಣವನ್ನು ಅರಿಯುವ ಉದ್ದೇಶ ಈ ಅಧ್ಯಯನದ್ದಾಗಿದೆ.

ಮೂಲತಃ ಮೌಖಿಕ ಹಾಡುಗಳಾದ ಈ ತತ್ವಪದಗಳು ಬಾಯಿಂದ ಬಾಯಿಗೆ ಹರಿದು ಬರುವ ಸಂದರ್ಭಗಳಲ್ಲಿ ತಮಗೆ ಇಷ್ಟವಾದ ಅಂಕಿತಗಳನ್ನು ಹಾಕಿ (ಬದಲಾಯಿಸಿ) ಹಾಡುವ ಕ್ರಮದಿಂದ ಒಬ್ಬರ ಹಾಡುಗಳು ಮತ್ತೊಬ್ಬರ ಹೆಸರಿನಲ್ಲಿ/ಹಾಡುಗಳಾಗಿ ಸೇರಿ ಹೋಗಿವೆ. ಸಂಪಾದನೆಯಲ್ಲಿನ ಈ ತೊಡಕನ್ನು ನಿವಾರಿಸಿಕೊಳ್ಳುವುದು ಮುಖ್ಯವಾಗಿದೆ.

ನಾಲ್ಕು : ಸಂಪಾದಿತ ಕೃತಿಯ ಮುನ್ನುಡಿ, ಪ್ರಸ್ತಾವನೆಯ ಬರೆಹಗಳಲ್ಲಿ ಕವಿ, ಕಾವ್ಯ, ದೇಶಾದಿ ಚರ್ಚೆಗಳು ಪರಿಚಯಾತ್ಮಕವಾಗಿ ನಡೆದಿವೆ. ಮೊದಲು ಆ ಕೃತಿಗಳ ಪರಿಚಯ ಮಾಡಿಕೊಡುವ ಉದ್ದೇಶದಿಂದ ಬರಹಗಳನ್ನು ಮಾಡಿದರು. ನಂತರದಲ್ಲಿ ಬಹುತೇಕ ಅಧ್ಯಯನಗಳು ಒಬ್ಬ ತತ್ವಪದಕಾರರನ್ನು ಅವರ ರಚನೆಗಳನ್ನು ಕುರಿತು ಅಧ್ಯಯನ ಮಾಡಲಾಗಿದೆ. ಕೆಲವು ಬರೆಹಗಳು ರಚನೆಗಳ ಸಾರವನ್ನು ಒದಗಿಸುವ ಹಂತಕ್ಕಿಂತ ಸ್ವಲ್ಪ ಮುಂದೆ ಹೋಗುತ್ತವೆ. ಆದರೂ ಗತದ ಮಾಹಿತಿಗಳನ್ನು ಹೆಕ್ಕಿ ತಂದು ಚರಿತ್ರೆಯ ಚೌಕಟ್ಟಿನಲ್ಲಿಟ್ಟು ಅಧ್ಯಯನ ಮಾಡಿವೆ. ಕವಿಗಳ ಕಾಲ ದೇಶಗಳನ್ನು ಖಚಿತಪಡಿಸಲು ಹಾತೊರೆವ ಈ ವಿಧಾನವನ್ನು ಪರಿಶೀಲಿಸುವುದು ಮುಖ್ಯವಾಗಿದೆ.

ಐದು : ಸಾಂಸ್ಕೃತಿಕ, ಪ್ರಾದೇಶಿಕ ಅನನ್ಯತೆಯನ್ನು ಅರಿಯಲು ಕೆಲವು ಅಧ್ಯಯನಗಳು ಜಿಲ್ಲೆಗೆ, ಪ್ರದೇಶಕ್ಕೆ, ಜಾತಿಗೆ ನಿಷ್ಠವಾಗಿ ನಡೆದಿವೆ. ಅಲ್ಲದೆ ಈ ನೆಲೆಯಲ್ಲಿ ಬಿಡಿ ಲೇಖನಗಳು ಚರ್ಚಿಸಿವೆ. ಬೇರೆ ಭಾಷೆಯ, ಪ್ರದೇಶದ ಸಂತರ ಜೊತೆ ಹೋಲಿಸಿದ ತೌಲನಿಕ ಅಧ್ಯಯನವೂ ನಡೆದಿದೆ.

ಪ್ರಶ್ನೆಯೆಂದರೆ ಹೀಗೆ ತತ್ವಪದಕಾರರನ್ನು/ರಚನೆಗಳನ್ನು ಕಾಲದ ಚೌಕಟ್ಟಿನಲ್ಲಿ, ಜಾತಿಯ ನೆಲೆಯಲ್ಲಿ, ಪ್ರಾದೇಶಿಕವಾಗಿ ಏಕಮುಖಿ ನೆಲೆಯಲ್ಲಿ ಬಂಧಿಸಿ, ಮಾಡುವ ಅಧ್ಯಯನ ಕ್ರಮಗಳಿಂದ ಪಡೆಯುವ ಫಲಿತಗಳು ಬೇರೆ ಬೇರೆಯಾಗಿರುತ್ತವೆ. ಸಂತರ ಆಚರಣಾತ್ಮಕ ನೆಲೆಯ ಮೂಲಕ ಬಹುಶಿಸ್ತೀಯ ಅಧ್ಯಯನದಲ್ಲಿ ಪಡೆವ ಫಲಿತಗಳು ಬೇರೆಯಾಗಿರುತ್ತವೆ. ತತ್ವಪದಕಾರರ ವೃತ್ತಿ, ಕಸುಬುಗಳ ಹಿನ್ನೆಲೆಯಲ್ಲಿ ಅಧ್ಯಯನ ಮಾಡಿದರೆ ಸಿಗುವ ಫಲಿತಗಳು ಬೇರೆ. 'ಧಾರ್ಮಿಕ ಪರಿಭಾಷೆ'ಯ ಪರಸ್ಪರ ಪ್ರಭಾಗಳ ಮೂಲಕ ಸಾಮರಸ್ಯವಾದಿ ನಿಲುವಿನಿಂದ ಪಡೆದುಕೊಳ್ಳುವ ಅಧ್ಯಯನದ ಫಲಿತಗಳು ಬೇರೆ. ಹಾಗೆಯೇ ಬೇರೆ ಭಾಷೆಯ ಸಂತರ ಜೊತೆ ಹೋಲಿಸಿ ಮಾಡುವ ತೌಲನಿಕ ಅಧ್ಯಯನಗಳಿಂದ ಪಡೆವ ಫಲಿತಗಳು ಬೇರೆ. ಒಂದೇ ಭಾಷೆ ಒಬ್ಬ ತತ್ವಪದಕಾರನನ್ನು ಮತ್ತೊಬ್ಬ ತತ್ವಪದಕಾರನ ಜೊತೆ ಹೋಲಿಸಿ ಮಾಡುವ ತೌಲನಿಕ ಅಧ್ಯಯನದ ಫಲಿತಗಳು ಬೇರೆಯಾಗಿರುತ್ತವೆ. ಹೀಗಾಗಿ ಈ ಅಧ್ಯಯನ

ಗಳು ಅನುಭಾವಿಗಳನ್ನು ಕುಸ್ತಿಪಟುಗಳಂತೆ ಮುಖಾಮುಖಿಗೊಳಿಸಿವೆಯೇ? ಅಥವಾ ಕೇವಲ ಧಾರ್ಮಿಕ, ಸಮಾನಾಂಶಗಳ ಕೊಡು-ಕೊಳುವಿಕೆಯ, ತುಲನಾತ್ಮಕ ಗುರುತಿಸುವಿಕೆಗೇ ವಿರಮಿಸಿವೆಯೆ? ಈ ಮುಂತಾದ ಅಂಶಗಳು ತಿಳಿಯುವುದು ಕುತೂಹಲವಾದುದು.

ಆರು : ಈ ಹಿನ್ನೆಲೆಯಲ್ಲಿ ತತ್ವಪದ ಅಧ್ಯಯನಗಳು ಯಾವ ಸ್ವರೂಪವನ್ನು ಪಡೆದುಕೊಂಡಿವೆ ಎಂಬುದನ್ನು ಸಮೀಕ್ಷಿಸುವುದು ಅವಶ್ಯಕವಾಗಿದೆ. ಯಾಕೆಂದರೆ ಆಯಾ ಅವಧಿಯಲ್ಲಿನ ಚಿಂತನೆಗಳಿಗೆ ಅನುಗುಣವಾಗಿ ಅಧ್ಯಯನಗಳು ನಡೆದಿವೆಯೇ? ಅನ್ಯಜ್ಞಾನ ಶಿಸ್ತುಗಳಿಗೆ ಒಳಗಾಗಿ ವಿವಿಧ ಆಯಾಮಗಳನ್ನು ಅವು ಪಡೆದುಕೊಂಡಿವೆಯೇ? ಈವರೆಗೆ ನಡೆದ ತತ್ವಪದ ಅಧ್ಯಯನಗಳ ಹಾದಿ ಯಾವುದು? ಈ ಮುಂತಾದವುಗಳನ್ನು ಅರ್ಥ ಮಾಡಿಕೊಳ್ಳುವುದರ ಜೊತೆಗೆ ಅದು ಮುಂದೆ ಸಾಗಬೇಕಾದ ದಾರಿ ಯಾವುದು? ಎಂದು ಶೋಧಿಸುವ ಅಗತ್ಯವಿದೆ.

ತತ್ವಪದಗಳ ಅಧ್ಯಯನವೆಂದರೆ ಕೇವಲ ವಿಮರ್ಶೆಗಾಗಿ ಹುಟ್ಟುವ ನಿರ್ಜೀವ ಕ್ರಿಯೆಯಲ್ಲ. ಅವು ಜನಸಮುದಾಯಗಳಲ್ಲಿ ಭಜನೆಗಳ ಮೂಲಕ ಹವ್ಯಾಸಿ ಹಾಡುಗಾರರ ಮೂಲಕ ಜೀವಂತವಾಗಿವೆ. ಮೌಖಿಕವಾಗಿ ಪ್ರಚಾರವಾಗುತ್ತಾ ಆಧ್ಯಾತ್ಮಿಕ ನೆಲೆಯನ್ನು, ಮಾನಸಿಕ ನೆಮ್ಮದಿಯನ್ನು ಸೃಷ್ಟಿಸಿವೆ. ಅಧ್ಯಯನಗಳು ಈ ನೆಲೆಯನ್ನು ತಲುಪಿವೆಯೇ? ಯಾಕೆಂದರೆ ಈ ಹೊತ್ತಿಗೂ ನಡೆವ ಕರ್ನಾಟಕದ ಅನೇಕ ಭಾಗಗಳ ತತ್ವಪದಕಾರರ, ಸಂತರ, ಜಾತ್ರೆ, ಉರುಸು, ಹಬ್ಬ, ಆಚರಣೆಗಳು, ಜನಸಮುದಾಯಗಳ ಬದುಕಿನಲ್ಲಿ ಬೆರೆತುಹೋಗಿವೆ. ಸಾಂಸ್ಕೃತಿಕ ಮಹತ್ವವನ್ನು ಪಡೆದಿವೆ. ಇವುಗಳ ಗ್ರಹಿಕೆಯಲ್ಲಿ ಇಂದಿನ ನಮ್ಮ ಬದುಕಿಗೆ ಅವು ಒದಗಿಸುವ ಸಾಂಗತ್ಯ ಸಹಾಯಕವಾಗಬಹುದು. ಈ ಸಂಬಂಧಗಳ ಸ್ವರೂಪ, ಸಂಕೀರ್ಣತೆಗಳನ್ನು ಗಮನದಲ್ಲಿಟ್ಟುಕೊಂಡು ಗ್ರಹಿಸಲು ಪ್ರಯತ್ನಿಸಲಾಗಿದೆ.

ಇಂತಹ ಒಂದು ಸ್ಪಷ್ಟ ನಿಲುವನ್ನು ಹೊಂದಲು ಇದುವರೆಗೂ ನಡೆದು ಬಂದ ಅಧ್ಯಯನಗಳನ್ನು ಸಮೀಕ್ಷಿಸಿ ಅಲ್ಲಿನ ವಿಧಿ-ವಿಧಾನಗಳ ಸ್ವರೂಪ ಎಂತಹದು ಎಂದು ಗುರುತಿಸಿಕೊಳ್ಳಬೇಕಾದ ಅಗತ್ಯವಿದೆ. ಈ ಹಿನ್ನೆಲೆಯಲ್ಲಿ ಈ ಅಧ್ಯಯನ ಮಹತ್ವದ್ದಾಗಿದೆ.

### ೧.೩. ಅಧ್ಯಯನದ ವಿಧಾನ

ಯಾವುದೇ ಅಧ್ಯಯನವು ತನ್ನದೇ ಆದ ವಿಧಾನವೊಂದನ್ನು ಸೃಷ್ಟಿಸಿಕೊಂಡಿರುತ್ತದೆ. ಯಾಕೆಂದರೆ ನಾವು ತೆಗೆದುಕೊಳ್ಳುವ ಯಾವುದೇ ವಿಷಯಕ್ಕೆ ಅಧ್ಯಯನ ವಿಧಾನಗಳು ಹಾಗೆ ಸಿದ್ಧರೂಪದಲ್ಲಿ ಇರುವುದಿಲ್ಲ. ಅದು ಅಧ್ಯಯನದಲ್ಲಿ ತಂತಾನೆ ರೂಪಗೊಳ್ಳುವ ಪ್ರಕ್ರಿಯೆ. ಹಾಗೊಂದು ವೇಳೆ ಸಿದ್ಧಮಾದರಿಯ ಅಧ್ಯಯನ ವಿಧಾನವನ್ನು ಅನುಸರಿಸಿದರೆ ಅಧ್ಯಯನದಲ್ಲಿ ನಮ್ಮ ದೃಷ್ಟಿಕೋನದ ಸ್ವಂತಿಕೆ ಕಳೆದುಕೊಳ್ಳುವ ಅಪಾಯವಿದೆ. ಕೆಲವೊಮ್ಮೆ ಅಧ್ಯಯನಕ್ಕೆ ಆಯ್ದುಕೊಂಡ ವಿಷಯಗಳೇ

(ಪಠ್ಯಗಳೇ) ನೋಡುವ ಕ್ರಮಗಳನ್ನು ತೋರಿಸುತ್ತಿರುತ್ತವೆ. ಕನ್ನಡದಲ್ಲಿ ಅಧ್ಯಯನಗಳ ಅಧ್ಯಯನ ಮಾಡುವುದಕ್ಕೆ ಈಗಾಗಲೇ ಸಂಗ್ರಹ ಮಾದರಿ, ಸಮೀಕ್ಷಾ ಮಾದರಿ, ವಿಶ್ಲೇಷಣಾ ಮಾದರಿ, ತೌಲನಿಕ ಮಾದರಿಗಳು ಇವೆ. ವಿಮರ್ಶಾ ಪರಿಕರಗಳನ್ನಿಟ್ಟುಕೊಂಡು ನೋಡುವ ಅಧ್ಯಯನ ವಿಧಾನ ಈಗಾಗಲೇ ಜನಪ್ರಿಯವಾಗಿದೆ. ಆದರೆ ಪ್ರಸ್ತುತ ಅಧ್ಯಯನದಲ್ಲಿ ಈ ಕೆಳಗಿನ ವಿಧಾನಗಳನ್ನು ಅನುಸರಿಸಲಾಗಿದೆ.

೧. ಈಗಾಗಲೇ ನಡೆದ ತತ್ವಪದಗಳ ಅಧ್ಯಯನಗಳನ್ನು ವಿಮರ್ಶಾತ್ಮಕವಾಗಿ ಸಮೀಕ್ಷಿಸುವುದು ಇಲ್ಲಿನ ಆಶಯವಾಗಿದೆ. ಒಂದರ್ಥದಲ್ಲಿ ತತ್ವಪದ ಅಧ್ಯಯನಗಳ ನೆಲೆಯನ್ನು ಶೋಧಿಸುವುದು ಎಂದು ಸ್ಥೂಲವಾಗಿ ಹೇಳಬಹುದು. ಈ ನಿಬಂಧದೊಳಗೆ ವ್ಯಕ್ತವಾಗಿರುವ ವಿವರಗಳನ್ನಿಟ್ಟುಕೊಂಡು ಅಧ್ಯಯನ ವಿಧಾನವನ್ನು ಕಟ್ಟಿಕೊಳ್ಳಲಾಗಿದೆ. ನಡೆದ ಅಧ್ಯಯನಗಳ ತಾತ್ವಿಕತೆಯನ್ನು ಹುಡುಕುವುದಕ್ಕೆ ಪೂರಕವಾಗಿ ತತ್ವಪದಗಳು ರಚನೆಗೊಂಡ ಚಾರಿತ್ರಿಕ ಸಂದರ್ಭವನ್ನು ಅರಿಯುವ ಪ್ರಯತ್ನ ಮಾಡಲಾಗಿದೆ.

೨. ನಡೆದ ಅಧ್ಯಯನಗಳನ್ನು ಸಮಗ್ರವಾಗಿ ನಿರ್ವಚಿಸಿಕೊಳ್ಳುವ ಸಂದರ್ಭದಲ್ಲಿ ಅದರ ಭಿನ್ನ ನೆಲೆಗಳನ್ನು ಹೀಗೆ ಗುರುತಿಸಿಕೊಳ್ಳಲಾಗಿದೆ. ಪಠ್ಯಗಳ ಸಂಪಾದನೆಯ ತಾತ್ವಿಕತೆಗಳು, ತೊಡಕುಗಳು, ಸ್ವರವಚನ, ತತ್ವಪದಗಳ ಪರಿಕಲ್ಪನೆಯ ಚರ್ಚೆಗಳು, ತತ್ವಪದ ಕುರಿತು ನಡೆದ ಅಧ್ಯಯನಗಳು, ಇವುಗಳನ್ನು ಸಮೀಕ್ಷಿಸುವಾಗ ಮುಖ್ಯವಾಗಿ ಚಾರಿತ್ರಿಕ ವಿಧಾನವನ್ನು ಅನುಸರಿಸಲಾಗಿದೆ.

೩. ತತ್ವಪದ ಅಧ್ಯಯನಗಳಲ್ಲಿ ಪ್ರಮುಖವೆನಿಸುವ ಮಹಾಪ್ರಬಂಧಗಳನ್ನು, ಅಧ್ಯಯನ ಕೃತಿಗಳನ್ನು, ಲೇಖನಗಳನ್ನು ಸೂಕ್ಷ್ಮ ವಿಶ್ಲೇಷಣೆಗೆ ಒಳಪಡಿಸಲಾಗಿದೆ. ಬಹುತೇಕ ಈ ಅಧ್ಯಯನಗಳು ಏಕಮುಖಿ ನೆಲೆಯಲ್ಲಿ ಚಿಂತಿಸಿವೆ. ಅವು ಬಿಟ್ಟಿರುವ, ಒಳಗೇ ಇರುವ ವೈರುಧ್ಯಗಳ ಜೊತೆಗಿಟ್ಟು ಬಹುಮುಖಿ ನೆಲೆಯಲ್ಲಿ ಶೋಧಿಸುವ ಪ್ರಯತ್ನ ಮಾಡಲಾಗಿದೆ. ಇದಕ್ಕೆ ಪೂರಕವಾದ ಚಿಂತನೆಗಳನ್ನು ಬಳಸಿಕೊಳ್ಳಲಾಗಿದೆ.

೪. ಈ ಅಧ್ಯಯನದ ಸಮೀಕ್ಷೆಯಲ್ಲಿ ಕೆಲವು ಅಧ್ಯಾಯಗಳಲ್ಲಿ ಅಧ್ಯಯನ ಕುರಿತ ವಿಶ್ಲೇಷಣೆಯು ಪುನರಾವರ್ತನೆಯಾದಂತೆ ಅನಿಸುತ್ತದೆ. ಆದರೆ ಸಾಧ್ಯವಾದಷ್ಟು ಇದನ್ನು ಮೀರಲು ಈ ಅಧ್ಯಯನದಲ್ಲಿ ಪ್ರಯತ್ನಿಸಲಾಗಿದೆ.

೫. ಇಲ್ಲಿನ ಸಮೀಕ್ಷಾ ಮಾದರಿಯಲ್ಲಿ ಪ್ರಮುಖ ಅಧ್ಯಯನಗಳನ್ನು ಗಮನಿಸಿ ವಿಮರ್ಶೆಗೆ, ಪರಿಚಯಕ್ಕೆ, ಆಗಿರುವುದಕ್ಕೆ, ಆಗಬೇಕಾಗಿರುವುದಕ್ಕೆ ಲಕ್ಷ್ಯವನ್ನು ಕೊಡಲಾಗಿದೆ.

೬. ಇಲ್ಲಿ ತತ್ವಪದ ಅಧ್ಯಯನಗಳೆಂದಿದ್ದರೂ, ಬಹುತೇಕ ಅಧ್ಯಯನಗಳು ತತ್ವಪದಕಾರರ ಹೆಸರಿನಲ್ಲಿ ನಡೆದಿವೆ. ಹೀಗಾಗಿ ತತ್ವಪದಕಾರರ ಕುರಿತ ಚರ್ಚೆ ತತ್ವಪದಗಳ ಕುರಿತ ಚರ್ಚೆಯೇ ಆಗಿರುತ್ತದೆ. ಆದ್ದರಿಂದ ತತ್ವಪದ ಮತ್ತು ತತ್ವಪದಕಾರರು ಅಭಿನ್ನವೆಂದು ಭಾವಿಸಿ ವಿಶ್ಲೇಷಣೆ ಮಾಡಲಾಗಿದೆ.

೭. ಅನುಬಂಧದಲ್ಲಿ ತತ್ವಪದಗಳ ಅಧ್ಯಯನ ಕುರಿತ ಪ್ರಶ್ನಾವಳಿ ವಿಶ್ಲೇಷಣೆಗೆ ಕ್ಷೇತ್ರಕಾರ್ಯ ಕೈಗೊಂಡು ಉತ್ತರಗಳನ್ನು ಪಡೆಯಲಾಗಿದೆ. ಪಡೆದ ಉತ್ತರಗಳನ್ನು ಆದ್ಯತಾನುಕ್ರಮದಲ್ಲಿ ವಿಶ್ಲೇಷಿಸಿ, ವ್ಯಾಖ್ಯಾನಿಸಲಾಗಿದೆ.

## ೧.೪. ಅಧ್ಯಯನದ ವ್ಯಾಪ್ತಿ ಮತ್ತು ಸ್ವರೂಪ

ಕನ್ನಡದಲ್ಲಿ ತತ್ವಪದ ಸಾಹಿತ್ಯದ ಅಂಗವಾಗಿ ಬಂದಿರುವ ಸಂಪಾದನೆಗಳು, ಅವುಗಳ ಮುನ್ನುಡಿಯ ರೂಪದ ಬರೆಹಗಳು, ಪ್ರಸ್ತಾವನೆಗಳು, ಪಿಎಚ್.ಡಿ.ಮಹಾಪ್ರಬಂಧಗಳು, ಸ್ವತಂತ್ರ ಅಧ್ಯಯನ ಕೃತಿಗಳು, ವಿಮರ್ಶಾಲೇಖನಗಳನ್ನು ಗಮನಿಸಿ, ತತ್ವಪದ ಸಾಹಿತ್ಯ ಅಧ್ಯಯನದಲ್ಲಿ ಬಳಸಲಾಗಿರುವ ವಿಧಾನಗಳನ್ನು ಸಮೀಕ್ಷಿಸುವುದು ಈ ಅಧ್ಯಯನದ ವ್ಯಾಪ್ತಿಯಾಗಿದೆ

### ಅಧ್ಯಯನದ ಸ್ವರೂಪ

ತತ್ವಪದ ಸಾಹಿತ್ಯ ಅಧ್ಯಯನಗಳು ಹಲವು ಹಾದಿಯಲ್ಲಿ ಪಯಣಿಸಿವೆ. ಪಡೆದ ಫಲಿತಗಳು ಸಹಜವಾಗಿಯೇ ಭಿನ್ನವಾಗಿವೆ. ನಡೆದ ಅಧ್ಯಯನಗಳನ್ನು ಐದು ಅಧ್ಯಾಯಗಳಲ್ಲಿ ಅಭ್ಯಸಿಸುವುದು ಆ ಮೂಲಕ ಫಲಿತಗಳನ್ನು ಕಂಡುಕೊಳ್ಳುವುದು ಈ ಅಧ್ಯಯನದ ಸ್ಥೂಲ ಸ್ವರೂಪವಾಗಿದೆ. ಪ್ರಸ್ತುತ ಅಧ್ಯಯನವು ಐದು ಅಧ್ಯಾಯಗಳಲ್ಲಿ ಅರಳಿಕೊಂಡಿದೆ. ಅವುಗಳ ವಿವರ ಹೀಗಿದೆ.

**ಅಧ್ಯಾಯ ಒಂದರಲ್ಲಿ** ಅಧ್ಯಯನದ ಉದ್ದೇಶ, ಮಹತ್ವ, ಅಧ್ಯಯನದ ವಿಧಾನ, ವ್ಯಾಪ್ತಿ ಮತ್ತು ಸ್ವರೂಪ ಇವಿಷ್ಟು ಇವೆ. ಈ ಅಧ್ಯಾಯವು ಶೋಧನೆಯ ತಾತ್ವಿಕ ನೆಲೆಯನ್ನು ಕುರಿತು ಚರ್ಚಿಸುತ್ತದೆ. ಪ್ರಸ್ತುತ ಅಧ್ಯಯನದ ಶಕ್ತಿ ಮತ್ತು ಮಿತಿಗಳನ್ನು ಇದು ವಿವರಿಸುತ್ತದೆ.

**ಅಧ್ಯಾಯ ಎರಡರಲ್ಲಿ** ತತ್ವಪದಗಳು ರೂಪುಗೊಂಡ ಚಾರಿತ್ರಿಕ ಮತ್ತು ಸಾಂಸ್ಕೃತಿಕ ಸಂದರ್ಭವನ್ನು ವಿವರಿಸಲಾಗಿದೆ. ತತ್ವಪದಗಳು ಸೃಷ್ಟಿಗೊಂಡ ಕಾಲದ ಚಾರಿತ್ರಿಕ ಸಾಮಾಜಿಕ, ರಾಜಕೀಯ, ಆರ್ಥಿಕ ಸಂದರ್ಭಗಳನ್ನು ಅರಿಯುವುದು ತತ್ವಪದ ಅಧ್ಯಯನಗಳ ಸಮೀಕ್ಷೆಗೆ ಪೂರಕವೆಂದು ಭಾವಿಸಲಾಗಿದೆ. ಇದರಿಂದ ಸಮೀಕ್ಷೆಗೆ ಬೇಕಾದ ತಾತ್ವಿಕ ಭೂಮಿಕೆಯನ್ನು ಕಂಡುಕೊಳ್ಳಲಾಗಿದೆ.

**ಅಧ್ಯಾಯ ಮೂರರಲ್ಲಿ** ಸ್ವರವಚನ ಮತ್ತು ತತ್ವಪದಗಳ ಕುರಿತ ಅಧ್ಯಯನಗಳ ಪರಿಕಲ್ಪನಾತ್ಮಕ ಚರ್ಚೆಯನ್ನು ಮಾಡಲಾಗಿದೆ. ಸ್ವರವಚನ ಮತ್ತು ತತ್ವಪದಗಳು ಒಂದೇ ಎಂಬ ಚರ್ಚೆಗಳು, ಸ್ವರವಚನಗಳು ವೀರಶೈವ ತತ್ವಸಿದ್ಧಾಂತವನ್ನು ಪ್ರತಿಪಾದಿಸುವ ರಚನೆಗಳು. ಹಲವು ಮನೋಧರ್ಮದ ಇವುಗಳ ಸಂಪಾದನೆಗಳು ಧಾರ್ಮಿಕ ಮತ್ತು ಧಾರ್ಮಿಕೇತರ ರಚನೆಗಳೆಂಬಂತೆ ಈ ಪರಿಕಲ್ಪನೆಗಳ ಹಿನ್ನೆಲೆಯಲ್ಲಿ ಚರ್ಚೆಗಳು ನಡೆದಿವೆ. ಸಾಹಿತ್ಯ ಪ್ರಕಾರವನ್ನು ಹೀಗೆ ವಿಭಿನ್ನ ಪರಿಭಾಷೆಯಲ್ಲಿ ಗ್ರಹಿಸಿದ ಆಲೋಚನಾಕ್ರಮಗಳನ್ನು ಶೋಧಿಸಲಾಗಿದೆ.

**ಅಧ್ಯಾಯ ನಾಲ್ಕರಲ್ಲಿ** ತತ್ವಪದಗಳನ್ನು ಕುರಿತು ಹಲವು ಬಗೆಯಲ್ಲಿ ಅಧ್ಯಯನಗಳು ನಡೆದಿವೆ. ಇಲ್ಲಿ ಅವುಗಳ ತಾತ್ವಿಕ ಸಮೀಕ್ಷೆ ಮಾಡಲಾಗಿದೆ. ಒಂದು ವಿಷಯವನ್ನು ವಿವರಿಸುವುದು, ವಿಶ್ಲೇಷಿಸುವುದು, ಸೈದ್ಧಾಂತಿಕರಿಸುವುದು, ತಾತ್ವೀಕರಿಸುವುದು ಅಧ್ಯಯನ ಶೋಧನೆಯ ಮುಖ್ಯ ಹಂತಗಳು. ಈ ನಿಟ್ಟಿನಲ್ಲಿ ಅಧ್ಯಯನ ಯಾವ ಹಂತ ತಲುಪಿದೆ ಎನ್ನುವುದನ್ನು ತಿಳಿಯುವ ಮೂಲಕ ಅದರ ಬೆಲೆ ಕಟ್ಟಲಾಗುತ್ತದೆ. ತಾತ್ವಿಕ ಸಮೀಕ್ಷೆ ಎಂದರೆ ಅಧ್ಯಯನಗಳ ದೃಷ್ಟಿಕೋನ, ತಿಳುವಳಿಕೆ, ವಿಶ್ಲೇಷಣೆ ಹಾಗೂ ವ್ಯಾಖ್ಯಾನಗಳ ಮಾದರಿಯನ್ನು ಅವಲೋಕಿಸಿ ಅವುಗಳಲ್ಲಿ ತಾಳುವ ನಿಲುವು ಯಾವುದು ಎಂಬ ಸಂಗತಿಗಳನ್ನು ಕಂಡುಕೊಳ್ಳಲಾಗಿದೆ. ಈ ಬಗೆಯ ಅಧ್ಯಯನದ ತಾತ್ವಿಕ ಧೋರಣೆಗಳನ್ನು ಸಮೀಕ್ಷಿಸುವುದು ಉಚಿತವಾಗಿದೆ. ಇದು ಈ ನಿಬಂಧದ ಬಹುಮುಖ್ಯವಾದ ಭಾಗವೂ ಆಗಿದೆ. ಅಧ್ಯಯನಗಳ ತಾತ್ವಿಕ ಸಮೀಕ್ಷೆಯನ್ನು ಚರ್ಚೆಯ ಅನುಕೂಲಕ್ಕಾಗಿ ಐದು ಭಾಗಗಳಲ್ಲಿ ವಿಂಗಡಿಸಿಕೊಳ್ಳಲಾಗಿದೆ. ಒಂದು : ಸಂಗ್ರಹ ಮತ್ತು ಸಂಪಾದನೆಗಳು. ಎರಡು : ಸಂಪಾದನೆಯ ಪ್ರಸ್ತಾವನೆಗಳು. ಮೂರು : ವಿಮರ್ಶಾ ಲೇಖನಗಳು. ನಾಲ್ಕು: ಸ್ವತಂತ್ರ ಅಧ್ಯಯನ ಕೃತಿಗಳು. ಐದು : ಪಿಎಚ್.ಡಿ.ಮಹಾಪ್ರಬಂಧಗಳು.

**ಅಧ್ಯಾಯ ಐದರಲ್ಲಿ** ಅಧ್ಯಯನದಲ್ಲಿ ಕಂಡುಕೊಂಡ ಫಲಿತಗಳನ್ನು ದಾಖಲಿಸಲಾಗಿದೆ.

**ಅನುಬಂಧ ಒಂದರಲ್ಲಿ** ತತ್ವಪದ ಸಾಹಿತ್ಯವನ್ನು ಕಲಿಯುವ ವಿದ್ಯಾರ್ಥಿಗಳು ಹಾಗೂ ಬೋಧಿಸುವ ಅಧ್ಯಾಪಕರು ತಮ್ಮ ಕಲಿಕೆ, ಬೋಧನ, ಅಧ್ಯಯನಗಳಲ್ಲಿ ಅನುಸರಿಸುವ ಮಾರ್ಗಗಳು ಯಾವುವು? ನಿರ್ದಿಷ್ಟವಾದ ವಿಧಿ ವಿಧಾನಗಳನ್ನೇನಾದರೂ ಅನುಸರಿಸುತ್ತಾರೆಯೇ? ಜೊತೆಗೆ ತತ್ವಪದಗಳನ್ನು ಹಾಡುವ ವಿವಿಧ ಪ್ರಕಾರದ ಗಾಯಕರು ಅನುಸರಿಸುವ ಸಂಗೀತದ ಸ್ವರೂಪ ಯಾವುದು? ಇವೇ ಮೊದಲಾದ ಅಂಶಗಳನ್ನು ಅಧ್ಯಯನ ಮಾಡುವ ಸಲುವಾಗಿ, ಈ ಕುರಿತ ಕ್ಷೇತ್ರಾಧ್ಯಯನ ಕೈಗೊಂಡ ಅದರ ಫಲಿತಾಂಶಗಳನ್ನು ಗಮನಿಸಲಾಗಿದೆ. ಆದರೆ ಈ ಕ್ಷೇತ್ರಾಧ್ಯಯನ ನನ್ನ ನಿಬಂಧದ ಮುಖ್ಯ ಆಸಕ್ತಿಯಿಂದ ಹೊರಗುಳಿದಿದೆ. ಇದೊಂದು ಸೀಮಿತ ನೆಲೆಯ ಪ್ರಯತ್ನವಾಗಿದೆ. ಆದರೆ ಈ ನಿಟ್ಟಿನಲ್ಲಿ ಅಧ್ಯಯನ ಮಾಡುವವರಿಗೆ ತೋರುದಾರಿಯಾಗಿದೆ ಎಂದಷ್ಟೇ ಹೇಳಬಹುದು. ಹೀಗಾಗಿ ಇದನ್ನು ಅನುಬಂಧದಲ್ಲಿ ಕೊಡಲಾಗಿದೆ.

**ಅನುಬಂಧ ಎರಡರಲ್ಲಿ** ತತ್ವಪದಗಳಿಗೆ ಸಂಬಂಧಿಸಿದಂತೆ ಅಧ್ಯಯನಗಳ ಸೂಚಿಯನ್ನು ಅವು ಪ್ರಕಟಗೊಂಡ ವರ್ಷಾನುಕ್ರಮದಲ್ಲಿ ಕೊಡಲಾಗಿದೆ. ಹೀಗೆ ಕೊಡುವುದರಿಂದ ಅವು ನಡೆದು ಬಂದ ಅಧ್ಯಯನ ಕ್ರಮವನ್ನು ಅರಿಯಬಹುದು ಎಂದು ನಂಬಲಾಗಿದೆ.

**ಅನುಬಂಧ ಮೂರರಲ್ಲಿ** ತತ್ವಪದಕಾರರ ಮಾಹಿತಿ ಸೂಚಿಯನ್ನು ಅಕಾರಾದಿಯಲ್ಲಿ ನೀಡಲಾಗಿದೆ. ವಿವಿಧ ಮೂಲಗಳಿಂದ ಸಂಗ್ರಹಿಸಿದ ಲಭ್ಯವಿರುವ ಮಾಹಿತಿಯು ಆದಷ್ಟು ಸಮಗ್ರವಾಗಿರುವಂತೆ ನೋಡಿ ಕೊಳ್ಳಲಾಗಿದೆ. ಇದಿಷ್ಟು ಪ್ರಸ್ತುತ ಅಧ್ಯಯನದ ಸ್ಥೂಲ ಸ್ವರೂಪವಾಗಿದೆ.

## ಅಧ್ಯಾಯ ಎರಡು

# ತತ್ವಪದಗಳು ರಚನೆಗೊಂಡ ಚಾರಿತ್ರಿಕ ಮತ್ತು ಸಾಂಸ್ಕೃತಿಕ ಸಂದರ್ಭ

### ತತ್ವಪದಕಾರರ ಚಾರಿತ್ರಿಕ ಹಿನ್ನೆಲೆ

ಕಲ್ಯಾಣ ಚಾಲುಕ್ಯರ ನಂತರ ಅಧಿಕಾರಕ್ಕೆ ಬಂದ ಕಲಚೂರ್ಯರು (೧೧೬೨-೧೧೮೪) ಕಲ್ಯಾಣವನ್ನೇ ರಾಜಧಾನಿಯನ್ನಾಗಿ ಮಾಡಿಕೊಂಡರು. ಸುಮಾರು ೨೬ ವರ್ಷಗಳ ಕಾಲ ರಾಜ್ಯವಾಳಿದರು. ಈ ವಂಶದಲ್ಲಿ ಪ್ರಸಿದ್ಧನಾದ ಬಿಜ್ಜಳನು ಬಸವಣ್ಣನನ್ನು ಮಂತ್ರಿಯಾಗಿಸಿದ್ದ. ಬಸವಣ್ಣನ ನೇತೃತ್ವದಲ್ಲಿ ಹೊಸ ಧಾರ್ಮಿಕ ಜೀವನಕ್ರಮವೊಂದು ರೂಪಿತವಾಯಿತು. ಇಲ್ಲಿನ ಸಾಂಸ್ಕೃತಿಕ ಸಂಘರ್ಷಗಳು, ಇದರಿಂದಾದ ಬದಲಾವಣೆಗಳು, ಪರಿಣಾಮಗಳು, ಕರ್ನಾಟಕದ ಮಧ್ಯಯುಗೀನ ಚರಿತ್ರೆಯನ್ನು ವಿಭಿನ್ನವಾಗಿಸಿದೆ, ಅನನ್ಯವಾಗಿಸಿದೆ.

ಕರ್ನಾಟಕದಲ್ಲಿ ೧೨ನೇ ಶತಮಾನದಲ್ಲಿ ನಡೆದ ಶರಣರ ಚಳುವಳಿಯು ಜಗತ್ತಿನ ಇತಿಹಾಸದಲ್ಲಿಯೇ ಕಂಡುಕೇಳರಿಯದಂತದು. ಅದೊಂದು ಜಾಗತಿಕ ಹೊಸ ಮನ್ವಂತರವನ್ನು ಸೃಷ್ಟಿ ಮಾಡಿದ ಕಾಲ. ಕರ್ನಾಟಕ ಸಂಸ್ಕೃತಿಗಂತೂ ಶರಣ ಚಳುವಳಿಯ ಕೊಡುಗೆ ವಿಶಿಷ್ಟವಾದದ್ದು. ೧೨ನೇ ಶತಮಾನದಲ್ಲಿ ಅವರು ನಡೆಸಿದ ಸಂಘರ್ಷ ಸಂವಾದ ಅನುಸಂಧಾನಗಳು ಮಾನವನ ವಿಕಾಸಕ್ಕೆ ಅದರಲ್ಲೂ 'ಸಂಸ್ಕೃತಿ ಸಂಕಥನ'ಕ್ಕೆ ಬರೆದ ಭಾಷ್ಯಗಳು. ಇವು ಚರಿತ್ರೆಯಲ್ಲಿ ಉಂಟುಮಾಡಿದ ಸಂಚಲನವು ಮಿಂಚಿನಂತವು. ಆ ಮಿಂಚು ೨೧ನೆಯ ಶತಮಾನದಲ್ಲಿಯೂ ತನ್ನ ಬೆಳಕಿನ ಪ್ರಭಾವವನ್ನು ಬೀರುತ್ತಲಿದೆ.

ಕರ್ನಾಟಕದ ಅನೇಕ ಕಡೆಗಳಿಂದ ಬಂದು ಕಲ್ಯಾಣದಲ್ಲಿ ನೆಲೆ ನಿಂತ ಶರಣರು ಅಂದಿನ ರಾಜಕೀಯ, ಸಾಮಾಜಿಕ, ಧಾರ್ಮಿಕ, ಸಾಂಸ್ಕೃತಿಕ ಸ್ಥಿತ್ಯಂತರಗಳಿಗೆ ಸ್ಪಂದಿಸಿದರು. ಜನಸಮುದಾಯಗಳನ್ನು ಒಟ್ಟುಗೂಡಿಸಿ ಸಮೂಹದ ಮೂಲಕ ಚಳುವಳಿಯನ್ನು ರೂಪಿಸಿದರು. ಸಮಾಜದ ಉಪಉತ್ಪನ್ನಗಳಾಗಿ ವಚನಗಳನ್ನು ಕಟ್ಟಿದರು. ಹಾಡಿದರು. ಅವರ ರಚನೆಗಳಲ್ಲಿ ಭಾಷೆಯ ದೃಷ್ಟಿಯಿಂದ ಜನಸಾಮಾನ್ಯರ ದೇಸಿ(ಆಡು) ಭಾಷೆಯನ್ನೇ ಬಳಸಿದರು.

ಹೀಗೆ ಶರಣರು ನಡೆಸಿದ ಸಾಂಸ್ಕೃತಿಕ ಆಂದೋಲನದಿಂದ ಅವರು ನೀಡಿದ ತಾತ್ವಿಕ ಮೌಲ್ಯಗಳ ದೃಷ್ಟಿಯಿಂದ ನಿರೀಕ್ಷಿಸಿದ ಮಟ್ಟದಲ್ಲಿ ಸಮಾಜದಲ್ಲಿ ಬದಲಾವಣೆಗಳು ಕಾಣದಿದ್ದರೂ ಶರಣರು ವಚನಗಳ ಮೂಲಕ ನಡೆಸಿದ ತಾತ್ವಿಕ ಜಿಜ್ಞಾಸೆ, ಸಾಂಸ್ಕೃತಿಕ ಸಂಘರ್ಷ ಪ್ರಜ್ಞಾವಂತರನ್ನು ಇಂದಿಗೂ ಕಾಡುತ್ತಿದೆ. ಪರ್ಯಾಯಗಳನ್ನು ರೂಪಿಸಿಕೊಳ್ಳಲು ಪ್ರೇರೇಪಿಸುತ್ತಿದೆ.

ಶರಣರ ನಂತರದ ೧೩ನೇ ಶತಮಾನದಲ್ಲಿ ಕರ್ನಾಟಕದ ಬೇರೆ ಬೇರೆ ಭಾಗದಲ್ಲಿ ಅನೇಕ ರೀತಿಯ ರಾಜಕೀಯ ಸ್ಥಿತ್ಯಂತರಗಳು ಕಾಣಿಸಿಕೊಂಡವು. ಈ ಕಾಲದಲ್ಲಿ ಶರಣರ ಚಳುವಳಿಯ ಪ್ರಭಾವ ಸಂಪೂರ್ಣವಾಗಿ ತಗ್ಗಿದಂತೆ ಕಾಣುತ್ತದೆ. ರಾಜಕೀಯ ಅರಾಜಕತೆಯಿಂದ ಸಮಾಜದಲ್ಲಿ ಅನೇಕ ರೀತಿಯ ಬಿಕ್ಕಟ್ಟುಗಳು ಸೃಷ್ಟಿಯಾದವು. ವಚನಕಾರರ ನಂತರ ಉತ್ತರ ಭಾರತದಲ್ಲಿ ಅರಸರ ಸೈನಿಕ ದಾಳಿಗಳು ಶುರುವಾದವು. ೧೩ನೇ ಶತಮಾನದಲ್ಲಿ ಕರ್ನಾಟಕದ ಉತ್ತರದಲ್ಲಿ ಸೇವುಣರು, ದಕ್ಷಿಣದಲ್ಲಿ ಹೊಯ್ಸಳರು ಅಧಿಕಾರಕ್ಕೆ ಬಂದರು. ಹೀಗೆಯೇ ಇಲ್ಲಿ ಕೆಲವು ಸಣ್ಣಪುಟ್ಟ ಅರಸು ಮನೆತನಗಳು ಆಳಿದವು. 'ಚೆಂಗಾಳ್ವರು' ಮೈಸೂರು ಜಿಲ್ಲೆಯ ಪಶ್ಚಿಮದ ಭೂಭಾಗವನ್ನು ಮತ್ತು ಕೊಡಗನ್ನು 'ಕೊಂಗಾಳ್ವರು' ಅರಕಲಗೂಡು ಮತ್ತು ಉತ್ತರ ಕೊಡಗಿನ ಏಳು ಸಾವಿರ ಸೀಮೆಯನ್ನು 'ಪಾಂಡ್ಯರು' ನೊಳಂಬವಾಡಿಯನ್ನು 'ಚೋಳರು' ಹೇಮಾವತಿ ಮತ್ತು ನಿಡುಗಲ್ಲುಗಳ ನಡುವಣ ಸಣ್ಣ ಭೂಭಾಗವನ್ನು ಆಳುತ್ತಿದ್ದರು. ಇವರೆಲ್ಲರ ನಡುವೆ ಯುದ್ಧಗಳು ನಿರಂತರವಾಗಿ ನಡೆಯುತ್ತಿದ್ದವು. ೧೩ನೇ ಶತಮಾನದಲ್ಲಿಯೇ ಈ ಪ್ರಾಂತಗಳಲ್ಲಿ ಯುದ್ಧಗಳು ಹೆಚ್ಚಾಗತೊಡಗಿದವು. ಹಲವು ರಾಜಮನೆತನಗಳು ಅಧಿಕಾರಕ್ಕಾಗಿ, ಆಳ್ವಿಕೆಗಾಗಿ ನಡೆಸಿದ ಯುದ್ಧಗಳು ಇವಾಗಿದ್ದವು. ಈ ಆಳರಸರ ಕಿತ್ತಾಟವನ್ನು ಗಮನಿಸುತ್ತಿದ್ದ ಉತ್ತರ ಭಾರತದ ಅರಸರಿಗೆ ರಾಜ್ಯವಿಸ್ತರಣೆಯ ಆಸೆ ಸಹಜವೆಂಬಂತೆ ಹುಟ್ಟಿತು. ಉತ್ತರ ಭಾರತದ ದೆಹಲಿ ಸಿಂಹಾಸನವನ್ನು ಅಲ್ಲಾವುದ್ದೀನ್ ಖಿಲ್ಜಿ ಇನ್ನೂ ಹೇರಿರಲಿಲ್ಲ. ಸಂಪತ್ತಿನ ಅಗತ್ಯವಿದ್ದ ಕಾರಣ ೧೨೯೬ರಲ್ಲಿ ಸೇವುಣರ ಮೇಲೆ ಮೊದಲು ದಾಳಿ ಮಾಡಿದ. ಇಲ್ಲಿಂದ ಕರ್ನಾಟಕದ ಉತ್ತರ ಭಾಗದ ಮೇಲೆ ಸೈನಿಕ ದಾಳಿಗಳು ಶುರುವಾದವು. ಸೇವುಣ ರಾಮಚಂದ್ರನ ದೇವಗಿರಿ ಅಲ್ಲಾವುದ್ದೀನನ ಹಿಡಿತಕ್ಕೆ ಬಂದಾಗ ವಾರ್ಷಿಕ ಕಪ್ಪ ಕಾಣಿಕೆಯನ್ನು ಕೊಡಲು ರಾಮಚಂದ್ರ ಒಪ್ಪಿದ. ಈ ಒಪ್ಪಂದದ ಪ್ರಕಾರ '೬೦೦ ಮಣ ಮುತ್ತುಗಳು, ೨ ಮಣ ವಜ್ರಗಳು, ೧೦೦ ಮಣ ಬೆಳ್ಳಿ ಮತ್ತು ೪೦೦೦ ರೇಷ್ಮೆ ವಸ್ತ್ರಗಳು ಇವುಗಳನ್ನು ರಾಮಚಂದ್ರನು ಅಲ್ಲಾವುದ್ದೀನನಿಗೆ ಒಪ್ಪಿಸಿದನು.[೧] ಈ ಅಪಾರ ಸಂಪತ್ತಿನಿಂದಲೇ ಅಲ್ಲಾವುದ್ದೀನನು ದೆಹಲಿಯ ಸಿಂಹಾಸನವನ್ನು ಹೇರಿದನು ಎಂದು ಇತಿಹಾಸದಿಂದ ತಿಳಿಯುತ್ತದೆ. ನೈಸರ್ಗಿಕವಾಗಿ ಸಂಪದ್ಭರಿತವಾದ ಸೇವುಣರ ಕೃಷ್ಣಾ-ಗೋದಾವರಿ(ನರ್ಮದಾ) ನಡುವಣ ಪ್ರದೇಶವು ಖಿಲ್ಜಿಯ ದಾಳಿಯಿಂದ ತತ್ತರಿಸಿತ್ತು. ಕಬ್ಬು, ಕದಂಬಕ, ತೆಂಗು, ಅಡಿಕೆ, ನಿಂಬೆ, ಹಲಸು, ಸೇಬು, ಕಿತ್ತಳೆ, ಲವಂಗ, ವೀಳ್ಯೆದೆಲೆ, ಸುರಹೊನ್ನೆ, ಪಾರಿಜಾತ, ಮುಂತಾದವುಗಳನ್ನು ಹೇರಳವಾಗಿ ಬೆಳೆಯುತ್ತಿದ್ದರು.[೨] ಕರಕುಶಲ ಕಲೆಯಲ್ಲಿ ಪರಿಣತರಾಗಿದ್ದರು

ಎಂದು ಚರಿತ್ರೆಯ ಉಲ್ಲೇಖದಿಂದ ತಿಳಿದುಬರುತ್ತದೆ. ದೇವಗಿರಿಯ ಮೇಲೆ ಸಂಪತ್ತನ್ನು ದೋಚಲು ಮತ್ತೆ ಮತ್ತೆ ದಾಳಿಗಳು ನಡೆದವು. ಸೇನಾಪತಿ ಮಲ್ಲಿಕಾಫರನು ದಾಳಿ ಮಾಡಿದ. ಖಿಲ್ಜಿಯ ಹಿಡಿತದಲ್ಲಿದ್ದ ಸೇವುಣರ ಸಹಾಯದಿಂದ ಮಲ್ಲಿಕಾಫರನು ಓರಂಗಲ್ಲಿನ ಮೇಲೆ ದಾಳಿ ಮಾಡಿ ಕಾಕತೀಯರನ್ನು ಸೋಲಿಸಿ ಅಲ್ಲಿನ ಸಂಪತ್ತನ್ನು ಲೂಟಿ ಮಾಡಿದನು. ೧೩೧೧ರಲ್ಲಿ ಹೊಯ್ಸಳರ ಮೇಲೆ ದಾಳಿ ಮಾಡಿದ. ಹೀಗೆ ೧೨೯೬ರಿಂದ ೧೩೧೨ರವರೆಗೆ ಕರ್ನಾಟಕವೂ ಸೇರಿದಂತೆ ದಕ್ಷಿಣ ಭಾರತದ ಮೇಲೆ ಉತ್ತರದ ಆಳರಸರು ನಿರಂತರ ದಾಳಿ ಮಾಡಿದರು. ಈ ಸೈನಿಕ ದಾಳಿಯಲ್ಲಿ ಸಿಕ್ಕಷ್ಟನ್ನು ಸೂರೆಗೊಳ್ಳುವುದೇ ಮುಖ್ಯವಾಗಿತ್ತು. ಅತ್ತ ದೆಹಲಿಯಲ್ಲಿ ಅಲ್ಲಾವುದ್ದೀನ್ ಖಿಲ್ಜಿಯನ್ನು ಹಿಂದೆ ಸರಿಸಿ ತುಘಲಕ್ ವಂಶವು ಸಿಂಹಾಸನಕ್ಕೆ ಬಂದಿತು. ತುಘಲಕ್‌ನೂ ಕರ್ನಾಟಕದ ಮೇಲೆ ದಾಳಿಯನ್ನು ಆರಂಭಿಸಿದ. ಇದು ಕರ್ನಾಟಕದ ಮೇಲೆ ನಡೆದ ಎರಡನೇ ಹಂತದ ಸೈನಿಕ ದಾಳಿಯಾಗಿತ್ತು. ಸೇವುಣರು, ಕಾಕತೀಯರು, ಹೊಯ್ಸಳರು, ಕಂಪಿಲಿಯ ಕಂಪಲರಾಯನೂ ತುಘಲಕ್‌ನಿಗೆ ಸೋತುಹೋದರು. ದಕ್ಷಿಣ ಭಾರತದ ಅನೇಕ ರಾಜಮನೆತನಗಳು ತುಘಲಕ್‌ನ ದರ್ಬಾರಿನಲ್ಲಿ ಪತನವಾದವು.

ವಿಜಯನಗರ ಸಾಮ್ರಾಜ್ಯದ ಉದಯದವರೆಗೆ(೧೩೩೬) ಕರ್ನಾಟಕದ ಈ ಭಾಗ ಅನೇಕ ಸೈನಿಕ ದಾಳಿಗೆ ತುತ್ತಾಯಿತು. ವಿಜಯನಗರ ಸಾಮ್ರಾಜ್ಯದ ತರುವಾಯ ದಶಕದ ಅಂತರದಲ್ಲಿ ಬಹಮನಿ ರಾಜ್ಯ ಸ್ಥಾಪನೆಯಾಯಿತು(೧೩೪೭). ಕೃಷ್ಣಾ-ತುಂಗಭದ್ರಾ ನದಿಗಳ ಪ್ರದೇಶವು ಇವುಗಳ ಗಡಿಯಾಯಿತು. ಕರ್ನಾಟಕದ ಕಲಬುರ್ಗಿ, ಬೀದರ್, ಬಿಜಾಪುರ, ರಾಯಚೂರು ಜಿಲ್ಲಾ ಪ್ರದೇಶಗಳು ಬಹಮನಿ, ಆದಿಲ್‌ಶಾಹಿ ರಾಜ್ಯಕ್ಕೆ ಒಳಪಟ್ಟವು. ಕರ್ನಾಟಕದ (ತುಂಗಭದ್ರಾ ನದಿಯಿಂದ ಆಚೆ) ದಕ್ಷಿಣಭಾಗ ವಿಜಯನಗರದ ಅರಸರ ಆಡಳಿತಕ್ಕೆ ಸೇರಿತು.

ಮೌಖಿಕವಾಗಿದ್ದ ಕನ್ನಡ ಭಾಷೆ ೫-೬ನೇ ಶತಮಾನದಲ್ಲಿ ಲಿಖಿತಕ್ಕೆ ಬಂದಿತ್ತು. ಕದಂಬರ ಕಾಲದ ಕ್ರಿ.ಶ.೪೫೦ರ ಹಲ್ಮಿಡಿ ಶಾಸನದಲ್ಲಿ ಕನ್ನಡ ಭಾಷೆ ಮೊದಲಿಗೆ ಬಳಕೆಯಾಗಿದೆ. ನಂತರ ಕವಿರಾಜಮಾರ್ಗ ಕಾಲದವರೆಗೂ ೪೦೦ ವರ್ಷಗಳ ಕಾಲ ಅನೇಕ ಲೇಖಕರು ಕನ್ನಡದಲ್ಲಿ ಗ್ರಂಥಗಳನ್ನು ಬರೆದಿರಬೇಕು.[೩] ಆದರೆ ಖಚಿತವಾಗಿ ಹೇಳಲು ಆಧಾರಗಳಿಲ್ಲ. ೮ನೇ ಶತಮಾನದಿಂದ ಕನ್ನಡವನ್ನು ಸಾಹಿತ್ಯಕ್ಕೆ ಬಳಸಿರುವುದು ಕಂಡುಬರುತ್ತದೆ. ಈ ಕಾಲದಲ್ಲಿ ಕನ್ನಡ ಭಾಷೆ ಲಿಖಿತವಾಗಿತ್ತು. ಮುಂದೆ ಅದು ಪಂಪನ ಕಾಲದಲ್ಲಿ, ಜೈನರಲ್ಲಿ ಪ್ರಬುದ್ಧವಾಗಿ ಬೆಳೆದಿರುವುದನ್ನು ನೋಡಬಹುದು. ೯ನೇ ಶತಮಾನದಿಂದ ೧೨ನೇ ಶತಮಾನದವರೆಗೆ ಕೃಷ್ಣಾನದಿಯ ಮೇಲಿನ ಪ್ರದೇಶದಲ್ಲಿ ನಿರಂತರವಾಗಿ ಸಾಹಿತ್ಯ ಸೃಷ್ಟಿಯಾಯಿತು. ಈ ಕಾಲಾವಧಿಯಲ್ಲಿ ರಚನೆಗೊಂಡ ಸಾಹಿತ್ಯವು ವಸ್ತು, ಭಾಷೆ, ಮೌಲ್ಯಗಳ ದೃಷ್ಟಿಯಿಂದ ಸತ್ವಪೂರ್ಣವಾದದ್ದು. ನಂತರ ಅದು ೧೨ನೇ ಶತಮಾನದಲ್ಲಿ ಮತ್ತೆ ಮೌಖಿಕವಾಗಿ ಮುಂದುವರೆಯಿತು. ಈ ಕಾಲದಲ್ಲಿ ಮೌಖಿಕ ಸಾಹಿತ್ಯ ಪರಂಪರೆ ಬಲವಾಗಿ ಬೆಳೆಯಿತು. ಇದು ಕಾಲಾಂತರದಲ್ಲಿ ಎರಡು ಕವಲುಗಳಾಗಿ

ಮುಂದುವರೆಯಿತು. ವಚನ ಸಾಹಿತ್ಯವನ್ನು ಸಾಂಸ್ಥೀಕೃತಗೊಳಿಸಿ ಚಳುವಳಿಯನ್ನು ವೀರಶೈವ ಧರ್ಮವೆಂದು ಪ್ರತಿಪಾದಿಸಲಾಯಿತು. ವೀರಶೈವ ಮಹಾಪುರುಷರ ಚರಿತ್ರೆ ಮತ್ತು ಪುರಾಣ ಕೃತಿಗಳು ಲಿಖಿತ ರೂಪದಲ್ಲಿ ಸೃಷ್ಟಿಯಾದವು. ಈ ಬಗೆಯ ಸಾಹಿತ್ಯವನ್ನು ಕೆಲವು ಶಾಸ್ತ್ರ, ಶಿಸ್ತುಗಳಿಗೆ ಬದ್ಧಗೊಳಿಸಲಾಯಿತು. ಆದರೆ ಇದಕ್ಕೆ ವಿರೋಧವಾಗಿ ದಾಸರು, ಆರೂಢರು, ತತ್ವಪದಕಾರರ ಸಾಹಿತ್ಯ ಮೌಖಿಕ ರೂಪದಲ್ಲಿ ಬೆಳೆಯಿತು. ಇದು ಯಾವುದೇ ಕಟ್ಟುಪಾಡುಗಳಿಗೆ ಒಳಗಾಗದ ಜನಸಾಮಾನ್ಯರ ಸಾಹಿತ್ಯವಾಯಿತು. ವಚನಕಾರರ ನಂತರದಲ್ಲಿ ರಾಜಕೀಯ ಅರಾಜಕತೆ/ಸ್ಥಿತ್ಯಂತರಗಳು ನಡೆಯತೊಡಗಿದ್ದವು. ಕರ್ನಾಟಕದ ಉತ್ತರಪ್ರಾಂತವು ೧೩ನೇ ಶತಮಾನದಿಂದ ಅನ್ಯಭಾಷೆ ಮತ್ತು ಸಂಸ್ಕೃತಿಯನ್ನು ಹೊಂದಿದ್ದ ಉತ್ತರದ ಆಳರಸರ ಅಧೀನಕ್ಕೆ ಒಳಗಾಗಿ ೧೯೪೮ರವರೆಗೆ ಅವರ ಬಳಿಯೇ ಉಳಿಯಿತು. ಇದರಿಂದ ಕನ್ನಡ ಭಾಷೆ ಹಿನ್ನೆಲೆಗೆ ಸರಿಯಿತು. ಕನ್ನಡವು ಪರಕೀಯವಾಯಿತು. ಆ ನೆಲದ ಭಾಷೆ, ಸಾಹಿತ್ಯ, ಸಂಸ್ಕೃತಿಗಳು ಹಿಂದೆ ಸರಿದವು. ಅವು ಆಳರಸರ ಬೆಂಬಲವಿಲ್ಲದೆ ಜನತೆಯ ಘನ ವಿಸ್ಮೃತಿಯಲ್ಲಿ ಹೂತು ಹೋಗಿದ್ದವು. ಕನ್ನಡ ಭಾಷೆ ಮೌಖಿಕವಾಗಿ ಮಾತ್ರ ಉಳಿದಿತ್ತು. ಅನ್ಯಭಾಷೆ, ಅನ್ಯ ಸಂಸ್ಕೃತಿಯ ಜತೆ ಅನಿವಾರ್ಯವಾಗಿ, ಸಹಜವೆಂಬಂತೆ ಸಹಬಾಳ್ವೆ ನಡೆಸಿದ ಕನ್ನಡ ಭಾಷೆ-ಸಂಸ್ಕೃತಿ ಸಂಕರವಾಯಿತು. ೧೩ರಿಂದ ೧೭ನೇ ಶತಮಾನದವರೆಗೆ ಮಹಾರಾಷ್ಟ್ರದಲ್ಲಿ ವಾರಕರಿ ಸಂಪ್ರದಾಯ ಎಂಬ ಭಕ್ತಿ ಚಳುವಳಿ ನಡೆಯಿತು. ಆದರೆ ಈ ಭಕ್ತಿ ಚಳುವಳಿಯಲ್ಲಿ ಭಕ್ತಿಗೀತೆಗಳು ರಚನೆಯಾಗಿದ್ದು ಬಿಟ್ಟರೆ ಬೇರೆ ಸಾಹಿತ್ಯ ಕೃತಿಗಳು ರಚನೆಯಾಗಲಿಲ್ಲ ಎಂದು ಹೇಳಲಾಗುತ್ತಿದೆ. ಬಹಮನಿ, ಆದಿಲ್‌ಶಾಹಿ ರಾಜ್ಯಗಳ ಆಳ್ವಿಕೆಯಲ್ಲಿ ಫಾರಸಿ, ಮರಾಠಿ, ದಖನಿಯಲ್ಲಿ ಸಾಹಿತ್ಯ ರಚನೆಯಾಗಿದೆ. ಆದರೆ ಕರ್ನಾಟಕದ ದಕ್ಷಿಣ ಭಾಗದಲ್ಲಿ ಕನ್ನಡ ಸಾಹಿತ್ಯ ರಚನೆಯಾಯಿತು. ವಿಜಯನಗರದ ಅರಸರು ಸಾಹಿತ್ಯ, ಕಲೆಗೆ ಹೆಚ್ಚಿನ ಪ್ರೋತ್ಸಾಹ ನೀಡಿದರು. ಹರಿಹರ, ರಾಘವಾಂಕ, ಚಾಮರಸ, ಭೀಮಕವಿ, ಷಡಕ್ಷರಿ, ರತ್ನಾಕರ ಮುಂತಾದವರು ಲಿಖಿತ ಪರಂಪರೆಯನ್ನು ಮುಂದುವರೆಸಿದರು. ಇವರೆಲ್ಲರೂ ತಿರುಳ್ಗನ್ನಡ ನಾಡಿನ ಕವಿಗಳೇ ಆಗಿದ್ದವರು. ಈ ಕಾಲದಲ್ಲಿ ವಚನ ಸಂಕಲನಗಳನ್ನು ಮಾಡುವುದರ ಜೊತೆಗೆ ವಿವರವಾದ ಟೀಕೆಗಳನ್ನು ಬರೆದರು.

ಕಾಲಾಂತರದಲ್ಲಿ ಬಹಮನಿರಾಜ್ಯ ಐದು ಶಾಹಿರಾಜ್ಯಗಳಾಗಿ ಒಡೆದು ವಿಜಯನಗರದ ಪತನದವರೆಗೂ ಇದ್ದವು. ನಂತರ 'ಆದಿಲ್‌ಶಾಹಿ' ರಾಜ್ಯದಲ್ಲಿ ಸೇರಿಕೊಂಡವು. ವಿಜಾಪುರ, ಗುಲಬರ್ಗಾ, ಬೀದರ, ರಾಯಚೂರು ಪ್ರದೇಶಗಳು ಈ ಶಾಹಿರಾಜ್ಯಗಳ ಅಧೀನದಲ್ಲಿದ್ದವು. ವಿಜಯನಗರದ ಅರಸರು ಮತ್ತು ಬಹಮನಿ, ಆದಿಲ್‌ಶಾಹಿ ರಾಜ್ಯಗಳ ನಡುವೆ ಯುದ್ಧಗಳು ನಿರಂತರವಾಗಿದ್ದವು. ಅನಿವಾರ್ಯವೆಂಬಂತೆ ಸಾಂಸ್ಕೃತಿಕವಾದ ವಿನಿಮಯಗಳು ನಡೆದಿದ್ದವು. ಇದಕ್ಕೆಲ್ಲ ರಾಜಕೀಯ ದಾಹವೇ ಹೊರತು ಮಾನವೀಯ ನೆಲೆಯಲ್ಲ. ಕೃಷ್ಣಾ-ತುಂಗಭದ್ರಾ ನದಿಗಳ ನಡುವಿದ್ದ ಫಲವತ್ತಾದ ಪ್ರದೇಶಕ್ಕಾಗಿ, ಸಂಪತ್ತನ್ನು ಪಡೆಯುವ ದೃಷ್ಟಿಯಿಂದ ಚರಿತ್ರೆಯ ಉದ್ದಕ್ಕೂ ರಾಜ್ಯ-ರಾಜ್ಯಗಳ ನಡುವೆ ಯುದ್ಧಗಳು ನಡೆದವು.

ವಿಜಯನಗರ ಸಾಮ್ರಾಜ್ಯದ ಕೊನೆಯವರೆಗೂ ಯುದ್ಧಗಳು ನಿರಂತರವಾಗಿದ್ದವು. ಅವು ಈ ಪ್ರದೇಶದಲ್ಲಿ ಸಾಮಾನ್ಯವೆಂಬಂತೆ ಘಟಿಸಿದವು. ೧೩೫೧ರಿಂದ ೧೫೦೫ರವರೆಗೆ ಸುಮಾರು ಐವತ್ತು ದೊಡ್ಡ ಯುದ್ಧಗಳು ಸಂಭವಿಸಿದವು ಎಂದು ಚರಿತ್ರೆಕಾರರು ಉಲ್ಲೇಖಿಸುತ್ತಾರೆ. ಹೀಗೆ ಯುದ್ಧಗಳ ನೆರಳಿನಲ್ಲಿ ಆತಂಕದಿಂದ ಬದುಕಿದ ಈ ಪ್ರದೇಶದ ಜನವರ್ಗಗಳು ತಮಗೊಂದು ನೆಲೆಯನ್ನು ಪಡೆದುಕೊಳ್ಳಲೇ ಇಲ್ಲ.

ವಿಜಯನಗರದ ಪ್ರೌಢದೇವರಾಯನ ಕಾಲದಲ್ಲಿ ಸಾಹಿತ್ಯ, ಸಾಂಸ್ಕೃತಿಕ ಚಟುವಟಿಕೆಗಳು ಹೆಚ್ಚಿನದಾಗಿ ನಡೆದವು. ರಾಜಕೀಯ ಅರಾಜಕತೆಯಿಂದ ನಾಡಿನ ಅನೇಕ ಕಡೆ ಚದುರಿದ ಶರಣರು ವಿಜಯನಗರದ ಪರಿಸರದಲ್ಲೂ ನೆಲೆಸಿರಬಹುದಾದ ಸಾಧ್ಯತೆಗಳಿವೆ. ಯಾಕೆಂದರೆ ಶರಣರ ವಚನಗಳನ್ನು ಸಂಗ್ರಹಿಸುವ ಕಾರ್ಯ ವಿಜಯನಗರದ ಅರಸರ ಕಾಲದಲ್ಲಿ ನಡೆಯಿತು. ‘ನೂರೊಂದು ವಿರಕ್ತರು’ ವಚನಕಾರರ ಸಾಂಸ್ಕೃತಿಕ ಚಳುವಳಿಯ ಭಾಗವಾಗಿ ರಚನೆಯಾದ ವಚನಗಳನ್ನು ‘ವೀರಶೈವಸಿದ್ಧಾಂತ’ವನ್ನು ರೂಪಿಸಲು ಬಳಸಿಕೊಂಡರು. ಏಕೋತ್ತರ ಶತಸ್ಥಲ(ಮಹಾಲಿಂಗದೇವ), ಲಿಂಗಲೀಲಾ ವಿಲಾಸಚಾರಿತ್ರ (ಕಲ್ಲುಮಠದ ಪ್ರಭುದೇವ), ಬ್ರಹ್ಮಾದ್ವೈತ ಸಿದ್ಧಾಂತ ಷಟ್‌ಸ್ಥಲಾಭರಣ(ಕರಸ್ಥಲದ ಮಲ್ಲಿಕಾರ್ಜುನೊಡೆಯ), ನೂರೊಂದು ಸ್ಥಲ(ಜಕ್ಕಣ್ಣ) ಮುಂತಾದ ಕೃತಿಗಳು ವಚನಗಳನ್ನು ಸ್ಥಲಕಟ್ಟುಗಳಲ್ಲಿ ವಿಂಗಡಿಸಿ ಸಂಕಲಿಸಿದವು. ‘ಸಕಲಪುರಾತನರ ವಚನಗಳು ಮತ್ತು ಶೂನ್ಯಸಂಪಾದನೆಯಂತ ಕೃತಿಗಳು ಸಂವಾದ ರೂಪದಲ್ಲಿ ಸೃಷ್ಟಿಗೊಂಡವು. ಇದೊಂದು ದೊಡ್ಡ ಸಾಧನೆಯಾಗಿತ್ತು. ಶರಣರ ವಚನಗಳ ಮೂಲ ಆಶಯ ಚಳುವಳಿಯ ನಿಜ ಸ್ವರೂಪವನ್ನು ಮತ್ತು ವಿಚಾರಗಳನ್ನು ಅರಿಯುವ ಬದಲು ಅವುಗಳನ್ನು ಒಂದು ಮಿತಿಗೆ ಒಳಪಡಿಸಲಾಯಿತು. ಈ ಸಂಗ್ರಹಗಳು ಸಂಪೂರ್ಣವಾಗಿ ‘ವೀರಶೈವೀಕರಣ’ಗೊಂಡು ಸಾಂಸ್ಥಿಕವಾದವು. ಆದರೆ ಚರಿತ್ರೆಯು ಮುಂಬರುವ ವರ್ತಮಾನಗಳು ತಮಗೆ ಬೇಕಾದ ಸಿದ್ಧಾಂತ ಕಟ್ಟಲು ಬಿಡದಷ್ಟು ತಾತ್ವಿಕ ಹಠವುಳ್ಳದ್ದಾಗಿದ್ದರೆ ಅಥವಾ ಬಹುರೂಪಿಯಾಗಿದ್ದರೆ ಆಗ ಅದನ್ನು ಮಣಿಸುವುದು ಕಷ್ಟ. ಸಂಪಾದನಾಕಾರರು ವಚನಗಳನ್ನು ತಿದ್ದಿರಬಹುದಾದರೂ ಅವುಗಳ ಬಹುಮುಖಿ ಆಯಾಮವನ್ನು ಪಳಗಿಸಲು ಸಾಧ್ಯವಾಗಿಲ್ಲ. ಬೇರೊಂದು ವೈಚಾರಿಕ, ತಾತ್ವಿಕ ಅಗತ್ಯಕ್ಕಾಗಿ ತಯಾರಾದ ಕಥನ ಭಿತ್ತಿಯಲ್ಲಿ ವಚನಗಳು ತಾವು ಹುಟ್ಟಿದ ಕಾಲದಲ್ಲಿ ಪಡೆದುಕೊಂಡು ಇರಬಹುದಾದಕ್ಕಿಂತಲೂ ಭಿನ್ನವಾದ ಅರ್ಥವನ್ನು ಪಡೆದುಕೊಂಡು ಬಳಕೆಯಾಗುತ್ತವೆ. ಅವು ತಮ್ಮನ್ನು ಅಳವಡಿಸಿಕೊಳ್ಳಲು ಕಟ್ಟಿಕೊಳ್ಳುವ ಎಲ್ಲ ಕಥನದ ಚೌಕಟ್ಟುಗಳ ಜತೆ, ಬಿರುಕಿಲ್ಲದ ಬೆಸುಗೆಯಲ್ಲಿ ಒಗ್ಗೂಡುವುದಿಲ್ಲ. ಜತೆಗೆ ಅವನ್ನು ಒಳಗೊಳ್ಳುವ ಪ್ರತಿಕಥನದ ಚೌಕಟ್ಟು ಕೂಡ ತನ್ನದೇ ಆದ ತಾತ್ವಿಕ ನಿಲುವನ್ನು ಹೊಂದಿರುತ್ತದೆ. ಈ ನಿಲುವು ವಚನಗಳ ತಾತ್ವಿಕ ನಿಲುವಿನ ಜತೆ ಘರ್ಷಣೆ ಮಾಡುತ್ತದೆ. ಹೀಗೆ ವಚನಗಳು ಸಾಂಸ್ಥೀಕರಣ ಗೊಂಡರೂ ಅವುಗಳ ಒಳಗಿನ ತಾತ್ವಿಕ ನಿಲುವುಗಳಲ್ಲಿ ರಾಜಿಯಾಗದಿರುವುದನ್ನು ಹಾಗೆಯೇ ‘ಚರಿತ್ರೆಯನ್ನು ವರ್ತಮಾನವು ತನ್ನ ಅಗತ್ಯಕ್ಕೆ ತಕ್ಕಂತೆ ದುಡಿಸಿಕೊಳ್ಳುವಾಗ ಹುಟ್ಟುವ ಮತ್ತು ಉಳಿದು ಬಿಡುವ ಸಹಜ ವೈರುಧ್ಯ’[೪]ವನ್ನು ರಹಮತ್ ತರೀಕೆರೆಯವರು ಈ ಸಂಕಲನಗಳಲ್ಲಿ ಗುರುತಿಸುತ್ತಾರೆ.

ಆಧುನಿಕ ಓದುಗರು ಮಾತ್ರ ವಚನಗಳನ್ನು ಮುಕ್ತವಾಗಿ ಓದುತ್ತಿದ್ದಾರೆ. ಜನಸಾಮಾನ್ಯರ ನಡುವೆ ಹುಟ್ಟಿದ ವಚನಗಳನ್ನು ವಿಜಯನಗರ ಕಾಲದ ಸಂಗ್ರಹಕಾರರು ಮಠಗಳ ಒಳಗೆ ತಂದದ್ದು ಬಹುದೊಡ್ಡ ಬೆಳವಣಿಗೆಯಾಗಿದೆ. ಹಂಪೆಯಲ್ಲಿ ಹರಿಹರ, ರಾಘವಾಂಕ, ಚಾಮರಸ, ಲಕ್ಕಣ ದಂಡೇಶ, ಮೊಗ್ಗೆಯ ಮಾಯಿದೇವ, ಗುರುಬಸವ, ಕರಸ್ಥಲದ ವೀರಣ್ಣೊಡೆಯ, ಕರಸ್ಥಲದ ನಾಗಿದೇವ ಮುಂತಾದವರು ಕಾವ್ಯಗಳನ್ನು ರಚಿಸಿರುವುದು ಕಂಡುಬರುತ್ತದೆ. ನೂರೊಂದು ವಿರಕ್ತರಲ್ಲಿ ಪ್ರೌಢದೇವರಾಯನ ಆಶ್ರಯ ಪಡೆದ ಕೆಲವರು ವೀರಶೈವ ಪ್ರಭಾವದ ನೆಲೆಯಲ್ಲಿ ಕೆಲವು ಕೃತಿಗಳನ್ನು ರಚನೆ ಮಾಡಿರುವುದು ತಿಳಿದುಬರುತ್ತದೆ.

೧೩ನೇ ಶತಮಾನದಲ್ಲಿ ಹರಿದಾಸರೂ ಕಾಣಿಸಿಕೊಂಡರು. ಮಧ್ವಾಚಾರ್ಯರ ನಂತರದ ದ್ವೈತ ತತ್ವ ಪ್ರಸಾರಕ ನರಹರಿತೀರ್ಥನೇ ಹರಿದಾಸ ಸಾಹಿತ್ಯ ಪರಂಪರೆಗೆ ಮೊದಲಿಗನಾಗಿದ್ದಾನೆ. ದಾಸಕೂಟದಲ್ಲಿಯ ಶ್ರೀಪಾದರಾಯ, ವ್ಯಾಸರಾಯ ಇವರು ಮಠಾಧೀಶರಾಗಿದ್ದರು. 'ದಾಸ ವಾಙ್ಮಯವನ್ನು ಅವಲೋಕಿಸಿದಾಗ ಹೆಚ್ಚಾಗಿ ಕಂಡುಬರುವವರು ದ್ವೈತ ಸಂಪ್ರದಾಯದ ಹರಿಸರ್ವೋತ್ತಮತ್ವವನ್ನು ಒಪ್ಪುವ 'ಹರಿದಾಸರು' ಶಿವಪಾರಮ್ಯವನ್ನು ಒಪ್ಪುವ 'ಶಿವದಾಸರು', ಬ್ರಹ್ಮತತ್ವವನ್ನು ಸಾರುವ 'ಅದ್ವೈತದಾಸರು' ಮತ್ತು ಹರಿಹರರಲ್ಲಿ ಭೇದವೆಣಿಸದ 'ಭಾಗವತದಾಸರು' ಕಾಣಸಿಗುತ್ತಾರೆ.'[೫] ಅದರಲ್ಲಿ ಪುರಂದರದಾಸ ಮತ್ತು ಕನಕದಾಸರು ಮಾತ್ರ ಹರಿದಾಸ ಸಾಹಿತ್ಯಕ್ಕೆ ಚೈತನ್ಯವನ್ನು ತುಂಬಿದರು. ಬಹು ಆಯಾಮವನ್ನು ಸೃಷ್ಟಿಸಿದರು. ವಿಜಯನಗರ ಕಾಲಾನಂತರವೂ ದಾಸರು ಕೆಲವು ಪ್ರದೇಶಗಳಲ್ಲಿ ಕಾಣಿಸಿಕೊಂಡರು.

ಹೈದ್ರಾಬಾದ್ ಕರ್ನಾಟಕದಲ್ಲಿಯ ತುಂಗಭದ್ರಾ-ಕೃಷ್ಣಾನದಿಗಳ ನಡುವಣ ಪ್ರದೇಶದಲ್ಲಿ ಪ್ರಮುಖ ದಾಸರು ಕಾಣಿಸಿಕೊಂಡರು. ಕೃಷ್ಣಾನದಿ ಮೇಲುಗಡೆಗೆ ಗುಲಬರ್ಗಾ, ಬೀದರ್ ಜಿಲ್ಲಾ ಪ್ರದೇಶಗಳಲ್ಲಿ ದಾಸರು ಕಾಣಿಸಿಕೊಳ್ಳಲಿಲ್ಲ(ತತ್ವಪದಕಾರರು ಈ ಭಾಗದಲ್ಲಿ ಹೆಚ್ಚಿಗೆ ಕಾಣಿಸಿಕೊಂಡರು). ಇದಕ್ಕೆ ರಾಜಕೀಯ, ಧಾರ್ಮಿಕ ಕಾರಣಗಳಿವೆ[೬] ಎನ್ನಲಾಗುತ್ತದೆ. ಬಹಮನಿ ರಾಜರ ಪತನಾನಂತರ ಐದು ಶಾಹಿ ರಾಜ್ಯಗಳು ಉದಯವಾದವು. ಇಮ್ಮದ್‌ಶಾಹಿ ವಂಶದ ಆಶ್ರಯದಲ್ಲಿ ಬಿರಾರ್, ನೈಜಾಮ ಶಾಹಿವಂಶದ ಆಶ್ರಯದಲ್ಲಿ ಅಹಮದ್‌ನಗರ, ಆದಿಲ್‌ಶಾಹಿ ಹಿಡಿತದಲ್ಲಿ ಬಿಜಾಪುರ, ಕುತುಬ್‌ಶಾಹಿ ವಂಶದ ಆಶ್ರಯದಲ್ಲಿ ಗೋಲ್ಕೊಂಡ ಮತ್ತು ಬರೀದ್‌ಶಾಹಿ ವಂಶದ ಹಿಡಿತದಲ್ಲಿ ಬೀದರ್ ಈ ರಾಜ್ಯಗಳು ಅಸ್ತಿತ್ವಕ್ಕೆ ಬಂದ ಮೇಲೆ ಪರಸ್ಪರರ ನಡುವೆ ಅನೇಕ ಸಂಘರ್ಷಗಳು ಶುರುವಾದವು. ಆದರೆ ಆದಿಲ್‌ಶಾಹಿ ಆಳ್ವಿಕೆ ಪ್ರಬಲವಾಗಿತ್ತು. ಬಹಮನಿ ರಾಜರ ಕಾಲಕ್ಕಾಗಲೇ ಸೂಫಿಗಳ ಆಗಮನವಾಗಿತ್ತಾದರೂ ಆದಿಲ್‌ಶಾಹಿ ಆಳ್ವಿಕೆಯ ಸಂದರ್ಭದಲ್ಲಿ ಸೂಫಿಗಳ ಪ್ರಭಾವ ಹೆಚ್ಚಾಗಿ ಇತರ ಪ್ರದೇಶಗಳ ಅನುಭಾವಿಗಳ ಮೇಲೆ ಆಗಿದೆ. ಈ ಹಿನ್ನೆಲೆಯಲ್ಲಿ ತತ್ವಪದಕಾರರು ಹೆಚ್ಚಿಗೆ ಕಾಣಿಸಿಕೊಂಡಿರುವ ಸಾಧ್ಯತೆ ಇದೆ. ರಹಮತ್ ತರೀಕೆರೆ ಅವರು ಹೇಳುವಂತೆ ಮಧುರ ಪ್ರೇಮದ ಮಾತಾಡುವ, ಜಗತ್ತಿನ ಯಾವುದೇ

ಜನತೆಯ ಒಳಗೂ ತಮ್ಮ ಅನುಭಾವದ ಕಾರಣದಿಂದ ಸೂಫಿಗಳು ಬೆರೆತುಬಿಡುತ್ತಿದ್ದರು.[೭] ಇದೊಂದು ಧಾರ್ಮಿಕವಾಗಿ ಪ್ರಭಾವ ಬೀರಿರುವ ಕಾರಣವಾಗಿದೆ ಎನ್ನಬಹುದು. ಆದರೆ ವೈದಿಕ ಪರಿಸರದ ಪ್ರದೇಶಗಳಲ್ಲಿ ಮಾತ್ರ ದಾಸರು ಮನ್ನಣೆಯನ್ನು ಪಡೆದರಾದರೂ ಇತರೆಡೆಗಳಲ್ಲಿ ಅವರು ಗಣನೀಯವಾಗಿ ಕಾಣಿಸಿಕೊಳ್ಳಲಿಲ್ಲ. ಹೀಗಾಗಿ ಧಾರ್ಮಿಕ, ರಾಜಕೀಯ ಪರಿಸರವೂ ಇದಕ್ಕೆ ಕಾರಣವಿರಬೇಕು ಅನ್ನಿಸುತ್ತದೆ.

೧೫ನೇ ಶತಮಾನದಲ್ಲಿ ಹಂಪೆಯಲ್ಲಿದ್ದ ಕೊಡೇಕಲ್ಲು ಬಸವಣ್ಣನು ಹಂಪೆ ಪರಿಸರದಲ್ಲಿನ 'ನೂರೊಂದು ವಿರಕ್ತರ' ಲಿಂಗದೀಕ್ಷೆ ಕಾರ್ಯವನ್ನು ವಿರೋಧಿಸಿ ಕೃಷ್ಣಾ ನದಿ ಪ್ರದೇಶದಿಂದ ಕೊಡೇಕಲ್ಲಿಗೆ ಬಂದು ನೆಲೆಸಿದನು. ಕೊಡೇಕಲ್ಲು ಬಸವಣ್ಣನ ಗುರು ಸಂಗಮೇಶ್ವರನು ಆರೂಢ ಪಂಥದವನು. ಆರೂಢರು ಜೀವನ್ಮುಕ್ತರು, ಇಷ್ಟದೇವತೆಯ ಸಾಕ್ಷಾತ್ಕಾರವಾಗಿರುವವರು, ಆತ್ಮಶುದ್ಧಿಯುಳ್ಳವರು ಎಂದೆಲ್ಲಾ 'ಪರಮಾರ್ಥ ಪದಕೋಶದಲ್ಲಿ' ಉಲ್ಲೇಖಿಸಲಾಗಿದೆ. ಧರ್ಮ, ಜಾತಿಯ ಸಂಕೇತಗಳನ್ನು ನಿರಾಕರಿಸಿದ ಪಂಥ ಆರೂಢರದು. ರಹಮತ್ ತರೀಕೆರೆ ಅವರು ಅಭಿಪ್ರಾಯ ಪಡುವಂತೆ 'ಕೊಡೇಕಲ್ಲ ಪರಂಪರೆ ತಾತ್ವಿಕವಾಗಿ ವಚನಕಾರರ ಮುಂದುವರಿಕೆ ಅನಿಸುವುದಿಲ್ಲ. ಬದಲಿಗೆ ವಚನಕಾರ ಅಲ್ಲಮಪ್ರಭು ಪ್ರಣೀತ ಶಾಖೆಯು ನಾಥಸಿದ್ಧ ಹಾಗೂ ಸೂಫಿಗಳ? ಸಹಜೀವನದಿಂದ ಹುಟ್ಟಿದ ಕೂಸು ಎನಿಸುತ್ತದೆ.[೮] ಈ ಹಿನ್ನೆಲೆಯ ಕೊಡೇಕಲ್ಲು ಬಸವಣ್ಣನಿಗೆ ನೂರೊಂದು ವಿರಕ್ತರ ಕಾರ್ಯಗಳು ಸಹಜವಾಗಿ ಹಿಡಿಸಲಿಲ್ಲ.

ಹೀಗಾಗಿ ಕೃಷ್ಣಾನದಿ ತೀರದ ಕೊಡೇಕಲ್ಲಿಗೆ ಬಂದು ಆರೂಢ ಪಂಥವನ್ನು ಬೆಳೆಸಲು ಮುಂದಾದರು. ಆದರೆ ಉತ್ತರ ಭಾಗದಲ್ಲಿ ಬೇರೊಂದು ಬಗೆಯ ಸಾಂಸ್ಕೃತಿಕ ಒತ್ತಡಗಳು ಶುರುವಾಗಿದ್ದವು. ಇಲ್ಲಿನ ಶಾಹಿ ರಾಜ್ಯಗಳ ಆಳ್ವಿಕೆಯಲ್ಲಿ ಇಸ್ಲಾಮ್ ಧರ್ಮದ ಬೆಳವಣಿಗೆಗಳು ತೀವ್ರವಾಗಿದ್ದವು. ಹಂಪಿಯಲ್ಲಿ ಸಾಂಸ್ಥಿಕಗೊಳ್ಳುತ್ತಿದ್ದ ವೀರಶೈವ ಧರ್ಮವನ್ನು ನಿರಾಕರಿಸಿ ಮೂಲ ಇಸ್ಲಾಂ ಧರ್ಮವನ್ನೂ ಎದುರಿಸಿದ ಕೊಡೇಕಲ್ಲು ಬಸವಣ್ಣ ತನ್ನ ಆರೂಢ ಮತ್ತು ಉತ್ತರದಿಂದ ಬಂದ ಸೂಫಿ ಪಂಥದ ಜತೆ ಸಖ್ಯ ಬೆಳೆಸಿಕೊಂಡನು. 'ಲಿಂಗ ಕಟ್ಟುವ ಶರಣರ ಪ್ರಭಾವ ತಗ್ಗಿದಂತೆ ಯೋಗ ಪಂಥಗಳು ಮತ್ತೆ ಚೈತನ್ಯ ಪಡೆದವು. ಸೂಫಿಗಳು ಸಹಜವಾಗಿ ಇಂತಹ ಅನುಭಾವ ಪಂಥಗಳ ಜತೆ ಸೇರಿಕೊಂಡರು. ನಿರಾಕಾರವಾದಿ ಇಸ್ಲಾಮಿಗಳಿಗೂ ಇದು ಪ್ರಿಯವಾದ ಚಿಂತನೆ ಆಗಿತ್ತು. ಹೀಗೆ ಬದಲಾದ ರಾಜಕೀಯ-ಧಾರ್ಮಿಕ ಸನ್ನಿವೇಶದಲ್ಲಿ ಕೊಡೇಕಲ್ಲು ಬಸವಣ್ಣ ರೂಪುಗೊಂಡನು.'[೯] ಈ ಆರೂಢ, ಸೂಫಿ ಪಂಥಗಳು ನಿಗೂಢತೆಯನ್ನು ಹೊಂದಿವೆ. ವ್ಯಕ್ತಿಗತ ಬೆಳವಣಿಗೆ, ಜಾತಿ, ಧರ್ಮವನ್ನು ನಿರಾಕರಿಸುವ ಗುರು-ಶಿಷ್ಯ ಸಂಬಂಧವನ್ನು ರೂಪಿಸಿಕೊಂಡಿವೆ. ಇವು ಪ್ರತ್ಯೇಕವಾಗಿಯೋ ಅಥವಾ ಉಪಧರ್ಮಗಳಂತೆಯೋ ಇದ್ದು ಜನವರ್ಗಗಳನ್ನು ಸೇರಲಿಲ್ಲ. ಅಂದರೆ ಜನರಿಗೆ ಇಷ್ಟವಾಗಲಿಲ್ಲ, ಮುಂದೆ ಕೊಡೇಕಲ್ಲು ಪರಂಪರೆಯಲ್ಲಿ ಮೈಸೂರು ಸೀಮೆಯ ಮಂಟೇಸ್ವಾಮಿ, ವಡಬಾಳದ ನಾಗನಾಥ, ತಿಂಥಿಣಿ ಮೋನಪ್ಪ, ಮಳೆಯಪ್ರಭು, ನಾಗಾವಿ, ಈರಪ್ಪಯ್ಯ, ಸಾಲೋಟಗಿ ಶಿವಯೋಗಿ ಮುಂತಾದವರು ಕಾಣಿಸಿಕೊಂಡರು.

೧೫ನೇ ಶತಮಾನದ ಕೊಡೇಕಲ್ಲು ಸಾಹಿತ್ಯ ಅದು ರಚನೆಯಾದರೂ ಜನರಿಗೆ ಲಭ್ಯವಾಗುತ್ತಿರಲಿಲ್ಲ. ಗುಪ್ತವಾಗಿಡುವ ಒತ್ತಡಕ್ಕೆ ಒಳಗಾಗಿತ್ತು. ನಂತರ ಪೆಟ್ಟಿಗೆಗೆ ಸೇರಿಬಿಟ್ಟಿತು. ಕೊಡೇಕಲ್ಲು ಬಸವಣ್ಣನ ಜಾತ್ರೆಯ ಸಮಯದಲ್ಲಿ ಒಂದು ನುಡಿಯನ್ನು ತೆಗೆದು ಓದಿ ಪುನಃ ಪೆಟ್ಟಿಗೆಗೆ ಸೇರಿಸುತ್ತಿದ್ದರು ಎಂದು ತಿಳಿದು ಬರುತ್ತದೆ.

ಇದೇ ಕಾಲಮಾನದ ಸುಮಾರು ಕ್ರಿ.ಶ.೧೫-೧೬ನೆಯ ಶತಮಾನದ ಹೊತ್ತಿನಲ್ಲೇ ಕೊಳ್ಳೇಗಾಲದ ರಾಜರಾಗಿದ್ದ ನಿಜಗುಣ ಶಿವಯೋಗಿಗಳು ರಾಜತ್ವದಿಂದ ಸಾಂಸಾರಿಕದಿಂದ ವೈರಾಗ್ಯ ಹೊಂದಿ ಶಂಭುಲಿಂಗನ ಬೆಟ್ಟದಲ್ಲಿ ತಪಸ್ಸು ಕೈಗೊಂಡರು. ಅವರು ಕೈವಲ್ಯಪದಗಳ(ತತ್ವಪದಗಳ), ಸೃಷ್ಟಿಯ ಆದ್ಯ ಪ್ರವರ್ತಕರು ಎನ್ನಲಾಗುತ್ತಿದೆ. ಇವರಿಂದ ಗಹನವಾದ ಮತ್ತು ಉದಾತ್ತವಾದ ತತ್ವಗಳುಳ್ಳ ಜನಪ್ರಿಯವಾದ ಸರಳವಾದ ಹೊಸ ಸಾಹಿತ್ಯ ಸೃಷ್ಟಿಯಾಯಿತು. ಆದರೆ 'ನಿಜಗುಣರು ನೂತನವಾದ ಬಸವ ಪಂಥಕ್ಕೆ ಸೇರಿದವರಲ್ಲ. ವೀರಶೈವರಲ್ಲಿ ಪ್ರಾಚೀನವಾದ ಆಚಾರ್ಯ ಸಂಪ್ರದಾಯಕ್ಕೆ ಸೇರಿದವರು ಮತ್ತು ಮೈಸೂರು, ಮಂಡ್ಯ ಹಾಗೂ ಶ್ರೀಶೈಲ ಪ್ರಾಂತ್ಯಗಳಲ್ಲಿ ಆಗಮಿಕ ವೈದಿಕ ವಿದ್ಯೆಗೆ, ವಿಚಾರಕ್ಕೆ, ಆಚಾರಕ್ಕೆ ಅತ್ಯಂತ ನಿಷ್ಠಾವಂತರಾದ ಆರಾಧ್ಯ(ಬ್ರಾಹ್ಮಣ) ವರ್ಗಕ್ಕೆ ಸೇರಿದವರು' ಎಂದು 'ಬಸವಣ್ಣನವರನ್ನು ಒಂದೇ ಒಂದು ಮಾತಿನಿಂದಲೂ ಪ್ರಸ್ತಾಪಿಸಲಿಲ್ಲವೆಂಬುದು[೦೦] ಎಲ್.ಬಸವರಾಜು ಅವರ ಅಭಿಪ್ರಾಯವಾಗಿದೆ. ಈ ದೃಷ್ಟಿಯಿಂದಲೋ ಎಂಬಂತೆ ಹೊಸದೊಂದು ಸಾಹಿತ್ಯ ಆ ಕಾಲದಲ್ಲಿ ಸೃಷ್ಟಿಯಾಗಿರಬೇಕು ಎನಿಸುತ್ತದೆ. ತಮ್ಮ ತತ್ವಪದಗಳ ಸಂಕಲನವನ್ನು ಅವರು 'ಕೈವಲ್ಯ ಪದ್ಧತಿ' ಎಂದು ಕರೆದರು. ಈ ಕಾಲದಲ್ಲಿ ಲಿಖಿತ ಸಾಹಿತ್ಯ ಸೃಷ್ಟಿಯಾಗಿದೆ. ಕೈವಲ್ಯಪದಗಳ ಹಸ್ತಪ್ರತಿಗಳು ಅನೇಕ ಮಠಮಾನ್ಯಗಳಿಂದ ರಕ್ಷಿಸಲ್ಪಟ್ಟಿರುವುದು ಕಂಡುಬರುತ್ತದೆ. 'ಕೈವಲ್ಯ' ಸಾಹಿತ್ಯವೆಂಬ ಹೆಸರಿನಲ್ಲಿ ಈ ಪರಂಪರೆಯಲ್ಲಿ ನಂತರ ಸಮಕಾಲೀನರಾದ ಮುಪ್ಪಿನ ಷಡಕ್ಷರಿ (ಕೈವಲ್ಯಪದ), ಸರ್ವಭೂಷಣ ಶಿವಯೋಗಿಗಳು (ಕೈವಲ್ಯ ಕಲ್ಪವಲ್ಲರಿ), ಬಾಲಾಲೀಲಾ ಮಹಾಂತ ಶಿವಯೋಗಿಗಳು (ಕೈವಲ್ಯ ದರ್ಪಣ) ಮುಂತಾದ ಅನುಭಾವಿಗಳು ಕರ್ನಾಟಕದ ಎಲ್ಲಾ ಭಾಗಗಳಲ್ಲಿ ಕಾಣಿಸಿಕೊಂಡರು. ತತ್ವಪದಗಳು ಮುಂದೆ ೧೭, ೧೮, ೧೯ನೇ ಶತಮಾನಗಳಲ್ಲಿ ವ್ಯಾಪಕವಾಗಿ ರಚನೆಯಾದವು.

## ತತ್ವಪದಕಾರರ ಚಳುವಳಿ

ಕರ್ನಾಟಕದ ರಾಜಕೀಯ ಚರಿತ್ರೆಯಲ್ಲಿ ೧೭, ೧೮, ೧೯ನೇ ಶತಮಾನಗಳು ಸಂಘರ್ಷಗಳಿಂದ ಕೂಡಿದ್ದವು. ಇವು ಉತ್ತರ ಮತ್ತು ಹೈದ್ರಾಬಾದ್ ಕರ್ನಾಟಕದ ಅನುಭಾವಿ ಚಳುವಳಿಗೆ ರಾಜಕೀಯ, ಸಾಮಾಜಿಕ ಸಾಂಸ್ಕೃತಿಕ ಸಂದರ್ಭಕ್ಕೆ ಕಾರಣವಾದವು. ಇವು ಒಂದನ್ನೊಂದು ಸೇರಿಕೊಂಡು ಪ್ರಭಾವಿಸುತ್ತಾ, ಪ್ರೇರೇಪಿಸುತ್ತಾ ಮತ್ತು ಪೋಷಿಸುತ್ತಲೂ ಸಂಕೀರ್ಣ ಸಂದರ್ಭವನ್ನು ನಿರ್ಮಾಣ ಮಾಡಿದವು. ಪ್ರಮುಖವಾಗಿ ಮೊಗಲರು, ಮರಾಠರು, ನಿಜಾಮರು ಮತ್ತು ಬ್ರಿಟಿಷರು ತಮ್ಮ ತಮ್ಮ ರಾಜಕೀಯ

ಶಕ್ತಿಯಿಂದ ಇಲ್ಲಿ ಪ್ರಭುತ್ವ ಸ್ಥಾಪಿಸಲು ಪ್ರಯತ್ನಿಸಿದರು. ಈ ಹಿಂದಿನ ಶತಮಾನಗಳಲ್ಲಿ ಉತ್ತರದ ಸುಲ್ತಾನರು ದಾಳಿ ನಡೆಸಿ ರಾಜಕೀಯ ಅಸ್ಥಿರತೆಯನ್ನು ಸೃಷ್ಟಿಸಿದ್ದರು. ಒಂದು ಶತಮಾನ ಕಾಲ ಖಿಲ್ಜಿ, ತುಘಲಕ್ ವಂಶದವರು ದಾಳಿ ಮಾಡಿದರು. ಆದರೆ ಗಟ್ಟಿಯಾಗಿ ನೆಲೆ ನಿಂತು ಆಳ್ವಿಕೆ ಮಾಡುವ ಆಸಕ್ತಿ ತೋರಲಿಲ್ಲ. ದಾಳಿ ಮಾಡುವ ಉದ್ದೇಶವೇ ಅವರದಾಗಿತ್ತು. ಈ ಅವಧಿಯಲ್ಲಿ ದೇವಗಿರಿಯ ಯಾದವರು ಸೇರಿದಂತೆ ಕರ್ನಾಟಕದ ಅನೇಕ ಸಂಸ್ಥಾನಗಳ ಪ್ರದೇಶಗಳು ಸುಲ್ತಾನರ ಕಾಟದಿಂದ ಕಣ್ಮರೆಯಾದವು. ಅನಂತರದ ತುಂಗಭದ್ರಾ ನದಿಯ ಮೇಲೆ ಸಾಮ್ರಾಜ್ಯವನ್ನು ಕಟ್ಟಿದ ವಿಜಯನಗರದ ಅರಸರು, ಕರ್ನಾಟಕದ ಉತ್ತರ ಭಾಗದಲ್ಲಿ ಬಹಮನಿ, ಆದಿಲ್‌ಶಾಹಿಗಳು ಪರಸ್ಪರ ನಿರಂತರವಾಗಿ ಯುದ್ಧಗಳಲ್ಲಿ ಮುಳುಗಿದರು. ಇವು ಅನೇಕ ಸಂಘರ್ಷಗಳನ್ನು ಹುಟ್ಟುಹಾಕಿದವು. ಮುಂದೆ ಉತ್ತರದ ಔರಂಗಜೇಬ, ವಿಜಾಪುರದ ಸುಲ್ತಾನರು, ಮರಾಠರು, ಮೊಗಲರಿಗೆ ಪರಸ್ಪರ ಯುದ್ಧಗಳಾದವು. ಈ ಸಂಘರ್ಷ, ಯುದ್ಧಗಳು ಗೊಂದಲದ ವಾತಾವರಣವನ್ನು ನಿರ್ಮಿಸಿದವು. ಈ ಸಂದರ್ಭದಲ್ಲಿಯೇ ಡಚ್ಚರು, ಪೋರ್ಚುಗೀಸರು ಭಾರತವನ್ನು ಪ್ರವೇಶಿಸಿದರು. ಇವರ ಜೊತೆಯೇ ಫ್ರೆಂಚರು, ಬ್ರಿಟಿಷರು ಬಂದರು. ೧೬ನೇ (೧೬೫೯) ಶತಮಾನದ ಕೊನೆಯಲ್ಲಿ ವ್ಯಾಪಾರಿ ಉದ್ದೇಶಕ್ಕೆಂದು ಬಂದ ಬ್ರಿಟಿಷರು ತನ್ನ ಕೋಟೆಯನ್ನು ಸೂರತ್‌ನಲ್ಲಿ ಸ್ಥಾಪಿಸಿಕೊಂಡು ಮುಂದೆ ೧೭೫೭ರ ಪ್ಲಾಸಿ ಕದನದಲ್ಲಿ ಸಿರಾಜುದ್ದೌಲನನ್ನು ಸೋಲಿಸುವುದರ ಮೂಲಕ ನೇರವಾಗಿ ರಾಜಕೀಯ ರಂಗಕ್ಕೆ ಪ್ರವೇಶಿಸಿದರು.

ಹೈದ್ರಾಬಾದ್ ಕರ್ನಾಟಕ ಭಾಗದಲ್ಲಿ ನಿಜಾಮರು ಅಧಿಕಾರದಲ್ಲಿರುವ ಅನ್ಯದೇಶದ ವ್ಯಾಪಾರಿಗಳನ್ನು ಸೆಳೆದುಕೊಳ್ಳಲು ಪ್ರಯತ್ನಿಸಿದರು. ಈ ಕಾರಣದಿಂದ ಸ್ಥಳೀಯ ಮತ್ತು ದೇಶಿಯ ರಾಜರ ಸಖ್ಯ ಬೆಳೆಸಲು ತೀವ್ರ ಪೈಪೋಟಿಗಳೇ ನಡೆದವು. ನಾಡಿನ ಸಂಪತ್ತನ್ನು ಹಂಚಿಕೊಳ್ಳಲು ಈ ಅನ್ಯದೇಶಿಯರ ಮಧ್ಯೆ ಏರ್ಪಟ್ಟ ಸಂಘರ್ಷಗಳಲ್ಲಿ ದೇಶಿಯ, ಸ್ಥಳೀಯ ರಾಜರು ತಮಗರಿವಿಲ್ಲದಂತೆ ತಮ್ಮ ಶಕ್ತಿಯನ್ನು ಕಳೆದುಕೊಂಡರು. ಬ್ರಿಟಿಷರು ಈ ಲಾಭವನ್ನು ಪಡೆದುಕೊಂಡರು. ಈ ಮೂಲಕ ಬಹು ಬೇಗನೆ ಭಾರತೀಯ ಬದುಕನ್ನು ತನ್ನ ನಿಯಂತ್ರಣಕ್ಕೆ ತರುವಲ್ಲಿ ಯಶಸ್ವಿಯಾದರು. ತಮ್ಮ ಉದ್ದೇಶ ಸಫಲವಾಗುತ್ತಾ ಹೋದಂತೆಲ್ಲ ಮುಂದೆ ಆಗಾಗ ದಾಳಿ ಮಾಡುತ್ತಿದ್ದ ಮರಾಠರು ಮತ್ತು ನಿಜಾಮರೊಡನೆ ಒಪ್ಪಂದ ಮಾಡಿಕೊಂಡರು. ತನ್ನ ಚಾಣಾಕ್ಷ ರಾಜನೀತಿ, ಕೌಶಲದಿಂದ ಸ್ಥಳೀಯ ರಾಜರ ಬೆಂಬಲದಿಂದ ದಕ್ಷಿಣದಲ್ಲಿ ಪ್ರಬಲರಾಗಿದ್ದ ಹೈದರ್‌ಅಲಿ ಮತ್ತು ಟಿಪ್ಪುಸುಲ್ತಾನರನ್ನು ಸದೆಬಡಿದರು. ನಂತರದಲ್ಲಿ ಮೈಸೂರು ಒಡೆಯರು, ಉತ್ತರದಲ್ಲಿ ನಿಜಾಮರು ಬ್ರಿಟಿಷರ ಅಧೀನದಲ್ಲಿಯೇ ಅಧಿಕಾರ ನಡೆಸಿದರು.

ಹೀಗೆ ೧೭, ೧೮ ಮತ್ತು ೧೯ನೇ ಶತಮಾನಗಳ ಉದ್ದಕ್ಕೂ ರಾಜಕೀಯ ಸ್ಥಿತ್ಯಂತರಗಳು ನಡೆದವು. ಯುದ್ಧಗಳಿಂದ ಅನಾಯಕತ್ವದಿಂದ ಸಮಾಜದಲ್ಲಿ ಅರಾಜಕತೆ, ದರೋಡೆಗಳು, ಕ್ಷಾಮ, ಸಾಂಕ್ರಾಮಿಕ ರೋಗಗಳಿಂದ ಜನರಿಗೆ ನೆಮ್ಮದಿ ಇರಲಿಲ್ಲ. ರಾಜಕೀಯ ಅಸ್ಥಿರತೆಯಲ್ಲಿ ವಿನಾಶಕಾರಿ ಕೃತ್ಯಗಳು

ನಡೆದವು. ದೈಹಿಕವಾಗಿ, ಮಾನಸಿಕವಾಗಿಯೂ ಜನಸಾಮಾನ್ಯರು ಕುಸಿದಿದ್ದರು. ಅನೇಕ ಬಗೆಯ ಕಷ್ಟಗಳನ್ನು ಅನಿವಾರ್ಯವೆಂಬಂತೆ ಅನುಭವಿಸಿದರು. ಬೇರೆ ಬೇರೆ ಧರ್ಮ, ಭಾಷೆ-ಸಂಸ್ಕೃತಿಯ ಒತ್ತಡಗಳನ್ನು ಆತಂಕಗಳನ್ನು ಜನವರ್ಗಗಳು ಸ್ವೀಕರಿಸಬೇಕಾಯಿತು. ಈ ಕಾರಣವಾಗಿ ಜನಗಳ ಬದುಕು ಅಸ್ಥಿರವಾಯಿತು. ಈ ಸಂದಿಗ್ಧತೆಯಲ್ಲಿಯೇ ಅಪಾರ ಸಂಖ್ಯೆಯ ಅನುಭಾವಿಗಳು, ತತ್ವಪದಕಾರರು ಕಾಣಿಸಿಕೊಂಡರು. ಅವರ ರಚನೆಗಳ ಮೂಲಕ ನೆಮ್ಮದಿ ತರಲು ಶ್ರಮಿಸಿದರು.

ಅಮರೇಶ ನುಗಡೋಣಿ ಅವರು ಇಂಥ ಸಂದರ್ಭದಲ್ಲಿಯೇ ''ವಿರಕ್ತಿ'ಯೂ ಹುಟ್ಟುತ್ತದೆ ಮತ್ತು ಅದು ಅಸ್ತ್ರವಾಗಿಯೂ ಪರಿಣಮಿಸುತ್ತದೆ. ಯುದ್ಧವಾದಿಗಳನ್ನು ಒಂದು ಕಡೆ, ವಿರಕ್ತಿಗಳನ್ನು ಮತ್ತೊಂದು ಕಡೆ ಮುಖಾಮುಖಿಯಾಗಿಸಿ ಬೇರೊಂದು ಬದುಕಿಗೆ ದಾರಿ ಮಾಡಿಕೊಡಲು, ಅದು ಜನಸಮುದಾಯಗಳನ್ನು ವಿರಕ್ತಿಯ ಕಡೆ ಒಲಿಯಲು ಪ್ರೇರೇಪಿಸುತ್ತದೆ ಇದು ಆಳುವ ಪ್ರಭುತ್ವವಾದಿಗಳಿಗೆ ಸಂತರು ಒಡ್ಡಿದ ಸವಾಲೆಂದೇ ಹೇಳಬೇಕು. ಬದುಕಿನ ಆತಂಕದಿಂದ ಬಿಡುಗಡೆ ಹೊಂದಲು ಈ ಪ್ರಾಂತದಲ್ಲಿ ಸಂತರು ಯುದ್ಧಗಳ ನಾಡಿನಲ್ಲಿ ವಿರಕ್ತಿಯನ್ನು ಚಿಗುರಿಸಲು ಶ್ರಮಿಸಿದರು. ಈ ವಿರಕ್ತಿಯೊಳಗೆ ಪ್ರಭುತ್ವವನ್ನು ಧಿಕ್ಕರಿಸುವ ಶಕ್ತಿಯೂ ಮೂಡಿತ್ತು. ಸೂಫಿಗಳು, ಯೋಗಿಗಳು, ಅನುಭಾವಿಗಳು ಮತ್ತು ತತ್ವಪದಕಾರರು ಜನಸಮುದಾಯಗಳಲ್ಲಿ ಮೂಡಿಸಿದ ಈ ವಿರಕ್ತಿಯು ವೈರಾಗ್ಯ, ಸನ್ಯಾಸ ಎಂಬ ಅರ್ಥದಲ್ಲಿ ಅಲ್ಲ. ಪ್ರಾಪಂಚಿಕ ಸುಖಗಳ ಮೇಲೆ ಅತಿಯಾದ ಮೋಹವನ್ನು ಇಟ್ಟುಕೊಳ್ಳದೇ ಬದುಕುವುದು. ಸಂಪತ್ತು, ಅಧಿಕಾರದ ದಾಹ ಇರುವವರನ್ನು ನಿರ್ಲಕ್ಷಿಸುವುದೇ ಮುಖ್ಯ ಉದ್ದೇಶ ಆಗಿತ್ತು ಎನ್ನುತ್ತಾ ರಾಜಕೀಯ, ಸಾಮಾಜಿಕ ಬವಣೆಗಳನ್ನು ಈ 'ವಿರಕ್ತಿ' ಮಾನಸಿಕವಾಗಿಯಾದರೂ ಗೆಲ್ಲುವ ಕಲೆಯನ್ನು ಕಲಿಸಿದೆ. ಅದೊಂದು 'ಧಾರಣಶಕ್ತಿ' ಎಂದರೆ ಸರಿಯಾದೀತು. ಈ ಧಾರಣ ಶಕ್ತಿಯೇ ಲೌಕಿಕವನ್ನು ಮೀರುವ, ಅನುಭಾವದ ಕಡೆ ನಡೆಯುವ ದಾರಿಯಾಗಬಹುದು. ಪ್ರಭುತ್ವವಾದಿಗಳ ದಾಹದ ಮುಂದೆ ಈ ದಾರಿ ಪ್ರತಿಕ್ರಿಯೆಯಾಗಿ ಪರಿಣಮಿಸಬಹುದು. ಜನಸಾಮಾನ್ಯರನ್ನು ಈ ನಿಲುವಿಗೆ ಪರಿವರ್ತಿಸುವುದು ಸಂತರಿಂದ ಸಾಧ್ಯವಾಗಿದೆ.'[೧೧] ಎನ್ನುತ್ತಾರೆ. ಅಂದರೆ ಅನುಭಾವಿಗಳು ಅಧಿಕಾರ, ಸಂಪತ್ತು, ಸಾಂಸ್ಥಿಕತೆ ಇವುಗಳನ್ನು ನಿರ್ಲಕ್ಷಿಸುವ ಮೂಲಕ ಜನಸಮುದಾಯಗಳಲ್ಲಿ 'ಶಾಂತಿ'ಯನ್ನು ಹುಟ್ಟು ಹಾಕಲಿಕ್ಕೆ 'ವಿರಕ್ತಿ'ಯನ್ನು ಬಳಸಿದ ಸಾಧ್ಯತೆಯೂ ಇದೆ.

೧೮-೧೯ನೇ ಶತಮಾನದಲ್ಲಿ ಬಹುಸಂಖ್ಯೆಯಲ್ಲಿ ಕಾಣಿಸಿಕೊಂಡ ಅನುಭಾವಿಗಳು ಮತ್ತು ತತ್ವಪದಕಾರರು ತಮ್ಮ ಆನುಭಾವಿಕ ವ್ಯಕ್ತಿತ್ವದಿಂದಲೇ ಸಮುದಾಯವನ್ನು ''ಅನುಭಾವಿಯಾಗಿ ನೋಡಣ್ಣ/ ಜೀವ ತನುಭವದನುವನು/ತಿಳಿಯೋ ಮಂಗಣ್ಣ''[೧೨] ಎಂದು ಹಾಡಿ ಸಂಚಲನಗೊಳಿಸಿದರು. ಪರಸ್ಪರರು ಬೆರೆತು ಬಾಳುವ ಬದುಕನ್ನು ರೂಢಿಸಿದರು. ಅಂತೆಯೇ ಬಾಳುತ್ತಿದ್ದ ಇವರು ಕಾಯದ ಅಸ್ಥಿರತೆಯನ್ನು ತಿಳಿಸಿ ಅನುಭಾವದ ಕಡೆ ಮನಸ್ಸನ್ನು ತಿರುಗಿಸಿದರು. ತತ್ವಗಳನ್ನು ಹಾಡುವುದರ ಮೂಲಕ ಆತಂಕಗೊಂಡಿದ್ದ

ಜನಸಮುದಾಯಗಳಲ್ಲಿ ಮಾನಸಿಕ ನೆಮ್ಮದಿಯನ್ನು ಮೂಡಿಸಿದರು. ಸಂಗೀತದ ಧಾಟಿಯಲ್ಲಿದ್ದ ಈ ಸಂತರ ಹಾಡುಗಳು ಕೇಳುಗರಲ್ಲಿ ಮನೆ ಮಾಡಿದವು. ಈ ಶತಮಾನದ ಬಹುಕಾಲದವರೆಗೂ ಏಕತಾರಿನಾದದ ಮೂಲಕ ಬತ್ತದ ನೀರಿನ ಒರತೆಯಂತಿರುವ ತತ್ವಪದ ಹಾಡುಗಳನ್ನು ನಾಡಿನ ಉದ್ದಗಲಕ್ಕೂ ಹಳ್ಳಿ ಹಳ್ಳಿಗಳಲ್ಲಿ ಹಾಡಲಾರಂಭಿಸಿದರು. ಅಷ್ಟರಮಟ್ಟಿಗೆ ಈ ಅನುಭಾವಿಗಳು, ಸಂತರು ಜನವರ್ಗಗಳಲ್ಲಿ ಬೆರೆತುಹೋಗಿದ್ದಾರೆ.

ಬಹಮನಿ ಸಾಮ್ರಾಜ್ಯ ಆಳ್ವಿಕೆ ಕಾಲದಲ್ಲಿ ಈ ಭಾಗದ ಜನಗಳಿಗೆ ಅಪರಿಚಿತ ಸಂಸ್ಕೃತಿಯೊಂದರ ಜೊತೆ ಬಾಳುವ ಪರಿಸರ ಸೃಷ್ಟಿಯಾಯಿತು. ಆರಂಭದಲ್ಲಿ ಇದು ಹೊಸ ರೀತಿಯಾಗಿ ಕಂಡರೂ ನಂತರ ಪರಕೀಯವಾಗಿ ಘರ್ಷಣೆಗಳೂ ಏರ್ಪಟ್ಟವು. ಒಂದೇ ರಾಜರ ಆಳ್ವಿಕೆಯಲ್ಲಿ ಎರಡು ಸಂಸ್ಕೃತಿಗಳು ಬಾಳುವುದು ಅನಿವಾರ್ಯವಾಗಿತ್ತು. ಈ ಕಾಲದಲ್ಲಿ ನೆಲೆ ನಿಂತಿದ್ದ ಸೂಫಿಗಳು ಜನಸಮುದಾಯದಲ್ಲಿ ಬೆರೆತರು. ಇವರ ಜೊತೆ ಸೇರಿದ ತತ್ವಪದಕಾರರು ಸಾಮಾನ್ಯ ಜನರ, ದುಡಿವ ವರ್ಗಗಳ, ಕೆಳಸ್ತರದ ಜನಗಳ ಜತೆ ಬೆರೆತು ಜಾತಿಮತಗಳನ್ನು ಮೀರಿ ನಿಲ್ಲುವ ಸಾಮರಸ್ಯವಾದಿ ಶಕ್ತಿಯನ್ನು ಸೃಷ್ಟಿಸಿದರು.

ಈ ಕಾಲದ ರಾಜಕೀಯ ಒತ್ತಡಗಳು ಇಲ್ಲಿಯ ಕೆಳಹಂತದ ಜನಗಳನ್ನು ಮುಸ್ಲಿಂ ಮತಕ್ಕೆ ಮತಾಂತರಗೊಳ್ಳುವಂತೆ ಮಾಡಿದ್ದವು. ಆದರೆ ಮತಾಂತರಗೊಂಡರೂ ಹೊಸ ಧಾರ್ಮಿಕತೆ ಇವರನ್ನು ಅಷ್ಟು ಪ್ರಭಾವಿಸಲಿಲ್ಲ. ಅವರಲ್ಲಿದ್ದ ತಮ್ಮ ಮೂಲ ಸಂಸ್ಕೃತಿಯನ್ನು ಹಾಗೇ ಉಳಿಸಿಕೊಂಡು ಬಂದರು. ಈ ಸಂದರ್ಭದಲ್ಲಿ ಸೂಫಿಗಳು, ತತ್ವಪದಕಾರರು ಎರಡು ಸಂಸ್ಕೃತಿಗಳ ನಡುವೆ ಸೇತುವೆಯಾದರು. ಇವರು ತಮ್ಮದೇ ಆದ ಧರ್ಮದ ಕವಲುದಾರಿಯಲ್ಲಿ ನಡೆದರು. ಈ ದಾರಿಯನ್ನು ಅರಸಿ ಮತಾಂತರಗೊಂಡ ಕೆಳವರ್ಗದವರು, ಇನ್ನಿತರೆ ಜನಸಮುದಾಯಗಳು ಈ ಸಂತರನ್ನು ಸೇರಿಕೊಂಡರು. ಈ ಎರಡೂ ಅಂದರೆ ಮತಾಂತರಗೊಂಡವರು ಮತ್ತು ಮತಾಂತರಗೊಳ್ಳದವರ ನಡುವೆ ಸೌಹಾರ್ದತೆ ಸಹಜವಾಗಿಯೇ ಏರ್ಪಟ್ಟಿತು. ವ್ಯವಹಾರ, ಸಂಪ್ರದಾಯ, ಆಚರಣೆ ಮುಂತಾದವುಗಳ ಮೇಲೆ ಪರಸ್ಪರ ಪ್ರಭಾವವಾದವು. ಮುಸ್ಲಿಮರ ಮೊಹರಂ, ಉರುಸು ಮುಂತಾದ ಮತ ಸಂಬಂಧಿ ಆಚರಣೆಗಳಲ್ಲಿ ಸಂಭ್ರಮ, ಮನರಂಜನೆಗಳೂ ಇರುವುದರಿಂದ ಮುಸ್ಲಿಮೇತರರು ಭಾಗಿಯಾದರು. ಹಾಗೆಯೇ ಮುಸ್ಲಿಮರು ಇತರೆ ಜಾತಿಗಳ ಜಾತ್ರೆ, ಮದುವೆ, ಹಬ್ಬಗಳಲ್ಲಿ ಭಾಗಿಯಾದರು. ಇದು ಎರಡು ಸಂಸ್ಕೃತಿಗಳಲ್ಲಿ ಸಹಜವಾಗಿ ನಡೆಯಿತು. ಈ ಎರಡು ಸಮುದಾಯಗಳ ಸಹಬಾಳ್ವೆಯನ್ನು ಕಂಡ ಸಂಶೋಧಕ ಕಪಟರಾಳ್ ಕೃಷ್ಣರಾವ್ ದಿಗ್‌ಭ್ರಮೆಗೊಂಡು 'ಮುಸಲ್ಮಾನ ಪಕೀರರು ಗುರುಗಳಾದರು. ವೇದವು ಕುರಾನವು ಒಂದೇಯಾಯಿತು. ಈ ಪಕೀರರ ಗೋರಿಗಳೇ ದೇವಸ್ಥಾನಗಳಾದವು. ಕನ್ನಡಗರಿಗೆ ಗೋರಿಗಳು ಕುಲ ದೈವತಗಳಾದವು. ಸಮಾಜದ ಮಾರ್ಗದರ್ಶಿಗಳಾದ ಮೇಲ್ತರಗತಿಯ ಜನರ ಸ್ಥಿತಿಯು ಈ ರೀತಿಯಾಗಿ ಮಾನಸಿಕ ಬದಲಾವಣೆಯಾದಲ್ಲಿ ಸಮಾಜದ ಸಾಮಾನ್ಯ ಜನರು ಲಾಡಿ ಕಟ್ಟಿಕೊಂಡು ದೀನ ದೀನ

ಎನ್ನುತ್ತ ಗೋರಿಗಳಿಗೂ ಪೀರರಿಗೂ ನೈವೇದ್ಯವನ್ನು ಕೊಡುವುದು ರೂಢಿಯಾದದ್ದೇನು ಆಶ್ಚರ್ಯದ ಮಾತಲ್ಲ' ಎಂದು ವ್ಯಕ್ತಪಡಿಸಿರುವುದನ್ನು ಅಮರೇಶ ನುಗಡೋಣಿ ಅವರು ಉಲ್ಲೇಖಿಸುತ್ತಾ ಈ ಹಿನ್ನೆಲೆಯಲ್ಲಿ ಎರಡು ಅಭಿಪ್ರಾಯಗಳನ್ನು ಅವರು ಸರಿಯಾಗಿಯೇ ವ್ಯಕ್ತಪಡಿಸಿದ್ದಾರೆ. ಒಂದು ಮುಸ್ಲಿಮೇತರರೇ ಮುಸ್ಲಿಮರ ಜತೆ ಬೆರೆತಿರುವುದು. ಎರಡನೆಯದು ಮೇಲ್ವರ್ಗದವರೂ ಇದರಲ್ಲಿ ಭಾಗಿಯಾಗಿರುವುದು.[೧೩] ಈ ಪ್ರಾಂತ್ಯದಲ್ಲಿ ಈ ಪ್ರಕ್ರಿಯೆ ಕಳೆದ ಮೂರು ಶತಮಾನಗಳಿಂದ ನಡೆಯುತ್ತ ಬಂದಿದೆ.

ಈ ಪ್ರಭಾವ ಅದೆಷ್ಟರ ಮಟ್ಟಿಗೆ ಆಗಿದೆಯೆಂದರೆ ಸಮುದಾಯಗಳಲ್ಲಿನ ವ್ಯಕ್ತಿಗಳ ಹೆಸರುಗಳೂ ಕೂಡ ಬೆರೆತು ಹೋಗಿವೆ. ಇಂದಿಗೂ ಖ್ವಾಜಾ ಬಂದೇ ನವಾಜ್, ಶಿಶುನಾಳ(ಶರೀಫ್), ತಿಂಥಿಣಿ (ಮೌನೇಶ್ವರ), ಶಿರಹಟ್ಟಿ(ಪಕೀರೇಶ್ವರ), ಸಾವಳಗಿ(ಶಿವಲಿಂಗ) ಇಂಥವು ಪವಿತ್ರ ಯಾತ್ರಾ ಸ್ಥಳಗಳಾಗಿ ಸೃಷ್ಟಿಯಾಗಿವೆ. ಜನಸಮುದಾಯಗಳ ಜಾಗೃತ ಕೇಂದ್ರಗಳಾಗಿವೆ.

ಇವುಗಳ ವೇಷ, ಆಚರಣೆಗಳ ಸಾಮ್ಯತೆಯನ್ನು ರಹಮತ್ ತರೀಕೆರೆ ಅವರು ಈ ರೀತಿ ಗುರುತಿಸುತ್ತಾರೆ. 'ಕೊಡೇಕಲ್, ಸಾವಳಗಿ, ಶಿರಹಟ್ಟಿ, ಬಬಲಾದಿ ಪರಂಪರೆಗಳಲ್ಲಿ ಈಗ ಗುರುಪೀಠ ಏರುವ ವ್ಯಕ್ತಿಗಳು ಹಸಿರು ಪೇಟ ಶೇರ್ವಾನಿ ಪಾಯಿಜಾಮ ವೇಷವನ್ನು ಧರಿಸುತ್ತಾರೆ. ನಿಡುವಂಚಿ ಭದ್ರೇಶ್ವರ, ಮಾಣಿಕ ಪ್ರಭು, ತಿಂತಿಣಿಮೋನಪ್ಪ ಕೂಡ ಈ ಧಿರಿಸು ಧರಿಸುತ್ತಿದ್ದರು ಎಂದು ಬಿಜಾಪುರದ ಸೂಫಿಗಳ ಗಾಢ ಸಂಸರ್ಗದಲ್ಲಿ ಬದುಕಿದ್ದ ಚಿದಾನಂದ ಅವಧೂತನ(೧೭೮೧) ಒಂದು ಪದ ಹಲವು ರೂಪಗಳಲ್ಲಿ ಪಕೀರತನವು ತನ್ನನ್ನು ಆವರಿಸಿಕೊಂಡಿದ್ದನ್ನು ಬಣ್ಣಿಸುವ ಪದವನ್ನು ಈ ರೀತಿ ಉಲ್ಲೇಖಿಸುತ್ತಾರೆ.

ಮಾಡಿದನೆನ್ನ ಪಕೀರನಾ ಸದ್ಗುರು| ಮಾಡಿದನೆನ್ನ ಪಕೀರತನ
ನೋಡಲಿಕಾಶ್ಚರ್ಯ ಪ್ರಪಂಚ ಕಳದೆ ನಾಮರೂಪಕೆ ದೂರ ||ಪ||

ಅನುಭವ ಕಪ್ಪರ ಹೃದಯ ಜೋಳಿಗೆ ಎನ್ನಯ ಕಂಕೊಳೊಳಿಟ್ಟಾ |
ಅನಿಮಿಷ ದೃಷ್ಟಿ ಅರುಹಿನ ಕಂಪನಿ ಅಮೃತ ಕಮಂಡಲು ಕೊಟ್ಟ ||೧||

ನಾದದ ಕಿನ್ನರಿ ಕೈಯೊಳಗಿಟ್ಟ ಟೊಪ್ಪಿಗೆ ಪೆಟ್ಟಿಗೆಯಿಟ್ಟ |
ಬೋಧದ ಭಂಗಿಯ ನಿರ್ಗುಣ ಲುಂಗಿಯ ಸೈರಣೆ ಲುಟಿಕೆಯ ಕೊಟ್ಟ ||೨||

ಈ ಪರಿ ಮಾಡಿಯೆ ಬಯಲನು ಹಿಡಿ ಎಂದು ಕರವನ್ನು ನೆತ್ತಿಯಲ್ಲಿಟ್ಟ |
ಭೂಪ ಚಿದಾನಂದ ಪಕೀರನಾಗಿಯೇ ತಿರುಗೆಂದಪ್ಪಣೆ ಕೊಟ್ಟ ||೩||

ಕಪನಿ, ಲುಂಗಿ, ತೊಪ್ಪಿಗೆ ಹೀಗೆ ಪಕೀರ ವೇಷದ ಬಾಹ್ಯವಸ್ತುಗಳೆಲ್ಲ"[೧೮] ಈ ಪದದಲ್ಲಿ ಬಂದಿರುವುದನ್ನು ಕಾಣಬಹುದು. ಹಾಗಾದರೆ ಈ ಅನುಭಾವಿಗಳಿಗೆ ವೇಷ ಮುಖ್ಯವಾಗಿತ್ತೆ? ವೇಷ ಮುಖ್ಯವಾಗಿರಲಿಲ್ಲ, ಯೋಗ ಸಾಧನೆಯ ಬೇರೆ ಬೇರೆ ಹಂತಗಳನ್ನು ಸೂಚಿಸಲು ಧರಿಸುತ್ತಿದ್ದರು ಎಂದು ಹೇಳಲಾಗುತ್ತಿದೆ.

ಹೀಗೆ ಸೌಹಾರ್ದತೆಯ ಫಲವೆಂಬಂತೆ ಮುಸ್ಲಿಮ ತತ್ವಪದಕಾರರು ಕನ್ನಡದಲ್ಲಿ ಉರ್ದುವಿನಲ್ಲಿ ಸಾಹಿತ್ಯ ರಚಿಸಿರುವರು. ಹಾಗೆಯೇ ಮುಸ್ಲಿಮೇತರರು ಉರ್ದುವಿನಲ್ಲಿ, ಕನ್ನಡದಲ್ಲಿ ಸಾಹಿತ್ಯ ರಚಿಸಿರುವುದು ಕಂಡುಬರುತ್ತದೆ. ವಸಾಹತುಶಾಹಿ ರಾಜಕೀಯ ಒತ್ತಡಗಳಿಗಾಗಿ ಕೆಲವು ಜನ ವರ್ಗಗಳು ಕ್ರೈಸ್ತಮತಕ್ಕೂ ಮತಾಂತರ ಹೊಂದಿದರು. ಆದರೆ ಹಿಂದೂ-ಮುಸ್ಲಿಮರ ಎರಡು ಸಂಸ್ಕೃತಿಗಳಲ್ಲಿ ಮೂಡಿದ ಸೌಹಾರ್ದತೆ, ಕ್ರೈಸ್ತ ಮತಾವಲಂಬಿಗಳ ಜೊತೆ ಮೂಡಲಿಲ್ಲ. ಇದಕ್ಕೆ ವಸಹಾತುಶಾಹಿ ರಾಜಕೀಯ ಕಾರಣಗಳೂ ಇವೆ. ಮತಾಂತರಗೊಂಡ ಕ್ರೈಸ್ತರ ಮೇಲೆ ವಸಾಹತುಶಾಹಿ ಕ್ರೈಸ್ತ ಅಧಿಕಾರಿಗಳ ಹಿಡಿತವಿತ್ತು. ಹೀಗಾಗಿ ಮತಾಂತರಗೊಂಡವರಿಗೆ ತಾವು ಯಾವುದೇ ಸ್ಥಳೀಯ ಆಚರಣೆಗಳಲ್ಲಿ ಭಾಗವಹಿಸಲು ಸಾಧ್ಯವಾಗಲಿಲ್ಲ. ಆದರೆ ಮುಸ್ಲಿಂ ಮತಕ್ಕೆ ಮತಾಂತರಗೊಂಡವರಿಗೆ ಈ ಯಾವುದೇ ತೆರನಾದ ನಿಯಂತ್ರಣ, ನಿರ್ಬಂಧಗಳು ಇರಲಿಲ್ಲ. ಅವರು ಸಹಜವಾಗಿಯೆಂಬಂತೆ ತಮ್ಮ ಮೂಲ ಆಚರಣೆಗಳಲ್ಲಿ ಭಾಗಿಯಾಗಿ ತಮ್ಮ ಮೂಲದೈವಗಳಾದ ಎಲ್ಲಮ್ಮ, ಈರಣ್ಣ ಮುಂತಾದ ದೇವರುಗಳಿಗೆ ನಡೆದುಕೊಳ್ಳುತ್ತಿದ್ದರು. ಎಲ್ಲಮ್ಮನ ಜಾತ್ರೆ, ಪಂಚಮಿ ಹಬ್ಬಗಳಂತಹ ಆಚರಣೆಗಳಲ್ಲೂ ಭಾಗವಹಿಸುತ್ತಿದ್ದರು. ಇದಕ್ಕೆ ಮತಾಂತರಗೊಂಡ ಮುಸ್ಲಿಂ ಧರ್ಮ ಇವರಿಗೆ ಸ್ವಾತಂತ್ರ್ಯವನ್ನು ನೀಡಿತ್ತು. ಆದರೆ ಕಟ್ಟುನಿಟ್ಟಿನ ಕ್ರೈಸ್ತ ಮತಾವಲಂಬಿಗಳಿಗೆ ಇದು ಸಾಧ್ಯವಾಗಲಿಲ್ಲ. ಮತಾಂಧತೆ ವಿಜೃಂಭಿಸುವುದಕ್ಕೆ ಕುಮ್ಮಕ್ಕು ಸಿಗುತ್ತಿರುವಾಗಲೇ ಈ ಪ್ರವೃತ್ತಿಯನ್ನು ತಡೆದು ಸಾಮರಸ್ಯ ಮೂಡಿಸಲು ತತ್ವಪದಕಾರರು ಶ್ರಮಿಸಿದರು. ಯುದ್ಧಗಳ ಭೀಕರತೆಯನ್ನು ಅರಿತ ಗ್ರಾಮೀಣ ಜನತೆಯೂ ಮತಾಂಧತೆಯ ವಿರುದ್ಧ ಸಾಮರಸ್ಯಪರ ಸಮನ್ವಯಕ್ಕೆ ಮಿಡಿಯುತ್ತಿದ್ದರು. ಆ ಕಾಲದ ಜನತೆ ಮತಾಂಧರ ಜೊತೆ ಬೀದಿ ಕಾಳಗಕ್ಕೆ ಇಳಿಯದಿದ್ದರೂ ಅದರ ಎಲ್ಲ ಸಮಸ್ಯೆಗಳನ್ನು ಸಂತರ ಚಳುವಳಿಯ ಮೂಲಕ ಎದುರಿಸುವ ನೈತಿಕ ಶಕ್ತಿಯನ್ನು ಪಡೆಯಿತು.

ತತ್ವಪದಕಾರರದು ಕೇವಲ ವೈರಾಗ್ಯಪರ ಸಾಹಿತ್ಯ, ಜೀವನದ ನಶ್ವರವನ್ನು ಕುರಿತು ಹೇಳುತ್ತದೆ. ಇಲ್ಲಿರುವ ಮುಸ್ಲಿಂ ತತ್ವಪದಕಾರರು ಅನೇಕ ರಾಜರ ಯುದ್ಧ, ಶೋಷಣೆ, ಅತ್ಯಾಚಾರದ, ಹಾವಳಿಗಳನ್ನು ಕಂಡರೂ ಅದಕ್ಕೆ ಪ್ರತಿಕ್ರಿಯಿಸಲಿಲ್ಲ. ಇವರ ಸಾಹಿತ್ಯ ವಸಾಹತುಶಾಹಿಪರ ತೋರಿದ ಪ್ರತಿಕ್ರಿಯೆಗಳೆಂದು, ಇವರು ಸಮಾಜದ ವ್ಯವಸ್ಥೆಯಿಂದ ದೂರ ಸರಿದು ಮಾತನಾಡುವ ಫಲಾಯನವಾದಿಗಳೆಂದು, ಶರಣಾಗತಿ ಮತ್ತು ಕೀಳರಿಮೆಗಳನ್ನು ಹೊಂದಿದ ಅಭಿವ್ಯಕ್ತಿಗಳೆಂದು, ಮೇಲು ಸಂಸ್ಕೃತಿಗೆ ಸಲಾಮು ಹಾಕ ಹೊರಟ ಪ್ರಯತ್ನ ಎಂದು, ಕೇವಲ ಮನಸ್ಸಿನ ಬದಲಾವಣೆ ಬಯಸಿದ ಸಾಹಿತ್ಯ ಎಂದು, ಹಿಂದೂ ಸನಾತನವಾದದ

ಕೆಳವರ್ಗದ ಪ್ರತಿಪಾದಕರು ಎಂದು, ಒಟ್ಟಾರೆ ತತ್ವಪದಕಾರರದು ಶೂನ್ಯಸಂಸ್ಕೃತಿಯ ಸೃಷ್ಟಿ ಎಂಬೆಲ್ಲ ವಿದ್ವಾಂಸರ ಹೇಳಿಕೆಗಳನ್ನು ಈ ಹಿನ್ನೆಲೆಯಲ್ಲಿ ಒಪ್ಪಲು ಕಷ್ಟವಾಗುತ್ತದೆ. ಯಾಕೆಂದರೆ ತತ್ವಪದಗಳು ಅಥವಾ ತತ್ವಪದಕಾರರು ಸೃಷ್ಟಿಗೊಳ್ಳಲು ಇರುವ ಪ್ರೇರಣೆ, ಅವುಗಳ ರಾಜಕೀಯ, ಸಾಮಾಜಿಕ, ಧಾರ್ಮಿಕ ಸಂದರ್ಭಗಳನ್ನೂ ಗಮನಿಸಬೇಕಾಗುತ್ತದೆ. ಹತ್ತು ಹಲವು ಜಾತಿ, ಸಮುದಾಯಗಳು ಭಾಗವಹಿಸಿದ್ದು ಯಜಮಾನ ಸಂಸ್ಕೃತಿಯನ್ನು ಪ್ರಶ್ನಿಸಿದ್ದು, ಸಾಂಸ್ಥಿಕ ಧರ್ಮ, ಜಡತೆ, ಅಮಾನವೀಯ ಆಚರಣೆ, ಧಾರ್ಮಿಕ ಢಾಂಬಿಕತೆಗಳನ್ನು ಸಾಮಾಜಿಕ ಕಟ್ಟಳೆಗಳನ್ನು ಪರಾಮರ್ಶಿಸಿ ತಮ್ಮ ಕಾಲದ ಇಂಥ ಅನೇಕ ಸಮಸ್ಯೆಗಳಿಗೆ ಮುಖಾಮುಖಿಯಾದದ್ದೇನು ಕಡಿಮೆಯದಲ್ಲ. ೧೮, ೧೯ನೇ ಶತಮಾನಗಳಲ್ಲಿಯೇ ಈ ತೆರೆನಾದ ಅನೇಕ ಸಮಸ್ಯೆ, ಸವಾಲುಗಳಿಗೆ ತತ್ವಪದಕಾರರು ಹೆಚ್ಚು ಪ್ರತಿಕ್ರಿಯಿಸಿದ್ದು ಕಾಣುತ್ತೇವೆ. ಈ ಹಿಂದಿನ ೧೫-೧೬ ಶತಮಾನಗಳಲ್ಲಿ ಕಾಣಿಸಿಕೊಂಡ ತತ್ವಪದಸಾಹಿತ್ಯ ಸಾಂಸ್ಥಿಕ ಜಂಜಡಗಳಿಂದ ಬೇಸತ್ತು ಅದರಿಂದ ದೂರ ಸರಿದು 'ಕೈವಲ್ಯ'ವೊಂದೆ ನಿಜದ ದನಿ ಎಂದು, ಮೋಕ್ಷವೇ ಬಾಳಿನ ಸಾಕ್ಷಾತ್ಕಾರಕ್ಕೆ ದಾರಿ ಎಂದು ನಂಬಿದ, ಸಮಾಜದ ಯಾವುದೇ ಚಟುವಟಿಕೆಗಳಿಗೆ ಗಮನ ಕೊಡದೆ ನಿರ್ಲಿಪ್ತವಾಗಿರುವ, ನೀತಿ ಬೋಧನೆಯಲ್ಲಿ ಕೆಟ್ಟದನ್ನು ನಿರಾಕರಿಸುವ ಸುಪ್ತ ಮನಸ್ಸಿನ ಸಾಹಿತ್ಯವಾಗಿತ್ತು.

ಆದರೆ ೧೮, ೧೯ನೇ ಶತಮಾನದಲ್ಲಿ ಕಾಣಿಸಿಕೊಂಡ ಅನೇಕ ಯೋಗಿಗಳು ಅನುಭಾವಿಗಳು, ತತ್ವಪದಕಾರರು ತಮ್ಮ ಅನುಭಾವ, ದಾರ್ಶನಿಕತ್ವದಿಂದ ಜನಸಮುದಾಯಗಳ ಮೇಲೆ ಹೆಚ್ಚು ಪ್ರಭಾವ ಬೀರಿದರು. ಅನೇಕ ತತ್ವಪದಕಾರರು ಜನವರ್ಗಗಳ ಹೃದಯಗಳಲ್ಲಿ ದೈವಗಳಾಗಿ ನೆಲೆ ನಿಂತರು.\ಕೆಲವು ತತ್ವಪದಕಾರರಂತೂ ತಮ್ಮ ಜೀವಿತ ಕಾಲದಲ್ಲಿಯೂ ಮತ್ತು ದೈವಾಧೀನರಾದ ಮೇಲೆಯೂ ಜನಸಮುದಾಯಗಳ ದೃಷ್ಟಿಯಲ್ಲಿ ದೇವರ ಸ್ಥಾನವನ್ನೇ ಪಡೆದುಕೊಂಡರು. ಕಡಕೋಳ ಮಡಿವಾಳಪ್ಪ ಶಿಶುನಾಳ ಶರೀಫ್, ಕೂಡಲೂರು ಬಸವಲಿಂಗ ಶರಣರು ಮುಂತಾದ ಸಂತರ ಗದ್ದುಗೆ ಪೂಜೆ, ಜಾತ್ರೆಗಳು ಇಂದಿಗೂ ನಡೆಯುವುದನ್ನು ನೋಡಬಹುದು. ದೇವರುಗಳಂತೆ ಈ ಸಂತರು ಜನರಲ್ಲಿ ನೆಲೆ ನಿಂತು ಪೂಜಿತರಾಗುತ್ತಿದ್ದಾರೆ.

ಈ ಜನ ಸಮುದಾಯಗಳ ನಡೆಯನ್ನು ಕುರಿತು ರಹಮತ್ ತರೀಕೆರೆ ಅವರು ಹೀಗೆ ಹೇಳುತ್ತಾರೆ. 'ಚರಿತ್ರೆಯು ಇಲ್ಲಿ ಪುರಾಣವಾಗಿ ನಂಬಿಕೆಯಾಗಿ ಆಚರಣೆಯಾಗಿ ಹೋಗಿರುತ್ತದೆ. ಮತ್ತದು ನಿರಂತರವಾಗಿ ಬದಲಾಗುತ್ತಲೇ ಇರುತ್ತದೆ. ಸಮುದಾಯಗಳು ಬಾಳಿನ ಒತ್ತಡಗಳಿಗೆ ತಕ್ಕಂತೆ ತಮ್ಮ ಅನುಭವ ಲೋಕದ ರಕ್ತಮಾಂಸಗಳಿಂದ ರೂಪಿಸಿದ ಕೂಸಿನಂತೆ ಈ 'ಚರಿತ್ರೆ' ಇರುತ್ತದೆ. ಗತದ ನೆನಪುಗಳನ್ನು ಸಧ್ಯದ ಅನುಭವಗಳೊಂದಿಗೆ ಬೆರೆಸುವ ಸಮುದಾಯಗಳು ತಮ್ಮ ಸೃಜನಶೀಲತೆಯನ್ನು ಪ್ರಕಟಿಸುವ ರೀತಿಯೇ ಆಕರ್ಷಕ''[೧೯]ಎನ್ನುತ್ತಾರೆ. ಇದನ್ನೇ ಸಮುದಾಯಗಳು ಬದಲಾಗುವ ಕಾಲಕ್ಕೆ ತಕ್ಕಂತೆ ತಮ್ಮ ಸೃಜನಶೀಲ ಸಾಧ್ಯತೆಗಳನ್ನು ವಿಸ್ತರಿಸಿಕೊಳ್ಳುವ ಪರಿಯೆನ್ನಬಹುದು.

## ಸಮುದಾಯಗಳು ಮತ್ತು ತತ್ವಪದ ಸಾಹಿತ್ಯ

ಮಧ್ಯಕಾಲೀನ ಭಾರತದ ಭಕ್ತಿ ಸಾಹಿತ್ಯವನ್ನು ನಾವು ಸೂಕ್ಷ್ಮವಾಗಿ ಅವಲೋಕಿಸಿದರೆ ಅವು ತನ್ನ ಕಾಲದ ಚರಿತ್ರೆಗೆ ತೋರಿರುವ ಪ್ರತಿಕ್ರಿಯೆಗಳೂ ಆಗಿವೆ. ಅನೇಕ ಸಂಸ್ಥಾನಗಳು, ಅವುಗಳ ನಡುವೆ ನಡೆಯುತ್ತಿದ್ದ ಯುದ್ಧಗಳು, ರಾಜಕೀಯ ಶಕ್ತಿ ಪಡೆದಿದ್ದ ಇತರ ಧರ್ಮದ ದರ್ಪ, ಅದರ ಪ್ರಭಾವಗಳು ಇವೆಲ್ಲದರಿಂದ ಸೃಷ್ಟಿಯಾದ ಜನ ಸಮುದಾಯಗಳ ಬದುಕಿನ ಬವಣೆಗಳು ಇದರಲ್ಲಿ ಸೇರಿವೆ.

ಈಗಾಗಲೇ ಹೇಳಿದಂತೆ ವಚನ ಚಳುವಳಿಯ ಬಸವಣ್ಣ, ಅಲ್ಲಮನಂತಹ ಅನುಭಾವಿಗಳ ಪ್ರಭಾವ ಶತಮಾನಗಳ ಕಾಲ ಕೊಳು ಕೊಡೆ ನಡೆಸಿದ ಪರಿಣಾಮ ಮುಂದೆ ೧೫ ರಿಂದ ೧೯ನೇ ಶತಮಾನಗಳ ಅವಧಿಯಲ್ಲಿ ಸಂತರು, ಯೋಗಿಗಳು, ಅನುಭಾವಿಗಳು, ತತ್ವಪದಕಾರರು ಕಾಣಿಸಿಕೊಂಡು ತತ್ವಪದ ಸಾಹಿತ್ಯ ಸೃಷ್ಟಿಗೆ ಕಾರಣರಾದರು.

ತತ್ವಪದಕಾರರು ಯಾವುದೇ ಸಾಹಿತ್ಯದ ಕಟ್ಟುಪಾಡುಗಳಿಗೆ ಬದ್ಧರಾಗದೆ ತಾವು ಸಾಧನೆಯಿಂದ ದಕ್ಕಿಸಿಕೊಳ್ಳುವ ಅನುಭಾವಿಕ ಶಕ್ತಿಗೆ ಶರಣಾದರು. ಅದರ ಜೊತೆ ನಿರಂತರ ಅನುಸಂಧಾನಗೈದರು. ಗುರುವಿನ ಮೂಲಕವೇ ಮುಕ್ತಿಯ ಮಾರ್ಗವನ್ನು ಕಂಡುಕೊಳ್ಳುವುದು ಅವರ ಆಶಯವಾಗಿತ್ತು. ತತ್ವಪದಕಾರರು ಗುರುವಿಗೆ ಮಹತ್ವದ ಸ್ಥಾನ ಕೊಟ್ಟರು. ಗುರುವೆ ಸಾಧನೆಗೆ ನಿಜದ ನೆಲೆ ಒದಗಿಸುವವನು. ಅವನಿಲ್ಲದೇ ಸಾಧನೆಗೆ ತೊಡಗುವುದು ಕಣ್ಣುಕಟ್ಟಿ ನಡೆದಂತೆ ಎಂದು ಭಾವಿಸುತ್ತಾರೆ. ಭೇದವೆಣಿಸದೇ ಜನಸಮುದಾಯಗಳಲ್ಲಿ ಬೆರೆತ ಅವರು ಆತ್ಮೋನ್ನತಿಗಾಗಿ ಧ್ಯಾನ, ಯೋಗದಲ್ಲಿ ನಿರತರಾಗಿ ಲೌಕಿಕದ ವ್ಯಾಮೋಹವನ್ನು ತೊರೆದರು. ಯಾವುದೇ ಒಂದು ನಿರ್ದಿಷ್ಟವಾದ ಧರ್ಮವನ್ನು ಪ್ರತಿಪಾದಿಸಲಿಲ್ಲ. ವಿಶೇಷವೆಂದರೆ ಈ ಅನುಭಾವಿಗಳು ಗುರುಶಿಷ್ಯ ಸಂಪ್ರದಾಯದವರು. ಜಾತ್ಯತೀತ ನೆಲೆಯ ಗುರು-ಶಿಷ್ಯ ಸಂಬಂಧಗಳೂ ಇವರ ಕಾಲದಲ್ಲಿ ಏರ್ಪಟ್ಟಿವೆ. ಅನೇಕ ಮುಸ್ಲಿಂ ತತ್ವಪದಕಾರರಿಗೆ ಮುಸ್ಲಿಮೇತರರು ಗುರುಗಳಾಗಿದ್ದುದು ಕಂಡುಬರುತ್ತದೆ. ಚನ್ನೂರು ಜಲಾಲಸಾಬನಿಗೆ, ಮೊಟ್ನಳ್ಳಿ ಹಸನಸಾಬನಿಗೆ ಕಡಕೋಳ ಮಡಿವಾಳಪ್ಪನೇ ಗುರುವಾಗಿದ್ದ. ಮಂಜರ್ಲಾದ ಖಾದರ ಸಾಬನಿಗೆ 'ಸಿದ್ಧರಾಮಸ್ವಾಮಿ', ಸಾವಳಗಿ ಮಹಮ್ಮದ ಸಾಬನಿಗೆ 'ಸಿದ್ಧಲಿಂಗ', ಮಹಾಗಾಂವ ಮೀರಾಸಾಬನಿಗೆ 'ಪಂಚಾಕ್ಷರಿ' ದೇಗಾಯಿಹಜರತ್ ಸಾಬನಿಗೆ 'ಗುಂಡಪ್ಪ' ಹೀಗೆ ಗುರುವಾಗಿ ಕಂಡುಬರುತ್ತದೆ. ಇವರೆಲ್ಲ ತಮ್ಮ ಗುರುಗಳ ಪ್ರಭಾವದಿಂದ ಅಂದರೆ ಮುಸ್ಲಿಂ ತತ್ವಪದಕಾರರು ತಮ್ಮದಲ್ಲದ ಲಿಂಗಾಯತ ಧರ್ಮದ ಪ್ರಭಾವಕ್ಕೆ ಒಳಗಾಗಿ ತತ್ವಪದಗಳನ್ನು ರಚಿಸಿದ್ದಾರೆ. ಆದರೆ ಮುಸ್ಲಿಮೇತರರು ಮುಸ್ಲಿಂ ಮತದ ಪ್ರಭಾವಕ್ಕೆ ಒಳಗಾಗಿ ತಮ್ಮದಲ್ಲದ ಅನ್ಯಮತ(ಇಸ್ಲಾಂ)ದ ತತ್ವಗಳ ಮೇಲೆ ತತ್ವಪದಗಳನ್ನು ರಚಿಸಿರುವುದು ಕಂಡುಬರುವುದಿಲ್ಲ. ಈ ರೀತಿಯ ರಚನೆಗಳು ನಮಗೆ ಇನ್ನೂ ಲಭ್ಯವಾಗಿಲ್ಲ. ಆದರೆ ಸೂಫಿಗಳ ಪ್ರಭಾವವು ತತ್ವಪದಕಾರರ ಮೇಲೆ ವಿಶೇಷವಾಗಿ ಆಗಿದೆ. ಮುಸ್ಲಿಮರಲ್ಲದ ಚಿದನಾಂದಾವಧೂತ, ವಡಕಿತಾತಪ್ಪಯ್ಯ, ಕೂಡಲೂರು,

ಶಿಲ್ಪಪ್ಪ ಮುಂತಾದ ತತ್ವಪದಕಾರರ ಮೇಲೆ ಸೂಫಿ ಸಂತರ ಗಾಢಪ್ರಭಾವ ಆಗಿದೆ. ಆದರೆ ಮುಸ್ಲಿಂ ತತ್ವಪದಕಾರರಿಗೆ ಸೂಫಿಗಳು ಗುರುವಾಗಿಲ್ಲ. ಯಾಕೆಂದರೆ ರಹಮತ್ ತರೀಕೆರೆ ಅವರು ಹೇಳುವಂತೆ 'ಮುಸ್ಲಿಂ ತತ್ವಪದಕಾರರಿಗೆ ಗುರುಗಳಾಗಿದ್ದ ಗೋವಿಂದಭಟ್ಟ, ಸಿದ್ಧಾರೂಢ, ಗರಗದ ಮಡಿವಾಳಪ್ಪ, ನಾಗಲಿಂಗಯತಿ ಈ ಅವಧೂತರು ಸೂಫಿಗಳ ಜತೆ ಮಹಿಪತಿರಾಯ, ಫಕೀರೇಶ ಮುಂತಾದವರಂತೆ ಶಿಷ್ಯ ಸಂಬಂಧ ಪಡೆದವರಲ್ಲ. ಇನ್ನೊಂದು ಕಾರಣವೆಂದರೆ ಇವರ ಕಾಲಕ್ಕೆ ಬಂದೇನವಾಜ ಅಮೀನುದ್ದೀನ್‌ರಂತಹ ಪ್ರಭಾವಶಾಲಿ ಸೂಫಿಗಳ ಕಾಲ ಮುಗಿದಿತ್ತು. ಶಿಶುನಾಳನು ಹಲಗೂರಿನ ಹಜರೇಶಾ, ಬಂಕಾಪುರದ ಅಲ್ಲಾವುದ್ದೀನ್ ಖಾದ್ರಿ ಅವರನ್ನು ಗುರುಗಳಂತೆ ನೆನೆಯುತ್ತಾನೆ. ಆದರೆ ಈ ಸೂಫಿಗಳು ಶಿಶುನಾಳನಿಗೆ ಗೋವಿಂದ ಭಟ್ಟನಂತೆ 'ಹಸ್ತಕ ಮಸ್ತಕ' ಮಾಡಿದ ನೇರ ಗುರುಗಳಲ್ಲ. ಎಂತಲೇ 'ಮುಸ್ಲಿಮ್' ಎಂದು ಗುರುತಿಸಲಾಗುವ ಇಲ್ಲಿನ ಹೆಚ್ಚಿನ ಆರೂಢರಿಗೆ ಗುರುಗಳು ಸೂಫಿಗಳಲ್ಲ. ೧೭ನೇ ಶತಮಾನದವರೆಗೆ ಸೂಫಿಸಂತರಿಗೆ 'ಮುಸ್ಲಿಮ'ರಲ್ಲದ ಶಿಷ್ಯರು ಬರುವುದನ್ನು ಕಂಡರೆ, ೧೮-೧೯ನೇ ಶತಮಾನಗಳಲ್ಲಿ ಆರೂಢರಿಗೆ 'ಮುಸ್ಲಿಮ್' ಸಮುದಾಯದಿಂದ ಶಿಷ್ಯರಾಗುವುದನ್ನು ಕಾಣುತ್ತೇವೆ. ಇದಕ್ಕೆ ಸೂಫಿಗಳ ಬೆಂಬಲಕ್ಕಿದ್ದ ರಾಜ್ಯವ್ಯವಸ್ಥೆಗಳು ನಶಿಸಿ ಹೋಗಿದ್ದು ಒಂದು ಕಾರಣವೆ? ಬಹುಶಃ ಇದು ಸರಿಯಾದ ಕಾರಣವಲ್ಲ''[೧೬] ಎನ್ನುತ್ತಾರೆ. ಇದೊಂದು ರಾಜಕೀಯ, ಧಾರ್ಮಿಕ ಕಾರಣವಾದರೂ ಈ ಸಮಸ್ಯೆ ಸರಳವಾದುದು ಅಲ್ಲ ಅನಿಸುತ್ತದೆ.

ಅನೇಕ ಅನುಭಾವಿಗಳು ತಂತಮ್ಮ ಕಾಲದಲ್ಲಿ ಜಾತ್ಯತೀತ ಗುರುಗಳನ್ನು ಹುಡುಕಿ ಪಡೆದುಕೊಂಡಿದ್ದಾರೆ. ಗುರುವಿನ ಜಾತಿಗೆ ಅಥವಾ ಶಿಷ್ಯನ ಜಾತಿಗೆ ಇಲ್ಲಿ ಮಹತ್ವವಿಲ್ಲ. ಸಾಧನೆಗೆ ಯೋಗ್ಯತೆಯೇ ಮುಖ್ಯವಾಗಿತ್ತು. ಇಂಥ ಅನನ್ಯ ನಿಲುವನ್ನು ಹೊಂದಿದ ಅನುಭಾವಿಗಳನ್ನು, ತತ್ವಪದಕಾರರನ್ನು ಬಡವರು, ದುಡಿವ ವರ್ಗದವರು, ದಲಿತರು ತಮ್ಮ ಬದುಕಿನ ಬಂಧನಗಳನ್ನು ಕಳಚಿಕೊಳ್ಳಲು ಬೆನ್ನುಹತ್ತಿದರು. ತತ್ವಪದಕಾರರ ಪರಂಪರೆಯಲ್ಲಿ ಅನೇಕರು ಹಾಡುಗಳನ್ನು ಕಟ್ಟಿದ್ದಾರೆ. ಇವರ ಹಾಡುಗಳನ್ನು ತತ್ವಪದಗಳು ಎಂದು ಕರೆಯಲಾಗುತ್ತಿದೆ. ತತ್ವಪದಗಳು ವಚನ ಸಾಹಿತ್ಯಕ್ಕಿಂತ ಹೆಚ್ಚು ಜನಪ್ರಿಯವಾದವು. ಯಾಕೆಂದರೆ ವಚನಗಳು ಕಾಲಾಂತರದಲ್ಲಿ ನಿರ್ದಿಷ್ಟ ವರ್ಗದವರಿಗೆ, ನಿರ್ದಿಷ್ಟ ಸ್ಥಳಗಳಲ್ಲಿ ಕೆಲವು ಕಟ್ಟುಪಾಡುಗಳೊಂದಿಗೆ ಬಳಕೆಯಾಗುತ್ತಿದ್ದವು. ಸಾಂಸ್ಥಿಕವಾದಂತ ಮಠ ಇಲ್ಲವೆ ದೇವಸ್ಥಾನಗಳಲ್ಲಿಯೇ ಜಾಸ್ತಿ ಬಳಕೆಯಾಗುತ್ತಿದ್ದವು. ಶಿವಶರಣರ ಮಹಿಮೆಯನ್ನು ಸಾರಿ ಹೇಳುವ ಭಕ್ತಿಪ್ರಧಾನ ಪ್ರವಚನಗಳಾಗಿದ್ದವು. ಕೆಲವೇ ವರ್ಗದ ಹಿತಾಸಕ್ತಿಗಾಗಿ ನಡೆಯುತ್ತಿದ್ದ ಈ ಕಾರ್ಯಕ್ರಮಗಳು ಮನರಂಜಕವಾಗಿಯೂ ಇರುತ್ತಿದ್ದವು. ಆದರೆ ತತ್ವಪದ ಸಾಹಿತ್ಯ ಸಮುದಾಯಗಳ ಬದುಕಿನ ಭಾಗದ ರಚನೆಗಳಾಗಿ ಪರಿಣಮಿಸಿದವು. ದಾಸರಪದಗಳು ಅವುಗಳದೇ ಆದ ಒಂದು ವಲಯವನ್ನು ಸೃಷ್ಟಿಸಿಕೊಂಡಿದ್ದವು. ೧೫ನೇ ಶತಮಾನದ ನಿಜಗುಣ ಶಿವಯೋಗಿಯ ಕಾಲದಿಂದಲೇ ತತ್ವಪದ ಸಾಹಿತ್ಯ ಅಥವಾ 'ಕೈವಲ್ಯ ಸಾಹಿತ್ಯ' ಸೃಷ್ಟಿಯಾಗಿದೆ. ಆದರೆ ಈ ಕಾಲದಲ್ಲಿ ನಿಜಗುಣರು ವೀರಶೈವ ತತ್ವವನ್ನು

ಪ್ರತಿಪಾದಿಸಿದ್ದಾರೆ. ಈತನ ನಂತರದಲ್ಲಿ ಇದೇ ಮಾರ್ಗದಲ್ಲಿ ಸರ್ಪಭೂಷಣ ಶಿವಯೋಗಿಗಳು, ಬಾಲಲೀಲಾ ಮಹಾಂತ ಶಿವಯೋಗಿಗಳು, ಮೈಲಾರ ಬಸವಲಿಂಗಶರಣರು, ಕೂಡಲೂರು ಬಸವಲಿಂಗ ಶರಣರು ಮುಂತಾದವರು ಇದೇ ಹಾದಿಯಲ್ಲಿ ನಡೆದರು. ಸಮಾಜದ, ಸಾಂಸಾರಿಕ ಸಂಕಷ್ಟಗಳಿಂದ ಬೇಸತ್ತು ವೈರಾಗ್ಯಪರವಾಗಿ 'ಕೈವಲ್ಯ'ವೊಂದೇ ಬಾಳಿನ ಸಾಕ್ಷಾತ್ಕಾರಕ್ಕೆ ದಾರಿಯೆಂದು ನಂಬಿದ ಇವರು ಸಾಮಾಜಿಕ ಘಟನೆಗಳಿಗೆ ಆಧ್ಯಾತ್ಮಿಕವಾಗಿ ಸಣ್ಣನೆಯ ಪ್ರತಿಕ್ರಿಯೆ ಮಾಡಿದರು. ಆದರೆ ಹೆಚ್ಚಾಗಿ ೧೮-೧೯ ಮತ್ತು ೨೦ನೇ ಶತಮಾನದ ಆದಿಯವರೆಗೂ ರಚನೆಯಾದ ತತ್ವಪದಗಳು ಸುಮಾರು ೩೫೦ ವರ್ಷಗಳಿಂದ ನಿರಂತರವಾಗಿ ಜನಸಮುದಾಯಗಳ ಬದುಕಿನ ಭಾಗವಾಗಿ ಹರಿಯುತ್ತ ಬಂದಿವೆ. ತತ್ವಪದಗಳು ಕನ್ನಡ ಸಂಸ್ಕೃತಿಯಲ್ಲಿ ತನ್ನ ನೆಲದ ಸ್ವಭಾವಕ್ಕನುಗುಣವಾಗಿ ರೂಪತಳೆದಂತ ಅನುಭಾವ ಸಾಹಿತ್ಯ. ಸಹಜವಾಗಿಯೇ ಪ್ರಾಂತೀಯತೆ, ರಾಷ್ಟ್ರೀಯತೆ, ಭಾಷೆಯ ಮಿತಿಗಳನ್ನು ದಾಟುವ ಗುಣವುಳ್ಳವು. ಬಹುಕೇಂದ್ರಿತ ಧಾರ್ಮಿಕ ನೆಲೆಯಲ್ಲಿ ರೂಪುಗೊಂಡವು. ಹಾಗಾಗಿಯೇ ಇವುಗಳ ರಚನೆಕಾರರಲ್ಲಿ ಒಬ್ಬೊಬ್ಬರದು ಒಂದೊಂದು ಧ್ವನಿಯಿದೆ. ವೈವಿಧ್ಯತೆಯಿದೆ. ಸಾಮಾನ್ಯವಾಗಿ ದಲಿತರು, ಮುಸ್ಲಿಂ ಧರ್ಮೀಯರು, ಶಿವಯೋಗಿಗಳು, ನಾಥ, ಆರೋಢ, ಸಿದ್ಧಸೂಫಿಪಂಥೀಯರ ಸಹವಾಸವಿದ್ದವರು ಇದ್ದಾರೆ. ಆದರೆ ಪಂಥೀಯರೇ? ಪಂಥಾತೀತರೆ? ಒಂದು ಇನ್ನೊಂದರ ಕವಲೇ ಅಥವಾ ಮುಂದುವರಿಕೆಯೇ ಈ ಕುರಿತು ವಿವೇಚಿಸಬೇಕಾಗಿದೆ.

ಏಕೇಶ್ವರವಾದಿಗಳು ಇವರಲ್ಲ. ಏಕರೂಪದ ಸಂಸ್ಕೃತಿಯ ಪ್ರಭಾವ ಇಂಥ ಬಹುಕೇಂದ್ರಿತ, ಜಾತ್ಯತೀತ ಧಾರ್ಮಿಕ ನೆಲೆಗಳ ಮೇಲೆ ಆಗಲು ಸಾಧ್ಯವಾಗಿಲ್ಲ. ತತ್ವಪದಗಳು ಇಂದಿಗೂ ನಮ್ಮ ಸಂಸ್ಕೃತಿಯಲ್ಲಿ ಉಳಿದು ಬರುತ್ತಿರುವುದಕ್ಕೆ ಬಹುಮುಖ್ಯ ಕಾರಣ ಇವು ಸಾಂಸ್ಥಿಕ ರೂಪವನ್ನು ಪಡೆಯದಿರುವುದೇ ಆಗಿದೆ. ಮೂಲಭೂತವಾಗಿ ತತ್ವಪದಗಳು ಎಲ್ಲ ಸಾಂಸ್ಥಿಕ ರೂಪಗಳನ್ನು ಒಡೆಯುವ ಸತ್ವವನ್ನು ತನ್ನ ಆಂತರ್ಯದಲ್ಲಿಯೇ ಹೊಂದಿವೆ. ಇವುಗಳ ಭಾಷೆ, ಛಂದಸ್ಸು ಯಾವುದೂ ಸಿದ್ಧ ಮಾದರಿಗೆ ಸಿಗುವಂಥದಲ್ಲ. ಅಸಾಧ್ಯವಾದುದನ್ನು ಸಾಧ್ಯವಾಗಿಸುವ ವಿಚಾರ ಈ ತತ್ವಪದಗಳಲ್ಲಿದೆ. ಉದಾಹರಣೆಗೆ ಕಡಕೋಳರ "ನೀರು ಇಲ್ಲದೆ ಜಳಕ ಮಾಡಿರಬೇಕು..., ಶರೀಫರ ಕೋಡಗನ ಕೋಳಿ ನುಂಗಿತ್ತಾ..." ಇಂಥವು ಇವರಲ್ಲಿ ಸಾಮಾಜಿಕ ನಡವಳಿಕೆಯನ್ನು ಕಂಡು ಕಟುವಾಗಿ ವಿಡಂಬಿಸಿದ ನಿಷ್ಠುರವಾದಿಗಳ ಒಂದು ದೊಡ್ಡ ಗುಂಪೇ ಇದೆ. ಕಡಕೋಳ ಮಡಿವಾಳಪ್ಪ ಮತ್ತು ಆತನ ಶಿಷ್ಯರು, ಕೂಡಲೂರು ಬಸವಲಿಂಗ, ರಾಮಪುರದ ಬಕ್ಕಪ್ಪಯ್ಯ, ಶಿಶುನಾಳ ಶರೀಫ್, ಮೋಟ್ನಹಳ್ಳಿ ಹಸನಸಾಬ, ನೀರಲಕೇರೆ ಬಸವಲಿಂಗಪ್ಪ, ನಿಡುವಂಚಿ ಭದ್ರೇಶ್ವರ, ಖೈನೂರು ಕೃಷ್ಣಪ್ಪ, ಕಡ್ಲೆವಾಡದ ಸಿದ್ದಪ್ಪ, ನಾಗಲಿಂಗಪ್ಪ, ನೀರಲಕೇರೆ ಹೀಗೆ ನೂರಾರು ಜನ ತತ್ವಪದಕಾರರು ಇದ್ದಾರೆ. ಜನಸಮುದಾಯಗಳು ಇವರ ಹಾಡುಗಳನ್ನು ಮೌಖಿಕವಾಗಿ ಪರಂಪರೆಯಿಂದ ಹಾಗೆ ಉಳಿಸಿಕೊಂಡು ಬಂದಿವೆ. ಭಜನೆಗಳಲ್ಲಿ ಹಾಗೂ ವ್ಯಕ್ತಿಗತವಾಗಿ ಗುನುಗುತ್ತಾ ಪೋಷಿಸಿಕೊಂಡು ಬರಲಾಗಿದೆ.

ಈ ಸಂತರ ದಾರಿಯಲ್ಲಿ ನಡೆವ ಅವರ ಅನುಯಾಯಿಗಳು ನಡೆಸುತ್ತಿದ್ದ ಚರ್ಚೆಯನ್ನು 'ವಿಚಾರಕ್ಕೆ ಹಾಕುವುದು' ಎಂದು ಕರೆಯಲಾಗುತ್ತದೆ. ೧೮ನೇ ಶತಮಾನದಲ್ಲಿ ಯೋಗಿಗಳು, ಅನುಭಾವಿಗಳು ತತ್ವಪದಕಾರರು ಆರಂಭಿಸಿದ ಇವರ ಸ್ವರೂಪ ಕಾಲಾಂತರದಲ್ಲಿ ಬೇರೆಯಾದಂತೆ ತೋರುತ್ತದೆ. ಹಲವು ಜಾತಿಯ ಜನ ಒಂದೆಡೆ ಕಲೆತು ನಡೆಸುತ್ತಿದ್ದ ಚರ್ಚೆ ೧೨ನೇ ಶತಮಾನದ 'ಅನುಭವ ಮಂಟಪ'ವನ್ನು ಹೋಲುವಂತಹದ್ದಾಗಿತ್ತು. ಮಡಿವಾಳಪ್ಪನು ತನ್ನ ಅನೇಕ ಅನುಯಾಯಿಗಳೊಂದಿಗೆ ವೇದಾಂತ ಚರ್ಚೆ ನಡೆಸುತ್ತಿದ್ದನೆಂದು ತಿಳಿದುಬರುತ್ತದೆ. ಮನದ ಮೈಲಿಗೆಯ ಕಳೆದು ಮನಶುದ್ಧಿಯ ಮಾಡಿಕೊಳ್ಳುವುದೇ ಇದರ ಮುಖ್ಯ ಉದ್ದೇಶವಾಗಿತ್ತು. ಇದಕ್ಕಾಗಿ 'ಮಡಿವಾಳಪ್ಪ' ಹಾಗೂ ಅತನ ಶಿಷ್ಯರು ಅವರ ಹಿಂದಿನವರ, ತಮ್ಮ ಸಮಕಾಲೀನರ ಹಾಗೂ ತಮ್ಮದೇ ತತ್ವಪದಗಳನ್ನು ಇಟ್ಟುಕೊಂಡು ವೇದಾಂತದ ಅನುಭಾವದ ಚರ್ಚೆ ಮಾಡುತ್ತಿದ್ದರು. ಮುಂದಿನ ಜನಸಮುದಾಯಗಳು ಈ ಪರಂಪರೆಯನ್ನೇ ಮುಂದುವರೆಸಿಕೊಂಡು ಬಂದರು. ಹೈದ್ರಾಬಾದ್ ಕರ್ನಾಟಕ ಭಾಗದಲ್ಲಿಯೇ ಇದು ಹೆಚ್ಚಾಗಿದ್ದಂತೆ ತೋರುತ್ತದೆ. ಉತ್ತರ ಕರ್ನಾಟಕದಲ್ಲೂ 'ಸತ್ಸಂಗ'ದ ಹೆಸರಿನಲ್ಲಿ ತತ್ವಪದಗಳನ್ನು ಚರ್ಚೆಗೆ ಹಾಕುವುದು ಕಂಡುಬರುತ್ತದೆ. ಈ ಚರ್ಚೆಯಲ್ಲಿ ಎಲ್ಲ ಜಾತಿಯ ಜನರು ಸೇರುತ್ತಿದ್ದರು. ಅನುಭಾವದ ನೆಲೆಯಲ್ಲಿ ಬದುಕಿನ ಅರ್ಥವನ್ನು ಮುಕ್ತವಾಗಿ ಚರ್ಚಿಸುತ್ತಿದ್ದರು. ಅನುಭಾವಿಗಳ ಯಾರದೋ ಪದವನ್ನು ಎತ್ತಿ ನಡೆಸುವ ಈ ಚರ್ಚೆಯು, ಲೌಕಿಕದ ಮೋಹಗಳನ್ನು ಮೀರುತ್ತಾ ಆತ್ಮೋನ್ನತಿಯ ಕಡೆಗೆ ನಡೆವ ಪರಮ ಸುಖದ ಪಯಣದಂತೆ ಇರುತ್ತದೆ.

ಕಾಲಾಂತರದಲ್ಲಿ ಅನುಭಾವಿಗಳ ರಚನೆಗಳನ್ನು ವಿಚಾರಕ್ಕೆ ಹಾಕುವ ಮೂಲಕ ಜನವರ್ಗಗಳು ತಮ್ಮ ಬದುಕಿನಲ್ಲಿ ನೆಮ್ಮದಿಯನ್ನು, ವಿವೇಕವನ್ನು ಪಡೆಯುತ್ತಾ ಬಂದರು. ಇದು ಕೇವಲ ಯಾವುದೇ ಗೊಡ್ಡು ಚರ್ಚೆ, ಹರಟೆಯಾಗಿರದೆ ತಮ್ಮ ಊರಿನ ಪರಿಸರದ ಸಾಮಾಜಿಕ ನೆಮ್ಮದಿ, ಶಾಂತಿಯನ್ನು ಪಡೆಯುವುದೇ ಆಗಿತ್ತು. ಈ ಮೂಲಕ ತಮ್ಮ ತಪ್ಪುಗಳನ್ನು ತಿದ್ದಿ ನಡೆಯುವ ನೀತಿ ಮಾರ್ಗವೂ ದೊರೆಯುತ್ತಿತ್ತು. ಈ ಕುರಿತ ಅಮರೇಶ ನುಗಡೋಣಿ ಅವರ ಒಂದು ಸ್ವಾರಸ್ಯಕರ ಉಲ್ಲೇಖವನ್ನು ನೋಡಬಹುದು. 'ಖೈನೂರು ಕೃಷ್ಣಪ್ಪ (ಗುಲಬರ್ಗಾ)ನ ಶಿವಾನುಭವ ಕಾರ್ಯಕ್ರಮಕ್ಕೆ ರಾಚವ್ವ ಎಂಬ ಮಹಿಳೆ ಸೇರಿಕೊಂಡಿದ್ದಳು. ಅವಳು ಊರಿನ ಶ್ರೀಮಂತ ಮುಡದಾರ ಮಲ್ಲಪ್ಪ ಎಂಬುವವನ ಕಾಮಕ್ಕೆ ಬಲಿಯಾಗಿದ್ದಳು. ಅನುಭಾವಿ ಕೃಷ್ಣಪ್ಪನ ಅನುಯಾಯಿಯಾಗಿ ಸೇರಿದ ಮೇಲೆ ಪ್ರಾಪಂಚಿಕ ವಿಷಯದ ಕಡೆ ಗಮನ ಕಮ್ಮಿಯಾಯಿತು. ಅನುಭಾವದ ಕಡೆ ಮನಸ್ಸು ಒಲಿಯಿತು. ಇದರಿಂದ ಮಲ್ಲಪ್ಪನಿಗೆ ಸಿಟ್ಟು ಬಂದು ರಾಚವ್ವನನ್ನು ತನ್ನ ಬಳಿಗೆ ಬರಲು ಪೀಡಿಸಿದನು. ಇದು ಕೃಷ್ಣಪ್ಪನಿಗೆ ತಿಳಿಯಿತು. ಮಲ್ಲಪ್ಪನ ಅನೈತಿಕತೆಯನ್ನು ಕುರಿತೇ 'ನಾಚಿಕಿಲ್ಲೋಭಾಡ್ಯಾ' ಎಂಬ ಪದವನ್ನು ಮಾಡಿ, ಅದನ್ನು ಶಿವಾನುಭವ ಕಾರ್ಯಕ್ರಮದಲ್ಲಿ ಹಾಡಲು ರಾಚವ್ವನಿಗೆ ಹೇಳಿದನು. ರಾಚವ್ವ ಅದನ್ನು ಹಾಡತೊಡಗಿದ

ಮೇಲೆ ಊರು ಕೇರಿಯಲ್ಲಿ ಮಲ್ಲಪ್ಪ ಅವಮಾನ ಅನುಭವಿಸಬೇಕಾಯಿತು. ತನ್ನ ತಪ್ಪನ್ನು ತಿದ್ದಿಕೊಂಡು ಕೃಷ್ಣಪ್ಪನಲ್ಲಿಗೆ ಬಂದು, ತನ್ನ ಬಗ್ಗೆ ಬರೆದ ಹಾಡನ್ನು ಹಾಡಬಾರದೆಂದು ಬೇಡಿಕೊಂಡನು.'[೧೭] ಹೀಗೆ ವೇದಾಂತದ ಈ ಚರ್ಚೆ ಅವಮಾನ, ಅಪಮಾನಗಳಿಂದ ಬಳಲಿದ ಮಹಿಳೆಗೆ, ಜನಸಮುದಾಯಗಳಿಗೆ ಮಾನಸಿಕ ಬಿಡುಗಡೆಯನ್ನು ನೀಡುವ, ತಪ್ಪಿತಸ್ಥರನ್ನು ಸರಿದಾರಿಗೆ ತರುವ, ಪರಸ್ಪರರನ್ನು ಗೌರವಿಸುವ ಆಶಯವನ್ನು ಹೊಂದಿದಂತೆ ತೋರುತ್ತದೆ. ಹೀಗೆಯೇ ಅನೇಕ ತತ್ವಪದಗಳನ್ನು ಬಳಸುತ್ತಾ ತಮ್ಮ ಬದುಕಿನ ಭಾಗವಾಗಿ ಜನಸಮುದಾಯಗಳು ಮೌಖಿಕವಾಗಿ ಉಳಿಸಿಕೊಂಡು ಬೆಳೆಸಿಕೊಂಡು ಬಳಸಿಕೊಂಡು ಬಂದಿದ್ದಾರೆ. ಹೆಚ್ಚಾಗಿ ಭಜನೆಗಳ ರೂಪದಲ್ಲಿಯೇ ಇವುಗಳನ್ನು ಉಳಿಸಿಕೊಂಡು ಬರಲಾಗಿದೆ. ಹಳ್ಳಿ-ನಗರ, ಊರು-ಕೇರಿಗಳಲ್ಲಿ ಬೇರೆ ಬೇರೆ ಕಾರಣಗಳಿಗಾಗಿ ತತ್ವಪದಗಳನ್ನು ಹಾಡುತ್ತಾರೆ. ಹಬ್ಬ, ಹುಣ್ಣಿಮೆ, ಜಾತ್ರೆ, ಮಠ, ಗುಡಿಗಳಲ್ಲಿ ಹಾಗೂ ಶುಭಕಾರ್ಯ, ಸಾವಿನ ಸಂದರ್ಭಗಳಲ್ಲಿ ವಿಶೇಷವಾಗಿ ಹಾಡುತ್ತಾರೆ. ಪುಣ್ಯಕ್ಷೇತ್ರಗಳಿಗೆ ಭೇಟಿ ಕೊಡಲು ಮಹಾನುಭಾವರ ಪುಣ್ಯ ತಿಥಿಗಳಲ್ಲೂ, ಪುರಾಣ, ಪ್ರವಚನ ಮುಂತಾದವುಗಳನ್ನು ಏರ್ಪಡಿಸಿದ ಸಂದರ್ಭದಲ್ಲೂ ಹಾಡಲಾಗುತ್ತದೆ. ತತ್ವಪದಗಳು ಈ ಹೊತ್ತು ಲಭ್ಯವಾಗುತ್ತಿರುವುದೇ ಭಜನೆ ಮಾಡುವವರಲ್ಲಿ. ವ್ಯಕ್ತಿ ತನಗೆ ಹಾಡುವುದಕ್ಕೆ ಅನುಕೂಲವಾಗುವಂತಿರುವ ಈ ತತ್ವಪದಗಳನ್ನು ತನಗೆ ಬೇಕಾದಂತೆಯೇ ಹಾಡುತ್ತಾ ವ್ಯಕ್ತಿಗತ ನೆಮ್ಮದಿಯನ್ನು ಪಡೆಯುತ್ತಾನೆ. ಇವುಗಳಿಗಿರುವ ಒಂದು ಸಾಮೂಹಿಕ ಪ್ರಯೋಜನವನ್ನೂ ಅಮರೇಶ ನುಗಡೋಣಿ ಅವರು ಈ ರೀತಿಯಾಗಿ ಗುರುತಿಸುತ್ತಾರೆ. 'ತತ್ವಪದಗಳ ಒಳಗಿನ ತಲ್ಲಣಗಳಿಗೂ ಮತ್ತು ಹಾಡುವವನ (ಕೇಳುಗನ) ತಲ್ಲಣಗಳಿಗೂ ಒಂದು ಬಗೆಯ ನಂಟಿರುತ್ತದೆ. ಈ ನಂಟಿನಿಂದಾಗಿ ತತ್ವಪದಗಳು ಆತ್ಮಸಂಗತಿಗಳಾಗಿ ನಿಲ್ಲುತ್ತವೆ. ತತ್ವಪದಗಳನ್ನು ಹಾಡುವವನಿಗೂ, ಕೇಳುವವನಿಗೂ ಬದುಕಿನಲ್ಲಿ ಉದ್ಭವವಾದ ಸಮಸ್ಯೆಗಳಿಂದ ಒಂದು ಬಗೆಯ ಪರಿಹಾರ, ಬಿಡುಗಡೆಯ ಅನುಭವ ಅನುಭವಿಸುವಂತಾಗಬಹುದು. ಭಜನೆಗಳಲ್ಲಿ ಇಂಥದ್ದನ್ನು ಸಾಮೂಹಿಕವಾಗಿ ಪಡೆಯಬಹುದು. ಇದರಿಂದಾಗಿ ತತ್ವಪದಗಳು ಜನಸಮುದಾಯಗಳ ಸಂಗಾತಿಯಾಗಿವೆ'[೧೮]ಎನ್ನುತ್ತಾರೆ.

೧೫ನೇ ಶತಮಾನದಿಂದ ಕರ್ನಾಟಕದ ಮಧ್ಯಕಾಲೀನ ಚರಿತ್ರೆಯಲ್ಲಿ ಸಂಕರ ಸಂಸ್ಕೃತಿಯು ನಿರ್ಮಾಣವಾಗಿದೆ. ಶಾಹಿರಾಜ್ಯಗಳ ಆಳ್ವಿಕೆಯ ಕಾಲದಲ್ಲಿ ಬಹುಭಾಷೆ, ಬಹುಸಂಸ್ಕೃತಿಗಳ ಯುಗವೇ ಆರಂಭವಾಯಿತು. ಐದು ಶಾಹಿರಾಜ್ಯಗಳು ೧೪೮೯-೯೦ರಲ್ಲಿ ಹರಿದು ಹಂಚಿ ಹೋದಾಗ ಸೈನಿಕರು, ಅಧಿಕಾರಿಗಳು, ಅವರ ಲಿಪಿಗಳು ಜೊತೆಗೇ ಬಂದವು. ಇವು ಕೂಡ ಒಂದರ್ಥದಲ್ಲಿ ಹರಿದು ಹಂಚಿ ಹೋದವು. ಪಾರಸಿ, ಮರಾಠಿ, ಉರ್ದು-ದಖನಿ ಈ ಭಾಷೆಗಳಲ್ಲಿ ಸಾಹಿತ್ಯ ರಚನೆಯಾಯಿತು. ಕನ್ನಡ ಭಾಷೆ ಹಿನ್ನೆಲೆಗೆ ಸರಿದು ಕನ್ನಡದಲ್ಲಿ ಸಾಹಿತ್ಯ ರಚನೆ ನಿಂತುಹೋಯಿತು. ಲಿಖಿತ ಸಾಹಿತ್ಯ ರಚನೆ ಮತ್ತು ಅದನ್ನು ಓದುವ ಪರಂಪರೆ ಈ ಎರಡೂ ಭಯಭೀತ ಸ್ಥಿತಿಯಲ್ಲಿದ್ದಾಗ 'ಕೇಳುವ' ಮತ್ತು 'ನೋಡುವ'

ಪರಿಯನ್ನು ಜನವರ್ಗಗಳು ರೂಢಿಸಿಕೊಂಡವು. ಕಂಠಸ್ಥವಾಗಿದ್ದ ಕನ್ನಡ ಸಾಹಿತ್ಯ ಜನರ ಬಾಯಿಂದ ಬಾಯಿಗೆ ಬಳಕೆಯಾಗುತ್ತ ಬೆಳೆದುಬಂದಿತು. ಆದರೆ ಕರ್ನಾಟಕದ (ದಕ್ಷಿಣದ) ಮೈಸೂರು ಮತ್ತು ಇತರ ಪ್ರಾಂತಗಳಲ್ಲಿ ಬ್ರಿಟಿಷರ ಆಳ್ವಿಕೆ ಇದ್ದುದರಿಂದ ಅನೇಕ ಬಗೆಯ ಸಾಂಸ್ಕೃತಿಕ ಬದಲಾವಣೆಗಳು ಶುರುವಾದವು. ಇಲ್ಲಿ ಕನ್ನಡ ಸಾಹಿತ್ಯಕ್ಕೆ ಹೆಚ್ಚಿನ ಪ್ರೋತ್ಸಾಹ ಸಿಕ್ಕಿತು. ಬ್ರಿಟಿಷರ ಆಧುನಿಕ ಶಿಕ್ಷಣದ ಪ್ರಭಾವ, ಪ್ರೇರಣೆಯಿಂದ ಕನ್ನಡ ಸಾಹಿತ್ಯ ಅನೇಕ ಹೊಸ ಆಲೋಚನೆಗಳಿಗೆ ತೆರೆದುಕೊಂಡಿತು. ಲಿಖಿತವಾಗಿಯೂ ಕನ್ನಡ ಸಾಹಿತ್ಯ ರಚನೆಯಾಯಿತು.

೧೮-೧೯ನೆಯ ಶತಮಾನದಲ್ಲಿ ಸಮಕಾಲೀನ 'ಮಹಾಪುರುಷರ' ಮೇಲೆ, ಮಠಗಳ ಪರಿಸರದಲ್ಲಿ ಪುರಾಣಗಳು ಮಾತ್ರ ರಚನೆಯಾದವು. ಶ್ರೀಬಾಲಲೀಲಾ ಮಹಾಂತೇಶ್ವರ ಪುರಾಣ, ಶ್ರೀ ಶರಣ ಬಸವೇಶ್ವರ ಪುರಾಣ, ಶ್ರೀ ಚೆನ್ನಬಸವಸ್ವಾಮಿ ಪುರಾಣ, ಶ್ರೀ ಅಮರೇಶ್ವರ ಪುರಾಣ, ಶ್ರೀನಾಗಭೂಷಣ ಶಿವಯೋಗಿಗಳ ಪುರಾಣ ಮುಂತಾದ ಪುರಾಣಗಳು ರಚನೆಯಾದಂತೆ ತೋರುತ್ತವೆ. ಇಂತಹ ಕೆಲವು ಚಟುವಟಿಕೆಗಳನ್ನು ಹೊರತುಪಡಿಸಿದರೆ ಕನ್ನಡ ಭಾಷೆಯನ್ನು ಬಳಸಿ ಲಿಖಿತ ರೂಪದಲ್ಲಿ ಯಾವುದೇ ಸಾಹಿತ್ಯ ಕಾರ್ಯಗಳು ತೀವ್ರವಾಗಿ ನಡೆದಂತೆ ಕಾಣಿಸುವುದಿಲ್ಲ. ಮುಸ್ಲಿಂಶಾಹಿ ರಾಜ್ಯಗಳಲ್ಲಿ ಕನ್ನಡ ಭಾಷೆಗೆ ಮೋಡಿಲಿಪಿಯನ್ನು ಬಳಸಲಾಯಿತು. ಮರಾಠಿ, ದಖನಿ, ಉರ್ದು ಭಾಷೆಯನ್ನು ಸ್ವೀಕರಿಸಿದಂತೆ ಮೋಡಿಲಿಪಿಗೆ ಪ್ರಾಶಸ್ತ್ಯವನ್ನು ಕೊಟ್ಟರು. ಇದರಿಂದ ಕನ್ನಡ ಭಾಷೆ ಲಿಖಿತವಾಗಿ ಬೆಳೆಯದೇ ಮೌಖಿಕವಾಗಿ ಉಳಿದು ಹೋಯಿತು. ಮಠಗಳಲ್ಲಿ ಮಾತ್ರ ಕನ್ನಡ ಭಾಷೆ ಲಿಖಿತವಾಗಿ ತಕ್ಕಮಟ್ಟಿಗೆ ಉಳಿದಿತ್ತು. ಕನ್ನಡ ಭಾಷೆಯನ್ನು ಮಾತನಾಡುತ್ತಿದ್ದರೇ ಹೊರತು ಅವರಿಗೆ ಕನ್ನಡ ಲಿಪಿಗಳ/ಬರವಣಿಗೆಯ ಪರಿಚಯ ಇರಲಿಲ್ಲ. ಅಥವಾ ಕಣ್ಮರೆಯಾಗಿದ್ದವು ಎನ್ನಬಹುದು. ಮೋಡಿಲಿಪಿಯಲ್ಲಿ ಕನ್ನಡ ಭಾಷೆಯನ್ನು ಬರೆಯುವ ಸಂದಿಗ್ಧತೆಯಿಂದ ಹೀಗಾಗಿದೆ ಅನಿಸುತ್ತದೆ. ಮೋಡಿ ಲಿಪಿಯ ಪ್ರಭಾವ ಈ ಕಾಲದಲ್ಲಿ ಹೆಚ್ಚಾಗಿದ್ದಂತೆ ತೋರುತ್ತದೆ(ಆಧುನಿಕ ಸಂದರ್ಭದಲ್ಲಿ ಈ ಮೋಡಿಲಿಪಿ ಲಿಪಿಯಲ್ಲ ಅದೊಂದು ಶೈಲಿ ಎನ್ನುವ ಚರ್ಚೆ ನಡೆದಿದೆ). ಬಿಜಾಪುರ, ಬೀದರ್, ಗುಲಬರ್ಗಾ ಜಿಲ್ಲಾ ಪ್ರದೇಶಗಳಲ್ಲಿ ಬಳಸುವ ಭಾಷೆ ಮರಾಠಿಯಾಗಿದ್ದರೂ ಲಿಪಿ ಮೋಡಿಯಾಗಿತ್ತು. ಹಾಗೆಯೇ ರಾಯಚೂರು ತುಂಗಭದ್ರಾದ ದಕ್ಷಿಣದ ಕಡೆಗೆ ಕನ್ನಡ ಭಾಷೆಯನ್ನು ಬಳಸಿದರೂ ಲಿಪಿ ಮೋಡಿಯಾಗಿತ್ತು. ಮರಾಠರ ಪೇಶ್ವೆಗಳ ರಾಜ್ಯಾಡಳಿತ ಕಡತಗಳೆಲ್ಲ ಮೋಡಿ ಲಿಪಿಯಲ್ಲಿಯೇ ಇದ್ದವು ಎಂದು ತಿಳಿದುಬರುತ್ತದೆ. ಕೃಷ್ಣಾನದಿಯ ಉತ್ತರದ ಕಡೆಗೆ ಸಿಕ್ಕ ಕೆಲವು ತತ್ವಪದಗಳ ಹಸ್ತಪ್ರತಿಗಳೂ ಮೋಡಿ ಲಿಪಿಯಲ್ಲಿರುವುದು ಗೊತ್ತಾಗುತ್ತದೆ.

ಕಳೆದ ೧೮-೧೯ನೇ ಶತಮಾನದಲ್ಲಿ ತೀವ್ರತರವಾಗಿ ಕಾಣಿಸಿಕೊಂಡ ಬಹುಸಂಖ್ಯೆಯ ಸಂತರು, ಯೋಗಿಗಳು, ಅವಧೂತರು, ತತ್ವಪದಕಾರರು ತಮ್ಮ ಅನುಭಾವಿಕ ಶಕ್ತಿಯ ಮೂಲಕ ಜನವರ್ಗಗಳ ಮೇಲೆ ಗಾಢ ಪ್ರಭಾವ ಬೀರಿದರು. ಹೀಗಾಗಿ ಇವರು ದೈವಗಳಾಗಿ ಇಂದಿಗೂ ಪೂಜಿತರಾಗುತ್ತಿದ್ದಾರೆ.

ಕಳೆದ ೫೦೦ ವರ್ಷಗಳಿಂದ(೧೫-೨೦ನೆಯ ಶತಮಾನ) ಈ ತತ್ವಪದ ಸಾಹಿತ್ಯ ಬೆಳೆದು ಬಂದಿದೆ. ಕಳೆದ ಶತಮಾನದಿಂದ(೧೯೧೫) ಈ ತತ್ವಪದ ಸಾಹಿತ್ಯವನ್ನು ಸಂಗ್ರಹಿಸಿ ಪ್ರಕಟಿಸಲಾಗುತ್ತದೆ. ಕ್ಷೇತ್ರಾಧಾರಿತ ಗಂಭೀರ ನೆಲೆಯ ತತ್ವಪದ ಸಂಪಾದನೆಗಳೂ ಇತ್ತೀಚೆಗೆ ಬಂದಿವೆ. ದಶಕದಿಂದೀಚೆಗೆ ಗಂಭೀರ ಅಧ್ಯಯನಗಳು ನಡೆದಿವೆ. ಈ ಮೂಲಕ ೨೧ನೇ ಶತಮಾನದಲ್ಲಿಯೂ ಇವುಗಳ ಅನುಸಂಧಾನ ನಡೆಯುತ್ತಿದೆ.

**ಅಡಿಟಿಪ್ಪಣಿಗಳು**

೧. ಉಲ್ಲೇಖ : ಅಮರೇಶ ಎನ್., ೨೦೦೩, ಹೈದ್ರಾಬಾದ್ ಕರ್ನಾಟಕ ಹಾಡು ಪಾಡು, ಪು.೧೭

೨. ನರಸಿಂಹಮೂರ್ತಿ ಎ.ವಿ., ಕರ್ನಾಟಕದ ಸೇವುಣರ ಇತಿಹಾಸ, ಪು.೯೬

೩. ಸೀತಾರಾಮಯ್ಯ ವಿ., ೨೦೦೬, ರಾಷ್ಟ್ರಕೂಟರ ಕಾಲದ ಕನ್ನಡ ಸಾಹಿತ್ಯ: ಕರ್ನಾಟಕ ಪರಂಪರೆ, ಸಂಪುಟ ೧, ಪು.೨೯೭

೪. ರಹಮತ್ ತರೀಕೆರೆ, ೨೦೦೬, ಕತ್ತಿಯಂಚಿನ ದಾರಿ, ಪು.೧೫೭,೧೫೮

೫. ಪಾಂಡುರಂಗ ಡಿ.ಆರ್., ೨೦೦೩, ಸಮಗ್ರ ದಾಸಸಾಹಿತ್ಯ, ಪ್ರಸ್ತಾವನೆ, ಸಂ.೨೫

೬. ಅಮರೇಶ ಎನ್., ೨೦೦೩, ಹೈದ್ರಾಬಾದ್ ಕರ್ನಾಟಕ, ಹಾಡು ಪಾಡು, ಪು.೩೯

೭. ರಹಮತ್ ತರೀಕೆರೆ, ೨೦೦೧, ಕರ್ನಾಟಕದ ಸೂಫಿಗಳು, ಪು.೪೧

೮. ಅದೇ, ಪು.೭೮

೯. ಅದೇ, ಪು.೮೦

೧೦. ಬಸವರಾಜು ಎಲ್., ೧೯೯೬, ನಿಜಗುಣ ಶಿವಯೋಗಿ, ಪ್ರಸ್ತಾವನೆ, ಪು.೬-೭

೧೧. ಅಮರೇಶ ಎನ್., ೧೯೯೯, ನುಡಿವ ಬೆಡಗು, ಪು.೧೬-೧೭

೧೨. ಗೀತಾನಾಗಭೂಷಣ(ಸಂ), ೧೯೯೮, ಖೇಮಣ್ಣ, ಪು.೩೨

೧೩. ಉಲ್ಲೇಖ: ಅಮರೇಶ ಎನ್., ೧೯೯೯, ನುಡಿವ ಬೆಡಗು, ಪು.೧೮

೧೪. ರಹಮತ್ ತರೀಕೆರೆ, ೨೦೦೧, ಕರ್ನಾಟಕದ ಸೂಫಿಗಳು, ಪು.೭೬

೧೫. ಅದೇ, ಪು.೨

೧೬. ಅದೇ, ಪು.೨೦೧

೧೭. ಅಮರೇಶ ಎನ್., ೧೯೯೯, ನುಡಿವ ಬೆಡಗು, ಪು.೨೧-೨೨

೧೮. ಅದೇ, ಪು.೨೩

## ಅಧ್ಯಾಯ ಮೂರು

# ಸ್ವರವಚನ ಮತ್ತು ತತ್ವಪದ ಪರಿಕಲ್ಪನೆಯ ಚರ್ಚೆಗಳು

ಕನ್ನಡ ಸಾಹಿತ್ಯ ಪರಂಪರೆಯಲ್ಲಿ 'ಕವಿರಾಜ ಮಾರ್ಗ' ಕೃತಿಯ ಪೂರ್ವದಲ್ಲಿಯೂ ಕನ್ನಡ ದೇಸಿ(ಹಾಡುವ) ಕಾವ್ಯಪ್ರಕಾರಗಳಿದ್ದವು ಎಂದು ವಿದ್ವಾಂಸರು ಹೇಳುತ್ತಾ ಬಂದಿದ್ದಾರೆ. ಕವಿರಾಜಮಾರ್ಗದಲ್ಲಿ ಪ್ರಸ್ತಾಪಿಸಲ್ಪಟ್ಟ 'ಬೆಂದಡೆ'ಯನ್ನು ಅನುಲಕ್ಷಿಸಿ ಹಿಂದೆ ಕನ್ನಡದಲ್ಲಿ ಹಾಡುಗಬ್ಬಗಳ ರಚನೆಯಿತ್ತು ಎಂದು ಈ ಮೇಲಿನ ಮಾತಿಗೆ ಸಮರ್ಥನೆಯನ್ನು ಕೊಡುತ್ತಿದ್ದಾರೆ. ಮುಂದುವರೆದು 'ಕವಿರಾಜಮಾರ್ಗದ ಪ್ರಕಾರ ೯ನೇ ಶತಮಾನಕ್ಕಿಂತ ಹಿಂದಿನಿಂದಲೂ ಕರ್ನಾಟಕದಲ್ಲಿ ಮೇಲ್ವಾಡೆಂದೋ, ಬೆದಂಡೆಯೆಂದೋ ಪ್ರಚುರವಾಗಿದ್ದ ಗೀತಸಾಹಿತ್ಯ ಪ್ರಕಾರವನ್ನು, ವಸ್ತು ದೃಷ್ಟಿಯಿಂದ, ಕಾಮದಿಂದ, ದೈವಭಕ್ತಿಗೋ ಧರ್ಮಸಿದ್ಧಾಂತಕ್ಕೋ ತಿರುಗಿಸಿ ಕಡೆಯಪಕ್ಷ ಕ್ರಿ.ಶ.೮-೯ನೇ ಶತಮಾನದಿಂದ ಹಿಡಿದು ೧೮-೧೯ನೇ ಶತಮಾನದವರೆಗೆ ಸುಮಾರು ಒಂದು ಸಾವಿರ ವರ್ಷಗಳ ಕಾಲ ಸ್ವರವಚನವೆಂದೋ ವಚನವೆಂದೋ ಶಿವಶರಣರು, ಕೀರ್ತನೆಯೆಂದೋ ಉಗಾಭೋಗವೆಂದೋ ಹರಿದಾಸರು, ಕರ್ನಾಟಕ ಮಾತ್ರವಲ್ಲ ಆಸೇತು ಹಿಮಾಚಲ ಭಾರತವು ಪರಕೀಯ ಧಾಳಿಗಳಿಂದ ಕಂಗೆಟ್ಟಿದ್ದ ಕಾಲದಲ್ಲಿ ನಮ್ಮ ಸಂಸ್ಕೃತಿಯನ್ನು ರಕ್ಷಿಸಿಕೊಳ್ಳುವುದಕ್ಕಾಗಿ ಬೇಕಾದ ಆತ್ಮಸ್ಥೈರ್ಯವನ್ನೂ, ಶೌರ್ಯವನ್ನು ಜನತೆಗೆ ಕೊಟ್ಟಿತು''[೧] ಎಂದು ೯ನೇ ಶತಮಾನದಿಂದ ಹರಿದಾಸರವರೆಗಿನ ಗೀತಸಾಹಿತ್ಯವನ್ನೆಲ್ಲ ಆತ್ಮಸ್ಥೈರ್ಯವನ್ನು ತುಂಬಿದ ಸಾಹಿತ್ಯವೆಂದು ಏಕಾಕಾರದಲ್ಲಿ ನೋಡುತ್ತಾರೆ. ಈ ಚಿಂತನೆ ಸಾಹಿತ್ಯದ ವರ್ಗೀಕರಣ, ವಿಶ್ಲೇಷಣೆಗಳಿಂದ ಹೊರತಾದ ಸಮಕಾಲೀನ ವಿಮರ್ಶೆ ರೂಪಗೊಳ್ಳಬೇಕಾಗಿರುವುದನ್ನು ಸೂಚಿಸುತ್ತದೆ. ಈಗ ಈ ಹಿನ್ನೆಲೆಯಲ್ಲಿಯೇ ಸಾಹಿತ್ಯವನ್ನು ಪರೀಕ್ಷಿಸಬೇಕಾಗಿದೆ.

ಗೀತಸಾಹಿತ್ಯವನ್ನು ಕುರಿತು ಈ ನಿಟ್ಟಿನಲ್ಲಿ ಬೇರೆ ಬೇರೆ ವಿದ್ವಾಂಸರು ಚರ್ಚಿಸುತ್ತಾರೆ. ತೀನಂಶ್ರೀ, ಕಲಬುರ್ಗಿ ಅವರು ಬೆದಂಡೆ ಎಂಬುದು ಮೂಲತಃ ಒಂದು ವಾದ್ಯ ವಿಶೇಷ. ಇದರ ಜೊತೆಗೆ ಹಾಡುವ ಹಾಡು 'ಬೆದಂಡೆಗಬ್ಬ' ಎಂದು ಬೆದಂಡೆಯ ಹಾಡುವ ಸ್ವರೂಪವನ್ನು ಗುರುತಿಸುತ್ತಾರೆ. ಪ್ರಾಚೀನ ಕಾವ್ಯಗಳಲ್ಲಿ ಉಲ್ಲೇಖವಾದ ಪಾಡುಗಬ್ಬ. ಒನಕೆವಾಡು, ಪಾಡುಗವಿತೆ, ಬೀದಿವಾಡು ಎಂಬ ಹೆಸರುಗಳು

ಈ ಪ್ರಕಾರದ ಇರುವಿಕೆಯನ್ನು ಸೂಚಿಸುತ್ತವೆ ಎಂದು ವೀರಣ್ಣ ರಾಜೂರ ಹೇಳುತ್ತಾರೆ. ಹೀಗೆ ಈ ಚರ್ಚೆ ಹಾಡುಗಬ್ಬದ ಅಥವಾ ಗೀತಸಾಹಿತ್ಯದ ಪ್ರಾಚೀನತೆ ಕವಿರಾಜಮಾರ್ಗಕ್ಕೂ ಹಿಂದೆ ಹೋಗುತ್ತದೆ.

ಆದರೆ ಅವುಗಳ ಉಪಲಬ್ಧತೆಯು ೧೨ನೆಯ ಶತಮಾನದ ಶಿವಶರಣರ ಕಾಲದಲ್ಲಿ ಮಾತ್ರ ದೊರೆಯುತ್ತವೆ. ಈಗ ಜೇಡರ ದಾಸಿಮಯ್ಯ, ಸಕಲೇಶ ಮಾದರಸ, ಅಲ್ಲಮ ಮತ್ತು ಬಸವಾದಿ ಪ್ರಮಥರು ರಚಿಸಿ ಅವರ 'ಅಂಕಿತ'ಗಳನ್ನು ಹೊಂದಿದ ಅನೇಕ ಹಾಡುಗಳು ಉಪಲಬ್ಧವಾಗಿವೆ ಎಂದು ಪ್ರತಿಪಾದಿಸಿದ್ದಾರೆ.

ಎಲ್.ಬಸವರಾಜು ಅವರು 'ಇಡೀ ಭಾರತೀಯ ಸಾಹಿತ್ಯಕ್ಕೆ ವಚನವೆಂಬ ಅಭೂತಪೂರ್ವ ಕಾಣಿಕೆಯನ್ನು ಕೊಟ್ಟ ಶಿವದಾಸರು ತಮ್ಮ ಕಾಲಕ್ಕೆ ಅಥವಾ ತತ್ಪೂರ್ವಕ್ಕೆ ಕನ್ನಡದಲ್ಲಿಲ್ಲದಿದ್ದ ಹಾಡುಗಳನ್ನು ಬರೆಯಲು ಮೊದಲಿಗರಾದರು. ಶಿವಶರಣರು ಬರೆದ ಹಾಡುಗಳು ಪಲ್ಲವದಿಂದ ಕೂಡಿ ಬೇರೆ ಬೇರೆ ರಾಗಗಳಲ್ಲಿ ಹಾಡಲು ಅನುವರಿತು ರಚಿತವಾದ ಗೇಯ ಗೀತೆಗಳು, ಮುಂದೆ ೧೫-೧೬ನೇ ಶತಮಾನಗಳಲ್ಲಿ ಹರಿದಾಸರು ಯಾವ ಕೀರ್ತನ ಸಾಹಿತ್ಯ ಪ್ರಕಾರದಿಂದ ಇಡೀ ದಕ್ಷಿಣ ಭಾರತದ ಸಂಗೀತ ಮತ್ತು ಸಾಹಿತ್ಯ ಪ್ರಪಂಚಗಳೆರಡರಲ್ಲೂ ಅದ್ವಿತೀಯ ಕೀರ್ತಿಯನ್ನು ಗಳಿಸಿದರೋ ಆ 'ಕೀರ್ತನ' ಪ್ರಕಾರಕ್ಕೆ ೧೨ನೆಯ ಶತಮಾನದ ಬಸವಾದಿ ಶಿವದಾಸರ ಈ ಗೀತಾ (ಹಾಡುಗಳ) ಪ್ರಕಾರವು ಮೂಲವೂ ಮಾದರಿಯವೂ ಆಗಿದ್ದವು'[೨] ಎಂದು ಸ್ವರವಚನಗಳ ಪ್ರಾಚೀನತೆಯನ್ನು, ಉಗಮವನ್ನು ಗುರುತಿಸುತ್ತಾರೆ. 'ಸ್ವರವಚನ'ವೆಂಬುದು ವೀರಶೈವರು ಬಳಸಿದ ಒಂದು ಸಾಹಿತ್ಯದ ಹೊಸ 'ಪರಿಭಾಷೆ'. ವೀರಶೈವ ಧರ್ಮ ತತ್ವಸಿದ್ಧಾಂತಗಳ ಹಾಗೂ ಸಂಸ್ಕೃತಿ ಪರಂಪರೆಯ ಅಸ್ತಿತ್ವಕ್ಕಾಗಿ ಸ್ವರವಚನಗಳನ್ನು ರಚಿಸಿರುವುದು ಮನವರಿಕೆಯಾಗುತ್ತದೆ. ವೀರಶೈವ ಸಿದ್ಧಾಂತಗಳಾದ ಷಟ್ಸ್ಥಲ, ಅಷ್ಟಾವರಣ, ಪಂಚಾಚಾರ, ಶೀಲಗಳು ಮುಂತಾದ ತಾತ್ವಿಕ ನಿಲುವುಗಳಿಗೆ ಒತ್ತಾಸೆ, ಭದ್ರತೆ, ಜನಪ್ರಿಯತೆ, ಆಚರಣೆ ದೊರೆಕಿಸಿಕೊಡುವ ನಿಟ್ಟಿನಲ್ಲಿ ಸೈದ್ಧಾಂತಿಕ ವಿಚಾರಗಳನ್ನು ಪ್ರತಿಪಾದಿಸುವ ಸ್ವರವಚನಗಳು ರಚಿತಗೊಂಡಿವೆ. ಈ ಹಾಡುಗಳಲ್ಲಿ ವೀರಶೈವ ಪರಿಭಾಷೆ ಅತ್ಯಂತ ಸ್ಪುಟವಾಗಿ ಅಡಕಗೊಂಡಿದೆ. ಶಿವಯೋಗಿ/ಶಿವನಾಮ ಸ್ತೋತ್ರ ಮುಖ್ಯವಾಗಿವೆ ಎಂದು ತಿಳಿಯಲಾಗಿದೆ. ಈ ಶರಣರ ಹಾಡುಗಳು ದೊರೆಯುವ ಮೊದಲನೆಯ ಮೂಲ ಮಹಾಲಿಂಗದೇವನ (೧೪೩೦) 'ಏಕೋತ್ತರ ಶತಸ್ಥಲ' ಮತ್ತು ಎರಡನೆಯದಾಗಿ ಹಲಗೆಯಾರ್ಯ ಮತ್ತು ಗೊಳೂರು ಸಿದ್ಧವೀರನ 'ಶೂನ್ಯ ಸಂಪಾದನೆ'ಗಳು, ಕಂಬಾಳ ಶಾಂತಮಲ್ಲೇಶನ 'ಗಣವಚನ ರತ್ನಾವಳಿ', ಚೆನ್ನವೀರಾರ್ಯನ 'ಶಿವಯೋಗ ಪ್ರದೀಪಿಕೆ'. ಇಲ್ಲಿ ತಮ್ಮ ಉದ್ದೇಶಿತ ಅರ್ಥಕ್ಕನುಗುಣವಾಗಿ ವಚನ ಮತ್ತು ಶರಣರ ಹಾಡುಗಳನ್ನು(ಸ್ವರವಚನ) ಆಯ್ದು ಹೊಂದಿಸಿದ್ದಾರೆ. ಆದರೆ ಇದೇ ಕಾಲದಲ್ಲಿ ಸಂಕಲನವನ್ನು ಮಾಡಿದ ಮಗ್ಗೆಯ ಮಾಯಿದೇವನ 'ಏಕೋತ್ತರ ಶತಸ್ಥಲ'ದ ಸ್ವರೂಪ ಬೇರೆಯಾಗಿರುವುದು ಕುತೂಹಲವಾಗಿದೆ.

ಮಾಯಿದೇವನು ಹಾಡುಗಳನ್ನು ಒಂದೊಂದು ವಾರ್ಧಕ ಷಟ್ಪದಿಯಲ್ಲಿ ರಚಿಸಿದ್ದಾನೆ. ಅವನೇಕೆ ಶರಣರ ಹಾಡುಗಳ ಕಡೆಗೆ ಗಮನ ಹರಿಸಲಿಲ್ಲ? ಏಕೆಂದರೆ ಅವು ಇದ್ದಿರಲೇ ಇಲ್ಲ[೩] ಎನ್ನುವ ವಿರೋಧದ ಚರ್ಚೆಗಳು ಇವೆ. ವೀರಣ್ಣ ರಾಜೂರ ಅವರು ಸ್ವರವಚನ ಎನ್ನುವುದು 'ಸ್ವತಃ' ಶರಣರೇ ಈ ಹೆಸರನ್ನು ರೂಪಿಸಿ, ರೂಢಿಗೊಳಿಸಿರಬಹುದಾಗಿದೆ ಎನ್ನುತ್ತಾ, ಸೋಮೇಕಟ್ಟೆ ಚೆನ್ನವೀರಸ್ವಾಮಿಯ(೧೭೪೦) ಒಂದು ಸ್ವರವಚನದಲ್ಲಿ ಸ್ವರವಚನವ ಪಾಡೆ ಸಮರಸವನು ಬೇಡೆ ಎಂಬ ಮಾತು ಬರುತ್ತದೆ. ಇದು ಸ್ವತಃ ಕರ್ತೃವೇ ತನ್ನ ರಚನೆಗೆ ಸ್ವರವಚನವೆಂದು ಕರೆದುಕೊಂಡ ಉದಾಹರಣೆಯಾಗಿದೆ. ಆದರೆ ಸಂಕಲನಕಾರರಲ್ಲಿ ಈ ಪದವನ್ನು ಮೊದಲು ಬಳಸಿದವನು ಸುಮಾರು ೧೬೦೦ರಲ್ಲಿದ್ದ ಕಂಬಾಳ ಶಾಂತಮಲ್ಲೇಶ[೪] ಎನ್ನುತ್ತಾರೆ. ಇದರಿಂದ ೧೬ನೇ ಶತಮಾನದಲ್ಲಿ ಸ್ವರವಚನ ಎನ್ನುವ ಪದ ಬಳಕೆಯಾಗಿರುವುದು ಕಂಡು ಬರುತ್ತದೆ.

ಸರ್ವಮಂಗಳ ಶಂಕರ ಅವರು 'ಶಿವಶರಣ ಸ್ವರವಚನಗಳಲ್ಲಿಯೇ ಸ್ವರವಚನವೆಂಬ ಪದದ ಉಲ್ಲೇಖ ನಮಗೆ ದೊರೆಯುತ್ತವಾದರೂ, 'ಸ್ವರವಚನ' ಎಂಬ ಪದದ ನಾಮ ನಿರ್ದೇಶನದ ಅರ್ಥ, ಔಚಿತ್ಯವೇನು ಎಂಬ ಬಗೆಗೆ ಶಿವಶರಣರೇ ಹೇಳಿರುವ ವಿವರಣೆಗಳು ನಮಗೆ ಕಂಡುಬರುವುದಿಲ್ಲ'[೫] ಎಂದು ಚರ್ಚಿಸುತ್ತಾರೆ. ಈ ಕಾರಣಗಳಿಂದ 'ಸ್ವರವಚನಗಳ' ಉಗಮ, ಪರಿಭಾಷೆ ಕುರಿತಂತೆ ವಿದ್ವಾಂಸರಲ್ಲಿ ಏಕಾಭಿಪ್ರಾಯವಿಲ್ಲ. ಈ ಹಿಂದಿನ ಪೀಠಿಕೆಯ ಚರ್ಚೆಯನ್ನು ಗಮನಿಸಿದರೆ ಸ್ವರವಚನಗಳ ಕುರಿತ ಚರ್ಚೆಗಳು ಎರಡು ನೆಲೆಯಲ್ಲಿ ನಡೆದಿರುವುದು ಕಂಡುಬರುತ್ತದೆ. ಒಂದು : ಸ್ವರವಚನಗಳು ಮೊದಲು ಬಸವಾದಿ ಶರಣರಿಂದಲೇ ರಚಿತವಾದವೆಂದು. ಎರಡು : ವಚನ ಪದ್ಯಗಳನ್ನೇ ೧೫ನೆಯ ಶತಮಾನದ ಸಂಕಲನಕಾರರು ಸ್ವರವಚನಗಳೆಂದು ಸೃಷ್ಟಿ ಮಾಡಿದರು ಎಂಬ ವಾದಗಳಿವೆ. ಸ್ವರವಚನ ಕುರಿತು ಹೀಗೆ ದ್ವಿಮುಖವಾದ ಆಲೋಚನೆಗಳಿವೆ. ಸ್ವರವಚನ ಕುರಿತ ಗ್ರಹಿಕೆಗಳು ಹೀಗೆ ಭಿನ್ನವಾಗಲು ಕಾರಣಗಳೇನು? ವರ್ತಮಾನದ ಯಾವ ಒತ್ತಡಗಳು ಈ ಚಿಂತನೆಗಳನ್ನು ನಿರ್ಮಿಸಿವೆ? ಇವು ಅವರ ಚಿಂತನೆಗೆ ಯಾವ ಮೂಲಭೂತ ಚೌಕಟ್ಟನ್ನು ಒದಗಿಸಿವೆ? ಈ ಹಿನ್ನೆಲೆಯಲ್ಲಿ ಸ್ವರವಚನ ಆ ಕುರಿತು ನಡೆದ ಚರ್ಚೆಯನ್ನು ಕ್ರೋಡೀಕರಿಸಿ ವಿವೇಚಿಸುವುದು ಮತ್ತು ಇಲ್ಲಿ ಆರಂಭಕ್ಕೆ ಸ್ವರವಚನಗಳನ್ನು ವಿವಿಧ ಕೃತಿಗಳಲ್ಲಿ ವಿವಿಧ ರೀತಿಯಲ್ಲಿ ಹೆಸರಿಸಿರುವುದನ್ನು ಉಲ್ಲೇಖಿಸಲಾಗಿದೆ.

## ಸ್ವರವಚನ ಪರಿಕಲ್ಪನೆ ಚರ್ಚೆಗಳು

'ಸ್ವರ' ಮತ್ತು 'ವಚನ' ಎಂಬೆರಡು ಶಬ್ದಗಳಿಂದ ನಿಷ್ಪನ್ನವಾದ 'ಸ್ವರವಚನ'ವು ಪದ, ಪದನು, ಸ್ವರಪದ, ಬೆಡಗಿನ ಸ್ವರಪದ ಅನುಭಾವಪದ, ಸ್ವರಬೊಲ್ಲಿ, ಗೀತ, ವಚನ, ರಾಗಲಲಿತ ವಚನ ಎಂದೂ ಕರೆಯಲಾಗಿದೆ. ಸ್ವರಗಳಿಗೆಲ್ಲ ಒಡೆಯನಾದವನು 'ಈಶ್ವರ' ಹಾಗಾಗಿ ಸ್ವರಕ್ಕೆ ಶಿವನೆಂಬ ಅರ್ಥವೂ ಇದೆ. 'ಕಾಶ್ಮೀರ ಶೈವದಲ್ಲಿ ಶಿವನ ಇನ್ನೊಂದು ಹೆಸರು 'ಸ್ವರ'ವೆಂದೇ ಪ್ರತೀತಿ. 'ಶಿವ' ಎಂಬರ್ಥ ಕೊಡುವ

‘ಸ್ವರ’ಕ್ಕೆ ‘ಪರತತ್ವ’ ಎಂಬರ್ಥವೂ ಇರುವುದನ್ನು ಅಲ್ಲಮನ ವಚನದಲ್ಲಿ ನೋಡಬಹುದಾಗಿದೆ. ‘ಮಾತೆಂಬುದು ಜ್ಯೋತಿರ್ಲಿಂಗ’ ಎಂಬ ವಚನದ ಸಾಲು ಮತ್ತು ‘ಸ್ವರವೆಂಬುದು ಪರತತ್ವ’ ಎಂಬ ವಚನದ ಸಾಲು ಕೂಡ ‘ಸ್ವರ’ವೆಂದರೆ ಶಿವನೆಂಬ ಅರ್ಥವನ್ನೇ ಕೊಡುತ್ತವೆ’ ಎಂದು ಅರ್ಥೈಸಲಾಗಿದೆ. ‘ಸ್ವರವಚನ’ ಎಂಬ ಪದದಲ್ಲಿ ‘ಸ್ವರ’ ಮತ್ತು ‘ವಚನ’ ಎಂಬ ಎರಡು ಪದಗಳು ಸೇರಿವೆ. ಸ್ವರವೆಂದರೆ ಧ್ವನಿ, ಧಾಟಿ, ರಾಗ ಎಂಬರ್ಥ ಬರುತ್ತದೆ. ಶ್ರುತಿಯಿಂದ ಸ್ವರ, ಸ್ವರದಿಂದ ರಾಗ ರೂಪಿತವಾಗಿದೆ. ಅಂದರೆ ರಾಗಬದ್ಧವಾಗಿ ಹಾಡಲು ಬರುವ ವಚನ ‘ಸ್ವರವಚನ’ ಎಂದು ಚರ್ಚಿಸಲಾಗಿದೆ. ತಮ್ಮ ವಾದಕ್ಕೆ ಸಮರ್ಥನೆಯಾಗಿ ಸ್ವರವಚನಗಳಿಗೆ ವಿವಿಧ ಕೃತಿಗಳಲ್ಲಿ ವಿವಿಧ ರೀತಿಯಾಗಿ ಹೆಸರಿಸಿರುವುದನ್ನು ಪ್ರಸ್ತಾಪಿಸುತ್ತಾರೆ.

- ಮಹಾಲಿಂಗ ದೇವನು(೧೪೩೦) ಮೊದಲ ಬಾರಿಗೆ ತನ್ನ ‘ಏಕೋತ್ತರ ಶತಸ್ಥಲ’ ಮತ್ತು ‘ಸೂಕ್ಷ್ಮ ಮಿಶ್ರಷಟ್ ಸ್ಥಲ’ ಕೃತಿಗಳಲ್ಲಿ ಸ್ವರವಚನಗಳಿಗೆ ‘ಪದನು’ ಎಂದು ಕರೆಯುತ್ತಾನೆ.
- ಅದೇ ಕಾಲದ ಶಿವಗಣಪ್ರಸಾದಿ ಮಹಾದೇವಯ್ಯ ತನ್ನ ‘ಶೂನ್ಯಸಂಪಾದನೆ’ಯಲ್ಲಿ ಸ್ವರವಚನಗಳಿಗೆ ‘ಪದಂಗಳು’ ಎಂದಿದ್ದಾನೆ.
- ಮುಂದೆ ಬಂದ ಹಲಗೆಯಾರ್ಯ, ಗುಮ್ಮಳಾಪುರದ ಸಿದ್ಧಲಿಂಗ, ಗೂಳೂರು ಸಿದ್ಧವೀರಣ್ಣೊಡೆಯರ ಶೂನ್ಯಸಂಪಾದನೆಗಳಲ್ಲಿಯೂ ‘ಪದಂಗಳು’ ಎಂದೇ ಕರೆಯಲಾಗಿದೆ.
- ಕೇವಲ ಸ್ವರವಚನಗಳಿಂದ ಕೂಡಿದ ‘ಶಿವಯೋಗ ಪ್ರದೀಪಿಕೆ’ಯಲ್ಲಿ ‘ಗೀತ’ ‘ಸ್ವರಬೊಲ್ಲಿ’, ‘ಬೆಡಗಿನ ಸ್ವರಬೊಲ್ಲಿ’ ಎಂದು ಹೆಸರಿಸಲಾಗಿದೆ.
- ಗಣವಚನ ರತ್ನಾವಳಿಯಲ್ಲಿ ‘ವಚನ’, ‘ರಾಗಲಲಿತ ವಚನ’, ‘ಸ್ವರವಚನ’ ಎಂದು ಮೂರು ರೀತಿಯಾಗಿ ಹೆಸರಿಸಲಾಗಿದೆ.
- ಪರಮ ಮೂಲಜ್ಞಾನ ಷಟ್‌ಸ್ಥಲ, ವೀರಶೈವ ಚಿಂತಾಮಣಿಗಳಲ್ಲಿ ‘ವಚನ’ ಎಂದೇ ಕರೆಯಲಾಗಿದೆ.
- ಶೀಲ ಸಂಪಾದನೆ, ಜ್ಞಾನಷಟ್‌ಸ್ಥಲಸಾರ, ಚಿದೈಶ್ವರ್ಯ ಚಿದಾಭರಣಗಳಲ್ಲಿ ‘ಸ್ವರವಚನ’ ಎಂದಿದೆ.
- ಚೆನ್ನಬಸವಣ್ಣನವರ ಅನುಭಾವ ಷಟ್‌ಸ್ಥಲದ ವಚನಗಳು ಕೃತಿಯ ಅಂತ್ಯ ಸ್ಥಲದ ಅಂತ್ಯದಲ್ಲಿ ಬರುವ ಒಂದು ಹಾಡಿಗೆ ‘ಅನುಭಾವಪದ’ ಎಂದಿದೆ.
- ಬಿಡಿಯಾಗಿ ದೊರೆತ ಹಸ್ತಪ್ರತಿಗಳಲ್ಲಿ ಕೆಲವು ಸ್ವರವಚನಗಳಿಗೆ ‘ಸ್ವರಪದ’ ಎಂದು ಹೆಸರಿಸಲಾಗಿದೆ.[೬]

ಮೂಲತಃ ವಚನಗಳಲ್ಲಿದ್ದ ಲಯ, ಭಾವಗಳಿಗೆ ಸಂಗೀತ ಲಕ್ಷಣಗಳು ಸೇರಿ ಸ್ವರವಚನವಾಗಿದೆ. ಇದು ೧೫ನೆಯ ಶತಮಾನದಲ್ಲಿ ಸಾಹಿತ್ಯ ಪ್ರಕಾರವಾಗಿ ಸೃಷ್ಟಿಯಾಗಿದೆ. ವೀರಶೈವ ಸಾಹಿತ್ಯದ ತಾತ್ವಿಕ ಪರಿಭಾಷೆಯಾಗಿ ಬೆಳೆದಿರುವುದು ಗಮನಿಸಬಹುದಾಗಿದೆ.

ಶಿ.ಶಿ.ಬಸವನಾಳ ಅವರು ಸರ್ಪಭೂಷಣರ 'ಕೈವಲ್ಯ ಕಲ್ಪವಲ್ಲರಿ' ಕೃತಿಯ ಪ್ರಸ್ತಾವನೆಯಲ್ಲಿ 'ಹಾಡುಗಬ್ಬಗಳು ಮೊದಲಾದುದು ದಾಸಸಾಹಿತ್ಯದಿಂದಲೇ ಎಂದು (೧೪-೧೫) ಸಾಮಾನ್ಯವಾಗಿ ಹೇಳುವುದುಂಟು. ಆದರೆ ಈ ಊಹೆಗೆ ಬಲವಾದ, ನಂಬಲರ್ಹವಾದ ಆಧಾರಗಳಾವುವೂ ಇಲ್ಲ. ಕನ್ನಡ ಸಾಹಿತ್ಯದ ಆರಂಭಕಾಲದಿಂದ ವೀರಶೈವ ಸಾಹಿತ್ಯದ ಉದಯದವರೆಗೆ ನಿಜವಾದ ಹಾಡುಗಬ್ಬಗಳು ತಮ್ಮ ಕಣ್ಣಿಗೆ ಬೀಳುವುದಿಲ್ಲವೆಂದೇ ಹೇಳಬಹುದು... ಹಾಡುಗಳ ರಚನೆಯಲ್ಲಿಯೂ ವೀರಶೈವ ಬರಹಗಾರರಿಗೇ ಅಗ್ರಸ್ಥಾನ ಸಲ್ಲುವುದು. ಅಷ್ಟೇ ಅಲ್ಲ ಈ ಕಾರ್ಯದಲ್ಲಿಯ ಬಸವಾದಿಗಳೇ ಪುರಸ್ಕೃತರು ಎಂಬುದು ಕರ್ನಾಟಕ ಕವಿಚರಿತೆಯನ್ನು ಅವಲೋಕಿಸುವುದರಿಂದ ಸ್ಪಷ್ಟ ಗೊತ್ತಾಗುತ್ತದೆ'[೭] ಎಂದು ಚೆನ್ನಬಸವಣ್ಣ, ಪ್ರಭುದೇವರ ಮಂತ್ರಗೋಪ್ಯ, ಪದಮಂತ್ರಗೋಪ್ಯ, ಸಿದ್ಧರಾಮ, ಅಕ್ಕಮಹಾದೇವಿಯರ ತ್ರಿವಿಧಿಗಳನ್ನು ದೃಷ್ಟಿಯಲ್ಲಿಟ್ಟುಕೊಂಡು ವೀರಶೈವ ರಚನೆಗಳಾಗಿವೆ ಎಂದು ಹೇಳುತ್ತಾರೆ.

ಎಲ್.ಬಸವರಾಜು ಅವರು ತಮ್ಮ 'ಶಿವದಾಸ ಗೀತಾಂಜಲಿ'(೧೯೬೩) ಮೂಲಕ ಮೊದಲ ಬಾರಿಗೆ ಸ್ವರವಚನಗಳನ್ನು ಪ್ರಕಟಿಸಿದರು. 'ಮಹಾಲಿಂಗನಾಗಲಿ, ಜಕ್ಕಣ್ಣನಾಗಲಿ ಬಸವಾದಿ ಪ್ರಮಥರ ವಚನ (ಹಾಡು)ಗಳನ್ನು ಪಿಂಡಾದಿ ಜ್ಞಾನಶೂನ್ಯಂತವಾದ ನೂರೊಂದು ಸ್ಥಲದ ಪರಿವಿಡಿಯಲ್ಲಿ ಜೋಡಿಸಿರುವರೇ ಹೊರತು, ಆ ವಚನಗಳನ್ನಾಗಲಿ, ಆ ಹಾಡುಗಳನ್ನಾಗಲಿ ರಚಿಸಿದವರು ಅವರಲ್ಲ. ವಚನಗಳು ಹೇಗೆ ಬಸವಾದಿ ಶರಣರಿಂದ ರಚಿತವಾದುವೋ ಹಾಗೆಯೇ ಹಾಡುಗಳೂ ಆ ಬಸವಾದಿ ಪ್ರಮಥರಿಂದಲೇ ರಚಿತವಾದವು. ಅವನ್ನು ಸಂಕಲನ ಮಾಡಿ ಒಂದು ಕ್ರಮದಲ್ಲಿ ಜೋಡಿಸಿ ಅವುಗಳ ಅಭಿಪ್ರಾಯವನ್ನು ಆಯಾ ಸ್ಥಲದ ಸ್ವರೂಪವನ್ನೂ ಸ್ಪಷ್ಟಪಡಿಸುವುದಕ್ಕಾಗಿ ಪ್ರತಿಯೊಂದು ಸ್ಥಲದ ಮೊದಲಿಗೆ ಕೊಟ್ಟಿರುವ ಸೂತ್ರ(ಗದ್ಯ) ಮಾತ್ರ ಮಹಾಲಿಂಗ ಮತ್ತು ಜಕ್ಕಣ್ಣರು ರಚಿಸಿದುದು'[೮] ಎಂದು ಏಕೋತ್ತರ ಶತಸ್ಥಲಕಾರರ ಒಕ್ಕಣೆ ಮತ್ತು ಜಕ್ಕಣ್ಣನ ಏಕೋತ್ತರ ಶತಸ್ಥಲಕ್ಕೆ ಬರೆದ ವ್ಯಾಖ್ಯಾನಕಾರರ ಹೇಳಿಕೆಗಳ ಆಧಾರದಿಂದ ಬಸವಾದಿ ಶರಣರೇ ರಚಿಸಿದವು ಎಂದು ತಮ್ಮ ಮಾತಿಗೆ ಸಮರ್ಥನೆಯನ್ನೊದಗಿಸಿದ್ದಾರೆ.

ಎಂ.ಎಂ.ಕಲಬುರ್ಗಿ ಅವರು ೧೨ನೆಯ ಶತಮಾನದ ಶಿವಶರಣರ ಹೆಸರಿನಲ್ಲಿ ಕಂಡುಬರುವ ಸ್ವರವಚನಗಳಲ್ಲಿ ಸಾಹಿತ್ಯ ಗುಣ ಇಲ್ಲ. ವಚನಗಳ ಭಾವ-ಭಾಷೆಗಳ ಛಾಯೆ ಒಮ್ಮೊಮ್ಮೆ ಇವುಗಳಲ್ಲಿ ಕಂಡುಬರುವುದರಿಂದ ಮೂಲ ವಚನಗಳನ್ನು ತರುವಾಯದವರು ಸ್ವರವಚನಗೊಳಿಸಿರಬಹುದು ಎನ್ನುವ ವಾದಗಳ ಹಿನ್ನೆಲೆಯಲ್ಲಿ ಅವರು ಕೆಲವು ಅಂಶಗಳನ್ನು ಸಮರ್ಥನೆಯಾಗಿ ನೀಡುತ್ತಾರೆ.

೧. ಮೂಲತಃ ಸ್ವರವಚನವು ಗೀತಮಾಧ್ಯಮದ ಸಾಹಿತ್ಯ. ಗೀತಮಾಧ್ಯಮವನ್ನು ಬಿಟ್ಟು ಲೇಖನಮಾಧ್ಯಮದ ಮೂಲಕ ನೋಡಿದರೆ, ಇವುಗಳ ಸತ್ವ ಪರಿಣಾಮಗಳಲ್ಲಿ ಕೊರತೆ ಕಾಣುವುದು ಸಹಜ. ಈ ಮಾತು ದಾಸರ ಕೀರ್ತನೆಗಳಿಗೂ, ಜನಪದ ಹಾಡುಗಳಿಗೂ ಅನ್ವಯಿಸುತ್ತದೆ. ಹೀಗಾಗಿ ಇದರ ನಿಜವಾದ

ಸ್ವರೂಪ ಕಾಣಬೇಕಾದರೆ ಓದಬಾರದು, ಹಾಡಬೇಕು. 'ನೋಡು ನೋಡು ನೋಡು ಲಿಂಗವೇ' ಎಂಬ ನೀಲಲೋಚನೆಯ ಸ್ವರವಚನವನ್ನು ಒಮ್ಮೆ ಓದಿಸಿ, ಒಮ್ಮೆ ಹಾಡಿಸಿ ಕೇಳಿದಾಗ ಈ ಮಾತಿನ ಸತ್ಯ ಹೊಳೆಯುತ್ತದೆ. ಅಂದರೆ ಒಂದು ಮಾಧ್ಯಮದ ಸಾಹಿತ್ಯವನ್ನು ಇನ್ನೊಂದು ಮಾಧ್ಯಮದಲ್ಲಿಟ್ಟು ನೋಡುವುದು ಸರಿಯಾದ ತೀರ್ಪು ಎನಿಸುವುದಿಲ್ಲ.

೨. ವಚನ, ಸ್ವರವಚನಗಳ ವಸ್ತು ವೀರಶೈವ ತತ್ವ, ಕರ್ತೃ ವೀರಶೈವ ಶರಣರು ಹೀಗಾಗಿ ಇವುಗಳ ಭಾವಭಾಷೆಗಳಲ್ಲಿ ಸಮಾನ ಅಂಶಗಳು ಕಂಡುಬರುವುದು ಸಹಜ.

೩. ಹರಿಹರನ ರಗಳೆಗಳಲ್ಲಿ ಬರುವ 'ಅಗಳಾಗಳಿನ ಸಂಗತಿಗೆ ಗೀತಂಗಳಂ ಪಾಡುತ್ತೆ' ಮೊದಲಾದ ಮಾತುಗಳು, ವಚನಗಳಂತೆ ಸ್ವರವಚನಗಳಿಗೂ ಅನ್ವಯಿಸುತ್ತವೆ. ಇಲ್ಲಿಯ 'ಗೀತ' ಶಬ್ದ ವಚನಕ್ಕಿಂತ ಸ್ವರವಚನಕ್ಕೆ ಹೆಚ್ಚು ಒಪ್ಪುತ್ತದೆ. ಸಿದ್ಧರಾಮನು ಗೀತಗಳನ್ನು ಶುದ್ಧಭೈರವಿಯಲ್ಲಿ ಹಾಡಿದ ಉಲ್ಲೇಖಗಳು ಸಿದ್ಧರಾಮ ಪುರಾಣದಲ್ಲಿ ಸಿಗುತ್ತವೆ.

೪. ಒಂದು ವೇಳೆ ಉತ್ತರಕಾಲೀನರು ಕೆಲವು ವಚನಗಳನ್ನು ಸ್ವರವಚನಗಳನ್ನಾಗಿ ಮಾರ್ಪಡಿಸಿದ್ದರೆ ಪ್ರಮುಖ ಶರಣರ ವಚನಗಳನ್ನು ಮಾತ್ರ ಸ್ವರವಚನಗಳನ್ನಾಗಿಸುವುದು ಸಹಜ. ಆದರೆ 'ಅಪ್ರಮುಖ' ಶರಣರ ಸ್ವರವಚನಗಳೂ ಸಿಗುತ್ತವೆ.

೫. ಕೆಲವರ ಹೆಸರಿನಲ್ಲಿ ವಚನಗಳು ಸಿಗುತ್ತಿಲ್ಲ, ಸ್ವರವಚನಗಳು ಮಾತ್ರ ಸಿಗುತ್ತವೆ. ಈ ಐದು ಅಂಶಗಳ ಹಿನ್ನೆಲೆಗಳಲ್ಲಿ ಇವುಗಳನ್ನು ಇನ್ನೊಮ್ಮೆ ಪರಿಶೀಲಿಸಬೇಕು' ಎನ್ನುತ್ತಾರೆ.

ಇವನ್ನೆಲ್ಲಾ ಪರಿಶೀಲಿಸಿದ ವೀರಣ್ಣ ರಾಜೂರ ಅವರು ತಮ್ಮ ಅಭಿಪ್ರಾಯಗಳನ್ನು ಮಂಡಿಸುತ್ತಾರೆ. 'ಅವರವರ ಅಂಕಿತಗಳನ್ನು ಧರಿಸಿ, ಅವರ ಭಾವ-ಭಾಷೆ-ಆಶಯಗಳನ್ನು ಅಳವಡಿಸಿಕೊಂಡ ಈ ಸ್ವರವಚನಗಳ ಕರ್ತೃತ್ವವನ್ನು ಬೇರೆಯವರಿಗೆ ಆರೋಪಿಸದೇ, ಶರಣರಿಗೆ ಒಪ್ಪಿಸಿ, ವಚನಗಳಂತೆ ಸ್ವರವಚನಗಳೂ ೧೨ನೆಯ ಶತಮಾನದ ಶರಣರು ಕನ್ನಡ ಸಾಹಿತ್ಯಕ್ಕೆ ಕೊಟ್ಟ ನೂತನ ಕೊಡುಗೆ ಎಂದು ಹೇಳುವುದು ಹೆಚ್ಚು ಸೂಕ್ತವೆನಿಸುತ್ತದೆ' ಎಂದು ಈ ಮಾತಿಗೆ ಸಮರ್ಥನೆಯಾಗಿ ಕೆಲವು ಆಧಾರಗಳನ್ನು ನೀಡುತ್ತಾರೆ. ಚೆನ್ನವೀರಾರ್ಯನ (೧೬ನೇ ಶತಮಾನ) 'ಶಿವಯೋಗ ಪ್ರದೀಪಿಕೆ' ಮತ್ತು ಕಂಬಾಳ ಶಾಂತಮಲ್ಲೇಶನ (೧೬೦೦) 'ಗಣವಚನ ರತ್ನಾವಳಿ' ಕೇವಲ ಸ್ವರವಚನಗಳಿಂದ ಸಂಯೋಜಿಸಿದ ಎರಡು ಮಹತ್ವದ ಕೃತಿಗಳು. ಅವುಗಳಲ್ಲಿ ಬಸವಾದಿ ಶರಣರ ಸ್ವರವಚನಗಳು ಸಮಾವೇಶಗೊಂಡಿದ್ದು, ಅವುಗಳ ಕರ್ತೃಗಳು 'ಸಕಲಪುರಾತನರು' ಎಂದು ತಿಳಿಸಲಾಗಿದೆ. ಶಿವಯೋಗ ಪ್ರದೀಪಿಕೆಯ ಆದಿಯ, ಪೀಠಿಕಾ ಸ್ವರಬೊಲ್ಲಿ ಎಂಬ ಷಟ್ಪದಿಯಲ್ಲಿ ಹೀಗೆ ಹೇಳಲಾಗಿದೆ ಎನ್ನುತ್ತಾ

ಶ್ರೀ ಮದ್ದೇಶಿಕ ಚೆನ್ನವೀರಾರ್ಯಂ
ಆ ಮಹಾ ಸಕಲಪುರಾತನರ ಗೀತನ
ನೇಮಿಸಿಯು ಸೂಚನಾರ್ಥ ಪದಂಗಳವಜೆಂ ಸ್ಥಲವಿಟ್ಟು
ಈ ಮಹಿಯೊಳು ಪೊಸತೆನೆ ಸಂಗ್ರಹಿಸಿಯು
ಪ್ರೇಮದಿ ಶಿವಲಿಂಗದೇವಂಗೂಜೆದನು
ನಾಮವಿದರ ಶಿವಯೋಗಪ್ರದೀಪಿಕೆ ಶರಣರು ಅವಧರಿಸಿ||

ಈ ನುಡಿಯನ್ನು ಉಲ್ಲೇಖಿಸುತ್ತಾರೆ.

ಈ ಕೃತಿಯಲ್ಲಿ ೧೮ ಜನ ಶರಣರ ಒಟ್ಟು ೭೩ ಸ್ವರವಚನಗಳು ಸಂಗ್ರಹವಾಗಿವೆ. ಅವರಲ್ಲಿ ೧೧ ಜನ ೧೨ನೆಯ ಶತಮಾನದ ಶರಣರಾದರೆ, ಉಳಿದ ೭ ಜನ ೧೫ನೆಯ ಶತಮಾನಕ್ಕೆ ಸೇರಿದ ಕರಸ್ಥಲ ನಾಗಿದೇವಾದಿ ನೂರೊಂದು ವಿರಕ್ತರು ಎಂದು ಮತ್ತೆ 'ಗಣಗವನ ರತ್ನಾವಳಿಯ' ಆದಿಯ ೩, ೭, ೧೬ನೇ ನುಡಿಗಳನ್ನು ಮತ್ತು ಅಂತ್ಯದ ಕಂದ, ಷಟ್ಪದಿಗಳಲ್ಲಿ ಹೇಳಲಾಗಿರುವುದನ್ನು ದೀರ್ಘವಾಗಿ ಉಲ್ಲೇಖಿಸುತ್ತಾರೆ.

ಈ ಕೃತಿಯಲ್ಲಿ ಸುಮಾರು ೬೨ ಜನ ಶರಣರು ೨೧೬ ಸ್ವರವಚನಗಳು ಸಂಗ್ರಹವಾಗಿವೆ. ಸುಮಾರು ೧೫ ಜನ ಶರಣರು ೧೨ನೆಯ ಶತಮಾನದವರಾಗಿದ್ದಾರೆ'[೧೦] ಎನ್ನುತ್ತಾರೆ. ಈ ಎರಡೂ ಕೃತಿಗಳ ಮೇಲಿನ ಹೇಳಿಕೆಗಳಿಂದ ತಮ್ಮಲ್ಲಿ ಅಳವಡಿಸಿಕೊಂಡ ಸ್ವರವಚನಗಳು ಬಸವಾದಿ ಶರಣರಿಂದ ರಚಿತವಾದುವೆಂದು ಸ್ಪಷ್ಟಪಡಿಸುತ್ತವೆ. ಅಲ್ಲದೆ ಕೃತಿ ಕರ್ತೃಗಳೇ ಅವುಗಳನ್ನು ರಚಿಸಿದ್ದಾರೆಂದು ತಿಳಿಸುವುದಿಲ್ಲ ಎನ್ನುತ್ತಾರೆ. ಮತ್ತೆ ಮುಂದುವರೆದು 'ವಚನಗಳ ಜೊತೆಗೆ ಸ್ವರವಚನಗಳನ್ನೂ ಸಮ್ಮಿಶ್ರಗೊಳಿಸಿ ಸಂಯೋಜಿಸಲಾದ ಮಹಾಲಿಂಗದೇವನ 'ಏಕೋತ್ತರ ಶತಸ್ಥಲ', 'ಸೂಕ್ಷ್ಮಮಿಶ್ರಷಟ್‌ಸ್ಥಲ', ಶಿವಗಣಪ್ರಸಾದಿ ಮಹಾದೇವಯ್ಯಾದಿಯಾದ ನಾಲ್ಕು ಜನರ 'ಶೂನ್ಯಸಂಪಾದನೆ'ಗಳು, ಚಿಕ್ಕವೀರಣ್ಣೊಡೆಯನ 'ಪರಮಮೂಲ ಜ್ಞಾನಷಟ್‌ಸ್ಥಲ', ಮಹದ್ದೇವಯೋಗಿಯ 'ವೀರಶೈವ ಚಿಂತಾಮಣಿ', ಗುರುಶಂಕರ ಸ್ವಾಮಿಯ 'ಜ್ಞಾನಷಟ್‌ಸ್ಥಲಸಾರ' ಮೊದಲಾದ ಕೃತಿಗಳಲ್ಲಿ ಮತ್ತು ಜಕ್ಕಣಾರ್ಯನ ಪದ 'ಏಕೋತ್ತರ ಶತಸ್ಥಲ' ಕೃತಿಗೆ ಬರೆದ ಟೀಕೆಯಲ್ಲಿ ಸ್ವರವಚನಗಳನ್ನು ರಚಿಸಿದವರು ಬಸವಾದಿ ಶರಣರೆಂದು ಹೇಳಿದೆಯಲ್ಲದೆ, ಸಂಯೋಜಕರೇ ವಚನಗಳನ್ನು ಸ್ವರವಚನಗಳನ್ನಾಗಿ ಪರಿವರ್ತಿಸಿ ಸೇರಿಸಿಕೊಂಡಿದ್ದಾರೆ ಎಂದು ತಿಳಿಸಿಲ್ಲ'[೧೧] ಎಂದು ಸ್ವರವಚನಗಳು ೧೨ನೇ ಶತಮಾನದ ಶರಣರಿಂದ ರಚನೆಯಾದವೆಂದು ಹೇಳುವ ತಮ್ಮ ವಾದಕ್ಕೆ ಅವರು ಆಧಾರವಾಗಿ ವಚನಗಳನ್ನು ಬಳಸದೇ ನಂತರದ ೧೫ನೆಯ ಶತಮಾನದಲ್ಲಿ ಸೃಷ್ಟಿಯಾದ ಕೃತಿಗಳನ್ನು ಬಳಸುವುದು ಕಂಡುಬರುತ್ತದೆ.

ಮೇಲೆ ಉಲ್ಲೇಖಿಸಿದ ನಾಲ್ಕು ಜನ ವಿದ್ವಾಂಸರು ಬಸವಾದಿ ಶರಣರಿಂದಲೇ ಸ್ವರವಚನ ರೂಪತಾಳಿತೆಂದು ಹೇಳಿದರೆ, ಇದಕ್ಕೆ ಭಿನ್ನವಾಗಿ ಎಂ.ಚಿದಾನಂದಮೂರ್ತಿ, ವಿ.ಶಿವಾನಂದ, ಪಿ.ವಿ. ನಾರಾಯಣ, ಬಸವರಾಜ ಮಲಶೆಟ್ಟಿ ಅವರು 'ಏಕೋತ್ತರ ಶತಸ್ಥಲಕಾರರು' ವಚನಗಳನ್ನು ಸ್ವರವಚನಗಳನ್ನಾಗಿ ಪರಿವರ್ತಿಸಿದರು ಎಂದು ಹೇಳುವ ಮೂಲಕ ೧೨ನೆಯ ಶತಮಾನದ ಅದರ ಹುಟ್ಟನ್ನು ಅಲ್ಲಗಳೆದು ೧೫ನೆಯ ಶತಮಾನಕ್ಕೆ ಒಯ್ದು ನಿಲ್ಲಿಸುತ್ತಾರೆ.

ಚಿದಾನಂದಮೂರ್ತಿಯವರು ೧೯೬೬ರಲ್ಲಿ ಪ್ರಕಟಿಸಿದ ತಮ್ಮ 'ವಚನ ಸಾಹಿತ್ಯದ ಉಗಮ' ಎಂಬ ಲೇಖನದಲ್ಲಿ 'ಶೂನ್ಯಸಂಪಾದನೆ ಒಂದು ವಚನ ಸಂಗ್ರಹವಾಗಿರುವಂತೆ, ಹಾಡುಗಳ ಸಂಗ್ರಹವೂ ಹೌದು. ಶಿವಶರಣರು ಒಟ್ಟಿಗೆ ಕೂಡಿ ಸಂಭಾಷಣೆಯ ಮೂಲಕ ಧರ್ಮಪರ ವಸ್ತುಗಳ ಜಿಜ್ಞಾಸೆ ಮಾಡಿದ ವಚನಗಳನ್ನು ಬಳಸಿಕೊಂಡು ಅನೇಕ ಸನ್ನಿವೇಶಗಳನ್ನು ಕಲ್ಪಿಸಲಾಗಿದೆ... ಅಲ್ಲಿ ಅನೇಕ ವಚನಕಾರರು ವಚನಗಳಿಂದ ಅಲ್ಲಮನನ್ನು ಹೊಗಳಿರುವುದಲ್ಲದೆ 'ಪದ'ಗಳಿಂದಲೂ ಸ್ತುತಿಸಿದ್ದಾರೆ. ಈ ಪದಗಳಿಗೆ ರಾಗಗಳ ಹೆಸರುಗಳನ್ನು ಕೊಟ್ಟಿದ್ದಾರೆ. ಅಷ್ಟೇ ಅಲ್ಲ, ಆಯಾ ವಚನಕಾರ ಹಾಡಿದ ಪದಗಳಲ್ಲಿ ಅವನ ಅಂಕಿತವಿರುತ್ತದೆ. ವಚನಗಳಲ್ಲಿರುವಂತೆ ಈ ಪದಗಳು ವಚನಕಾರರೇ ಹಾಡಿದವೋ ಅಥವಾ ಮುಂದಿನವರು ಅವರ ಅಂಕಿತಗಳಲ್ಲಿ ಕಟ್ಟಿದ ಹಾಡುಗಳೋ'[೧೨]ಎಂದು ಸಂದೇಹಪಡುತ್ತಾ ಮುಂದೆ ೧೯೭೫ರಲ್ಲಿ ತಮ್ಮ 'ವಚನ ಸಾಹಿತ್ಯ' ಎಂಬ ಕೃತಿಯಲ್ಲಿ ವಚನಗಳೇ ಹಾಡಾಗಿ ಪರಿವರ್ತನೆ ಹೊಂದಿದವು ಎಂಬ ತೀರ್ಮಾನಕ್ಕೆ ಬರುತ್ತಾರೆ. ಅದಕ್ಕೆ ಚೆನ್ನಬಸವಣ್ಣ ಮತ್ತು ಸಿದ್ಧರಾಮರ ಪರಸ್ಪರ ಸಾಮ್ಯವಿರುವ ಒಂದೊಂದು ವಚನ ಮತ್ತು ಸ್ವರ ವಚನಗಳನ್ನು ಉದಾಹರಿಸುತ್ತಾರೆ. 'ಮೂಲತಃ ವಚನಗಳಾಗಿದ್ದುವನ್ನು ಈಚಿನವರು ಹಾಡಿಗೆ ತಿರುಗಿಸಿರುವುದು ಸ್ಪಷ್ಟ. ಇಂತಹ ಇನ್ನೂ ಹತ್ತಾರು ಉದಾಹರಣೆಗಳಿವೆ. ಎಂದರೆ ಹಾಡುಗಳು ಒಂದು ದೃಷ್ಟಿಯಿಂದ ಶಿವಶರಣರವೇ ಇನ್ನೊಂದು ದೃಷ್ಟಿಯಿಂದ ಅವರವಲ್ಲ''[೧೩]ಎಂಬ ಅಸ್ಪಷ್ಟ ನಿಲುವನ್ನು ತಾಳುತ್ತಾರೆ. ಈ ಕುರಿತ ಅಧ್ಯಯನದ ಅಗತ್ಯವನ್ನು ಸೂಚಿಸುತ್ತಾರೆ.

ವಿ.ಶಿವಾನಂದ ಅವರು ಎಲ್.ಬಸವರಾಜು ಅವರ ಅಭಿಪ್ರಾಯವನ್ನು ಅಲ್ಲಗಳೆಯುತ್ತಾರೆ. 'ನೀರು ಗಟ್ಟಿಗೊಂಡು ಮುತ್ತಾದಂತೆ, ಮೂಲವಚನಗಳ ಭಾವ ಭಾಷೆಗಳನ್ನೇ ಸುಂದರವಾದ ಸಂಗೀತದಲ್ಲಿ ಎರಕ ಹೊಯ್ದು ಸಂಕಲನಕಾರರು ವಚನಗಳನ್ನು ಸ್ವರವಚನಗಳನ್ನಾಗಿಸಿದರು'[೧೪]ಎಂದು ತಮ್ಮ ನಿಲುವಿಗೆ ಆಧಾರವಾಗಿ ಈ ಕೆಳಗಿನ ಕೆಲವು ಆಕ್ಷೇಪಗಳನ್ನು ಎತ್ತಿದ್ದಾರೆ.

೧. ಶಿವಯೋಗಪ್ರದೀಪಿಕೆಯ ಆರಂಭದ ಪದ್ಯ ೧೨ನೆಯ ಶತಮಾನದ ಶಿವಶರಣರ ಹಾಡಿನಿಂದ ಆರಂಭಗೊಳ್ಳುತ್ತದೆ. ೧೫ನೆಯ ಶತಮಾನದ... ಸಪ್ತಕಾವ್ಯದ ಗುರುಬಸವ ಲಿಖಿತ... ಪದದಿಂದ ಮೊದಲಾಗಿರುವುದು.

೨. ಮೂಲತಃ ಆಯಾ ವಚನಕಾರರೇ ಬರೆದ ಹಾಡುಗಳ ಸ್ವತಂತ್ರ ಕಟ್ಟುಗಳು ನಮಗೆ ಉಪಲಬ್ಧವಾಗಿಲ್ಲ.

೩. ಒಂದು ವೇಳೆ ಇವು ಶರಣರೇ ಬರೆದ ಹಾಡುಗಳೇ ಆಗಿದ್ದರೆ ಈ ಹಾಡುಗಳ ಹಿನ್ನೆಲೆಯಲ್ಲಿ ವಚನಗಳ ಭಾವ-ಭಾಷೆಗಳ ಅನುಕರಣವೇಕೆ ಹೆಚ್ಚಿದೆ?

೪. ೧೨ನೆಯ ಶತಮಾನದ ಶರಣರು ೧೦೧ ಸ್ಥಲದ ಹಾಡುಗಳನ್ನು ಬರೆದಿದ್ದರೆ ಅದೇ ಕಾಲಕ್ಕೆ ೧೦೧ ಸ್ಥಲಕಟ್ಟಿನ ವಚನಗ್ರಂಥಗಳು ನಮಗೇಕೆ ದೊರಕುತ್ತಿಲ್ಲ?[೧೫]ಎಂದು ಪ್ರಶ್ನಿಸಿದ್ದಾರೆ.

ಪಿ.ವಿ.ನಾರಾಯಣ ಅವರು 'ಬಸವಾದಿಗಳು ಭಾವಾನುಸಾರಿಯಾದ ರಚನೆಗೆ ಒಲಿದವರೇ ವಿನಾಃ ಲಯಾನುಸಾರಿಯಾದದ್ದಕ್ಕಲ್ಲ. ಪ್ರಾಯಶಃ ಈ ತಾಳನಿಬದ್ಧತೆಯೇ ವಚನ-ಸ್ವರವಚನಗಳ ನಡುವಿರುವ ವ್ಯತ್ಯಾಸ. ವಚನವು ತಾಳವನ್ನು ಮೀರದ ನಾದಮಯತೆಯತ್ತ ಒಲಿದರೆ, ಸ್ವರವಚನವು ತಾಳಬದ್ಧವಾದ ರಚನೆಯಾಯಿತು. ಸ್ವರವಚನ ಎಂಬ ಮಾತೇ ಅವು ವಚನಗಳ ಪರಿಷ್ಕೃತ ರೂಪ ಎಂಬುದನ್ನೂ ಧ್ವನಿಸುತ್ತದೆ. ಬಸವಾದಿಗಳು ತಾಳ ನಿಯತಿಯನ್ನು ಅನುಸರಿಸದ ವಚನಗಳನ್ನು ಮಾತ್ರ ರಚಿಸಿದರು. ಅವರಿಂದ ಸ್ವರವಚನಗಳು ಅಥವಾ ಹಾಡುಗಳು ರಚಿತವಾಗಲಿಲ್ಲ'[೧೬]ಎಂದು ಮುಂದೆ ಕೆಲವು ಸಂದೇಹಗಳನ್ನು ವ್ಯಕ್ತಪಡಿಸಿದ್ದಾರೆ.

೧. ಒಗ್ಗೂಡಿದ ವಚನಗಳ ಭಾವನೆಯ ಜಾಡು ಹಿಡಿದು ಒಂದು ಭಾವವನ್ನು ನುಡಿಗಳಲ್ಲಿ ವಿಸ್ತರಿಸಿ, ಹಾಡಾಗಿ ರಚಿಸಿರಬಹುದು.

೨. ವಚನಗಳನ್ನೇ ಮೂಲವಾಗಿರಿಸಿಕೊಂಡು ಯಾರೋ ಹಾಡನ್ನು ರಚಿಸಿರಬಹುದೇ?

೩. ವಚನಗಳ ಭಾವವನ್ನು ಹಾಡಿಗೆ ಮೂಲವಾಗಿ ಮಾಡಿಕೊಂಡಿರಬಹುದು ಮತ್ತೂ ಕೆಲವೆಡೆ ಆಯಾ ಸ್ಥಲದ ನಿಲುವಿಗೆ ಅನುಗುಣವಾದ ಬೇರೆಯೇ ಆದ ಹಾಡಿನ ರಚನೆಯೂ ಆಗಿರಬಹುದು[೧೭] ಎನ್ನುತ್ತಾರೆ.

ಈ ಸಂದೇಹಗಳನ್ನು ಈಶ್ವರಯ್ಯಮಠ ಅವರು ನಿರಾಕರಿಸಿ ಚರ್ಚಿಸುತ್ತಾರೆ. 'ಇವು ಗಟ್ಟಿಯಾದ ಆಧಾರವಿಲ್ಲದ ಅನಿಸಿಕೆ. ವಚನಗಳನ್ನು ಹಾಡಾಗಿ ತಿರುಗಿಸಿದವರು ಯಾರು? ಅದಕ್ಕೆ ಗಟ್ಟಿಯಾದ ಆಧಾರಗಳೇನು? ಎಷ್ಟು ವಚನಗಳನ್ನು ಹೀಗೆ ಹಾಡಾಗಿ ಪರಿವರ್ತಿಸಲಾಯಿತು? ಒಂದು ವೇಳೆ ಸಂಕಲನಕಾರರೇ ವಚನಗಳನ್ನು ಹಾಡಾಗಿ ಪರಿವರ್ತಿಸಿದ್ದರೆ, ಅದನ್ನು ಹೇಳಿಕೊಳ್ಳದಂತಹ ಒತ್ತಡಗಳು ಅವರಿಗೇನಿದ್ದವು? ಈ ಸಂಕಲನಕಾರರು ತಮ್ಮಲ್ಲಿ ತಮಗೇ ವಿಶ್ವಾಸವಿಲ್ಲದಷ್ಟು ಪೊಳ್ಳು ವ್ಯಕ್ತಿತ್ವದವರಾಗಿದ್ದರೆ[೧೮] ಎಂದು ಪ್ರಶ್ನಿಸುತ್ತಾರೆ.

ಇದಕ್ಕೆ ಉತ್ತರವಾಗಿ ಬಸವರಾಜ ಮಲಶೆಟ್ಟಿ ಅವರು '೧೫ನೆಯ ಶತಮಾನದ ಈ ನೂರೊಂದು ಸ್ಥಲಗಳಿಗೆ ೧೨ನೆಯ ಶತಮಾನದ ಶರಣರು ಮುಂಚಿತವಾಗಿಯೇ ಹಾಡು ಬರೆದಿಟ್ಟಿದ್ದರೆಂಬುದನ್ನು

ನಂಬಲಿಕ್ಕಾದಿತೇ? ಆದ್ದರಿಂದ ಇವು ಶರಣರ ರಚನೆಗಳಾಗಿರದೇ ಮಹಲಿಂಗದೇವನ ರಚನೆಗಳೋ ಅಥವಾ ಇತರರ ರಚನೆಗಳೋ ಆಗಿರಬೇಕು'[೧೯] ಎಂದು ಸಮರ್ಥನೆಯಾಗಿ ಈ ಕೆಳಗಿನ ಪುರಾವೆಗಳನ್ನು ಒದಗಿಸಿದ್ದಾರೆ. 'ಸ್ವರವಚನಗಳೆಂದು ವಿದ್ವಾಂಸರು ಗುರುತಿಸುವ ಹಾಡುಗಳು ಶರಣರ ರಚನೆಗಳಲ್ಲ. ಅವರ ಅಂಕಿತಗಳನ್ನು ಬಳಸಿಕೊಂಡು ನಂತರದವರು ಇವುಗಳನ್ನು ಕಟ್ಟಿದ್ದಾರೆ. ಈ ಹಾಡುಗಳ ಭಾಷೆ ಖಂಡಿತವಾಗಿಯೂ ವಚನಗಳ ಭಾಷೆಯಲ್ಲ. ಗ್ರಾಂಥಿಕ ಪರಿಧಿಗೆ ಜೋತುಬಿದ್ದು ಛಂದೋ ಬಂಧಗಳ ನಿಬಂಧನೆಗಳಲ್ಲಿ ಹೊರಳಾಡುವ ಕೃತಕ ಶೈಲಿಯ ಇಂಥ ಹಾಡುಗಳನ್ನು ಶರಣರು ರಚಿಸಿದ್ದಾರೆಂದು ನಂಬುವುದಾದರೆ ಅವರ ಸೃಜನಗುಣ, ಲವಲವಿಕೆ, ಭಾಷಾ ಪ್ರಯೋಗಗಳನ್ನು ಅಲ್ಲಗಳೆದಂತಾಗುತ್ತದೆ'[೨೦] ಎನ್ನುತ್ತಾ ಈ ಕುರಿತು ಚಿದಾನಂದಮೂರ್ತಿಯವರು ವ್ಯಕ್ತಪಡಿಸಿರುವ ಈ ಹಿಂದೆ ಉಲ್ಲೇಖಿಸಿದ ಈ ಪದಗಳು ವಚನಕಾರರೇ ಹಾಡಿದವೋ ಅಥವಾ ಮುಂದಿನವರು ಅವರ ಅಂಕಿತಗಳಲ್ಲಿ ಕಟ್ಟಿದ ಹಾಡುಗಳೋ ಈ ವಿಷಯದಲ್ಲಿ ಸಂಶೋಧನೆ ನಡೆಯಬೇಕಿದೆ ಎನ್ನುವ ಅಧ್ಯಯನದ ಅಗತ್ಯವನ್ನು ಒಪ್ಪಿಕೊಳ್ಳುತ್ತಾರೆ. 'ಶರಣ ಸಾಹಿತ್ಯದಲ್ಲಿ ವಚನಪದವು ಬಹಳಷ್ಟು ಕಡೆ ಉಲ್ಲೇಖಗೊಂಡಿದೆ. ಆದರೆ ಹಾಡಿನ ಪ್ರಸ್ತಾಪ ಎಲ್ಲಿಯೂ ಇಲ್ಲ. ಶರಣರು ನಿಜವಾಗಿಯೂ ಹಾಡುಗಳನ್ನು ಬರೆದದ್ದೇ ಆಗಿದ್ದರೆ ಯಾವುದಾದರೊಂದು ಸಂದರ್ಭದಲ್ಲಿ ಅದರ ಉಲ್ಲೇಖ ಮಾಡದೇ ಬಿಡುತ್ತಿರಲಿಲ್ಲ ಎಂದು ಒಂದು ವಚನವನ್ನು ಉಲ್ಲೇಖಿಸುತ್ತಾರೆ.

"ತಾಳಮಾನ ಸರಿಸವನರಿಯೆ
ಓಜೆ ಬಜಾವಣೆಯ ಲೆಕ್ಕವನರಿಯೆ
ಅಮೃತಗಣ ದೇವಗಣವನರಿಯೆ
ಕೂಡಲಸಂಗಮ ದೇವಾ ನಿನಗೆ ಕೇಡಿಲ್ಲವಾಗಿ
ಆನು ಒಲಿದಂತೆ ಹಾಡುವೆ"

ಇಲ್ಲಿ ಬಸವಣ್ಣನ ಏನೇನು ಅರಿಯನೆಂದು ಹೇಳುವನೋ ಅವೆಲ್ಲ ಹಾಡಿಗೆ ಬೇಕು, ಒಲಿದಂತೆ ಹಾಡುವುದು ಬಸವಣ್ಣನ ಧೋರಣೆ. ಇಲ್ಲಿ ಹಾಡಿನ ಶಾಸ್ತ್ರೀಯ ಅಂಶಗಳು ಮುಖ್ಯವಲ್ಲ. 'ಅರಿಯೆ' ಎಂಬಲ್ಲಿ ವಿನಯವಿದೆ. ಖಚಿತ ಲೆಕ್ಕಾಚಾರದ ತಾಳ-ಛಂದಸ್ಸುಗಳ ಬಗ್ಗೆ ತಿರಸ್ಕಾರವಿದೆ. ಶರಣರು ಕಷ್ಟಪಟ್ಟು ಹಾಡುಗಳನ್ನು ಕಟ್ಟಲು ಹೋಗಲಿಲ್ಲ. ಭಾವ ಸಂವಹನಕ್ಕೆ ಮುಕ್ತ ಸ್ವರೂಪದ ವಚನಗಳನ್ನು ಅವಲಂಬಿಸಿದರು'[೨೧] ಎಂದು ಚರ್ಚಿಸುತ್ತಾರೆ.

ಆದರೆ ಮಲಶೆಟ್ಟಿಯವರ ಮೇಲಿನ ಈ ವಿಶ್ಲೇಷಣೆಯ ಹಿನ್ನೆಲೆಯಲ್ಲಿ ನೋಡುವುದಾದರೆ ಬಸವಾದಿ ಶರಣರ ಕಾಲಕ್ಕೆ ಹಾಡುವುದು ಇತ್ತು ಎನ್ನುವುದು ಮೇಲಿನ ಉಲ್ಲೇಖದ ವಚನದಲ್ಲಿಯೇ ಕಾಣುತ್ತದೆ. ತಾಳ, ಓಜೆ, ಬಜಾವಣೆ ಇವೆಲ್ಲ ತಮ್ಮ ಕಾಲಕ್ಕಾಗಲೇ ಬಳಕೆಗೊಂಡಿದ್ದವಾದ್ದರಿಂದ

ಇವುಗಳನ್ನು ಹಾಡುಗಳಲ್ಲಿ ಬಳಸಿರುವ ಸಾಧ್ಯತೆ ಇದೆ. ಹಾಡುವುದು ರೂಢಿಯಲ್ಲಿತ್ತಾದ್ದರಿಂದಲೇ ಈ ಕಲ್ಪನೆ ಬಂದಿರಲು ಸಾಧ್ಯ. ಹೀಗಾಗಿ ಹಾಡುವುದು ಬಸವಾದಿಗಳ ಕಾಲಕ್ಕಾಗಲೇ ಇದ್ದಂತೆ ಕಾಣುತ್ತದೆ. ಅವರಿಗೆ ತಾಳ, ಓಜೆ, ಬಜಾವಣೆ ಇವುಗಳ ಅರಿವು, ಬಳಸಿ ಹಾಡಿದ್ದು ಕುರಿತಂತೆ ಯೋಚಿಸಬೇಕಾಗಿದೆ.

ಒಟ್ಟಾರೆ ಈ ಎರಡೂ ವಿಧದ ಚರ್ಚೆಗಳಿಂದ ನಾವು ಕೆಲವು ಅಂಶಗಳನ್ನು ಹೀಗೆ ಕ್ರೋಢೀಕರಿಸಬಹುದು. ಮೊದಲಿನ ಎಲ್.ಬಸವರಾಜು, ವೀರಣ್ಣ ರಾಜೂರ, ಎಂ.ಎಂ.ಕಲಬುರ್ಗಿ, ಈಶ್ವರಯ್ಯಮಠ ಮುಂತಾದವರ ಚರ್ಚೆಗಳು ಹಾಡುಗಳಿಗೆ(ಸಂಗೀತಕ್ಕೆ) ಪ್ರಾಮುಖ್ಯತೆ ಕೊಟ್ಟು ಚರ್ಚಿಸಿವೆ. ವಚನಕಾರರೇ ಬರೆದರು ಎನ್ನುವ ಮೂಲಕ ವೀರಶೈವ ಪರಂಪರೆಗೆ ಸೇರಿಸುವ ತಹತಹವಿದೆ. ಎರಡನೆಯ ವಿರುದ್ಧವಾದ ಚಿಂತನೆಗಳಲ್ಲಿ ಚಿದಾನಂದಮೂರ್ತಿ, ವಿ.ಶಿವಾನಂದ, ಪಿ.ವಿ.ನಾರಾಯಣ, ಬಸವರಾಜ ಮಲಶೆಟ್ಟಿ ಇವರು ಸ್ವರವಚನಗಳು ಬಸವಾದಿ ಶರಣರ ಹಾಡುಗಳಲ್ಲ ವಚನಗಳನ್ನೇ ಮುಂದಿನವರು ಹಾಡಿಸಿದ್ದಾರೆ. ಅಂದರೆ 'ವಚನಪದ'ಗಳನ್ನು ಸ್ವರವಚನಗಳಾಗಿ ಸಂಕಲನ ಮಾಡಲಾಗಿದೆ. ಹೀಗಾಗಿ ಸ್ವರವಚನಗಳು ಶರಣರ ರಚನೆಗಳಲ್ಲ ಎಂದು ಪ್ರತ್ಯೇಕಿಸಿ ಚರ್ಚಿಸುತ್ತವೆ.

ಈ ಮೊದಲ ಚರ್ಚೆಯಲ್ಲಿ ಸ್ವರವಚನಗಳು ಬಸವಾದಿ ಶರಣರ ರಚನೆಗಳೇ ಎನ್ನುವುದರ ಹಿಂದೆ ಧಾರ್ಮಿಕ ದೃಷ್ಟಿಕೋನವಿದ್ದಂತೆ ತೋರುತ್ತದೆ. ವಚನಗಳು ವೀರಶೈವ ಧಾರ್ಮಿಕ ತಾತ್ವಿಕತೆಯನ್ನು ಮೀರಿ ನಿಂತವು. ವಚನಗಳಲ್ಲಿ ಈ ಸ್ವರವಚನಗಳನ್ನು ಸೇರಿಸುವ ಮೂಲಕ ಅವುಗಳನ್ನು ವಚನಗಳಂತೆ ವ್ಯಾಪಕಗೊಳಿಸುವ ಪ್ರಕ್ರಿಯೆ ಇದೆ. ಈ ಎಲ್ಲದರ ಹಿಂದೆ ಧಾರ್ಮಿಕ, ರಾಜಕೀಯ, ಸಾಂಸ್ಕೃತಿಕ ಒತ್ತಡಗಳು ಇವೆ. ಈ ಪರಿಭಾಷೆಯನ್ನು ಶರಣರು ಬಳಸಿರುವುದು ಕಂಡುಬರುವುದಿಲ್ಲ. ಅವು ಮಲಶೆಟ್ಟಿಯವರು ಉಲ್ಲೇಖಿಸಿದಂತೆ ಮುಕ್ತರೂಪದ 'ವಚನಪದ'ಗಳಾಗಿರುವ ಸಾಧ್ಯತೆ ಇದೆ. ಈ ಹಾಡುವ ಗೀತಸಾಹಿತ್ಯ ಪ್ರಾಚೀನದಿಂದಲೂ ಬೇರೆ ಬೇರೆ ರೂಪದಲ್ಲಿ ಅದು ಬಳಕೆಗೆ ಬಂದಿರಬಹುದು. ಆದರೆ ನಾದ ಲಯಯುಕ್ತ ಗದ್ಯವಾದ 'ವಚನಪದ'ವೇ ಶರಣರಿಗೆ ಮುಖ್ಯವಾಗಿತ್ತು ಅನಿಸುತ್ತದೆ.

ಈ ಸ್ವರವಚನ ಪರಿಭಾಷೆ ಸೃಷ್ಟಿಯಾಗಿದ್ದು ಮಾತ್ರ ೧೫ನೆಯ ಶತಮಾನದಲ್ಲಿ. ವೀರಶೈವೀಕರಣ ಮಾಡುವ ಹಿನ್ನೆಲೆಯಲ್ಲಿ 'ವಚನಪದ'ಗಳನ್ನು ಸ್ವರವಚನಗಳೆಂದು ಸಂಕಲನಕಾರರು ಸೃಷ್ಟಿಸಿದಂತೆ ಕಂಡುಬರುತ್ತದೆ.

## ಸ್ವರವಚನ ಮತ್ತು ತತ್ವಪದ ಒಂದೇ ಆಗಿ ಭಾವಿಸಿದ ಚರ್ಚೆಗಳು

೧೫ನೆಯ ಶತಮಾನದಲ್ಲಿ ವೀರಶೈವ ಪರಿಭಾಷೆಯಾಗಿ ಕಾಣಿಸಿಕೊಂಡ 'ಸ್ವರವಚನ' ಎಂಬ ಪ್ರಕಾರಕ್ಕೆ ಶರಣರ(ವಚನಗಳನ್ನು) ಹಾಡುಗಳನ್ನು ಸೇರಿಸಿದರು ಎನ್ನಲಾಗುತ್ತಿದೆ. ಅಲ್ಲದೆ ವೀರಶೈವ ಶಾಸ್ತ್ರ

ಪರಂಪರೆಯ ಆಚೆಗಿರುವ ತತ್ವಪದಕಾರರ ಹಾಡುಗಳನ್ನು ಸ್ವರವಚನಗಳಲ್ಲಿ ಸೇರಿಸಿ ಸಂಗ್ರಹ, ಸಂಪಾದನೆ ಮಾಡಲಾಗಿದೆ. ಈ ಹಿನ್ನೆಲೆಯಲ್ಲಿ ಸ್ವರವಚನ ಮತ್ತು ತತ್ವಪದಗಳ ಕುರಿತ ಚರ್ಚೆಯನ್ನು ನೋಡಬಹುದು.

ಆಧುನಿಕ ಸಂದರ್ಭದಲ್ಲಿ ಶರಣರ ರಚನೆಗಳನ್ನು ಮೊದಲು(೧೯೬೩) ಸ್ವರವಚನಗಳೆಂದು ಸಂಪಾದಿಸಿ ಅವುಗಳನ್ನು 'ಶಿವದಾಸ ಗೀತಾಂಜಲಿ' ಹೆಸರಿನಲ್ಲಿ ಪ್ರಕಟಿಸಿದರು. ನಂತರದಲ್ಲಿ ೧೯೮೨ರಿಂದ ಅನೇಕ ಸ್ವರವಚನ ಸಂಕಲನಗಳು ವೀರಶೈವ ಮಠಗಳಿಂದ ಹೊರಬಂದವು. ಆದರೆ ೧೯೧೫ರಿಂದಲೇ ತತ್ವಪದಗಳು ಸಂಕಲನಗೊಂಡಿವೆ. ಹಾಗೆಯೇ ಭಜನೆ ಪದಗಳು(೧೯೭೮), ಕೈವಲ್ಯಪದಗಳು, ಅನುಭಾವಪದಗಳು ಎಂದೆಲ್ಲ ಸಂಕಲನಗಳು ವಿವಿಧ ಪ್ರಕಾಶಕರಿಂದ ಹೊರಬಂದಿವೆ.

ಸಂಕಲನಕ್ಕೆ ಲಭ್ಯವಿರುವ ಈ ಆಕರಗಳನ್ನು ಅಧ್ಯಯನಕಾರರು ಬಳಸಿಕೊಂಡಿದ್ದಾರೆ. ಇವುಗಳಿಗೆ ಅಧ್ಯಯನಕಾರರು ವಿವಿಧ ಮನೋಧರ್ಮದಿಂದ ವ್ಯಾಖ್ಯಾನವನ್ನು ಮಾಡುವ ಪ್ರಯತ್ನವನ್ನು ಮಾಡಿದ್ದಾರೆ. ಕಳೆದ ನಲವತ್ತು ವರ್ಷದಿಂದ ಈ ಅಧ್ಯಯನಗಳು ಚಾರಿತ್ರಿಕ ಪುನಾರಚನೆಯನ್ನು ಗುರಿಯಾಗಿಸಿಕೊಂಡು ಸಾಗಿರುವ ನಿದರ್ಶನಗಳು ಇವೆ. ಈ ಅಧ್ಯಯನಗಳಲ್ಲಿ ಉಗಮ, ಸ್ವರೂಪ, ಲಕ್ಷಣ, ಅರ್ಥ, ಆಶಯಗಳನ್ನು ವಿವೇಚಿಸುವ ಜೊತೆಗೆ ಚಾರಿತ್ರಿಕ ಬದಲಾವಣೆ ಅಥವಾ ಬೆಳವಣಿಗೆ ಆಗಿರುವುದನ್ನು ವಿವರಿಸುತ್ತವೆ.

/ವೀರಶೈವ ಧರ್ಮದ ತತ್ವ ಸಿದ್ಧಾಂತಗಳಿಗೆ ಮೀಸಲಿರಿಸಿ ಇವು ಸಮಾಜದ ವಿವಿಧ ಸ್ತರಗಳಿಂದ ಬಂದ ಜನರ ಅನುಭವ ಪದಗಳಾಗಿವೆ. ವಚನಗಳಂತೆ ಸ್ವರವಚನಗಳನ್ನು ಎಲ್ಲ ಕಾಯಕದವರೂ ರಚಿಸಿದರು ಎನ್ನುತ್ತವೆ. ಸ್ವರವಚನಗಳು ರಾಗತಾಳಗಳಿಗಂಟಿಕೊಂಡು ಹಾಡಲು ಬರುವಂತಿವೆ. ಆರಾಧ್ಯದೈವದ ಪ್ರಾರ್ಥನೆ, ಸ್ತುತಿ, ಹಾರೈಕೆ ಮಹಿಮಾತಿಶಯ ಮತ್ತು ತತ್ವ ಪ್ರತಿಪಾದನೆಯನ್ನು ಈ ಸ್ವರವಚನಗಳು ಒಳಗೊಂಡಿವೆ. ಆ ಕಾಲದ ಸಾಂಸ್ಕೃತಿಕ, ಧಾರ್ಮಿಕ ಬದುಕಿನ ಚಿತ್ರಣ, ಲೋಕ ನೀತಿ, ಅಧ್ಯಾತ್ಮವನ್ನು ಹೊಂದಿವೆ ಎಂದು ಗುರುತಿಸುತ್ತವೆ/ ಛಂದಸ್ಸಿನ ದೃಷ್ಟಿಯಿಂದ ಇವು ದೇಸಿ ರಚನೆಗಳಾಗಿವೆ ಎನ್ನುತ್ತವೆ.

ಈ ಸ್ವರಚವನಗಳನ್ನು ಅಧ್ಯಯನ ಅನುಕೂಲಕ್ಕಾಗಿ ಚಾರಿತ್ರಿಕವಾಗಿ ನಾನಾರೀತಿಯಾಗಿ ವಿಭಜಿಸಿಕೊಂಡಿದ್ದಾರೆ. ಎಲ್. ಬಸವರಾಜು ಅವರು ಬಸವ ಪೂರ್ವದ ಹಾಡುಗಳು, ಬಸವ ಸಮಕಾಲೀನ ಹಾಡುಗಳು, ವಾಗ್ಗೇಯಕಾರರ ಹಾಡುಗಳು, ಎಂದು ಮೂರು ರೀತಿಯಲ್ಲಿ ವಿಭಜಿಸಿರುವರು. ಎಸ್ .ವಿದ್ಯಾಶಂಕರ ಅವರು ಬಸವಾದಿ ಶಿವಶರಣರ ಕಾಲ, ವೀರಶೈವ ಪುನರುಜ್ಜೀವನ ಕಾಲ, ಜಿಗುಣೆ ಮರುಳಾರಾಧ್ಯ ಮೊದಲಾದವರ ಕಾಲ ಚಿದಾನಂದ ಅವಧೂತ ಮೊದಲಾದವರ ಕಾಲ ಹೀಗೆ ನಾಲ್ಕು ಘಟಕಗಳಾಗಿ ವಿಭಜಿಸಿರುವರು. ಮಲ್ಲಿಕಾರ್ಜುನ ಲಠ್ಠೆ ಅವರು ಜನಪದ ಸ್ವರವಚನಗಳು, ಶಿಷ್ಟಸ್ವರ ವಚನಗಳು ಎಂದು ಎರಡು ರೀತಿಯಾಗಿ ನೋಡುತ್ತಾರೆ. ಜನಪದ ಸ್ವರವಚನಗಳಲ್ಲಿ ಇಂದಿನ ಭಜನೆ,

ಅನುಭಾವ, ತತ್ವಪದಗಳನ್ನು ಸೇರಿಸುತ್ತಾರೆ. ಶಿವಶರಣರ ಪೂರ್ವದಲ್ಲಿಯೂ ಇವು ಇದ್ದವು. ಅವುಗಳನ್ನು ಸಂಗ್ರಹಿಸದೇ ಹೋದದ್ದರಿಂದ ಅವುಗಳ ಸ್ವರೂಪ ತಿಳಿಯುವುದಿಲ್ಲ. ಇವು ಜನರ ನಾಲಿಗೆ ಮೇಲೆ ಮೌಖಿಕವಾಗಿ ಉಳಿದು ಬಂದವು ಎನ್ನುತ್ತಾರೆ. ಶಿಷ್ಟ ಸ್ವರವಚನಗಳು ಲೌಕಿಕ ಮತ್ತು ಪಾರಮಾರ್ಥಿಕ ಚೌಕಟ್ಟಿನಲ್ಲಿ ಪ್ರಕಟವಾಗಿವೆ. ಇವುಗಳನ್ನು ಹಾಡುವುದರಿಂದಾಗಿ ಸ್ವರವಚನಗಳೆಂದೂ, ಕೀರ್ತನೆಗಳೆಂದೂ, ತತ್ವಪದ, ಅನುಭಾವಪದಗಳೆಂದು ಕರೆಯುತ್ತ ಬಂದರೆಂದು ಚರ್ಚಿಸುತ್ತಾರೆ. ಇವು ಶರಣರ ಸಂಸ್ಕೃತಿಯ ನೆರಳಿನಲ್ಲಿ ಬೆಳೆದವೆಂದು ವಿಶ್ಲೇಷಿಸುತ್ತಾರೆ. ಈ ಶಿಷ್ಟ ಸ್ವರವಚನಗಳನ್ನು ಬಸವಪೂರ್ವಯುಗದ ಸ್ವರವಚನಗಳು ಬಸವಾದಿ ಶಿವಶಿರಣರ ಸ್ವರವಚನಗಳು, ನಿಜಗುಣಾದಿ ಶಿವಯೋಗಿಗಳ ಸ್ವರವಚನಗಳು ಮತ್ತು ಆಧುನಿಕ ಸ್ವರವಚನಗಳು ಎಂದು ನಾಲ್ಕು ವಿಭಾಗ ಮಾಡಿದ್ದಾರೆ. ಆದರೆ ಬಸವಾದಿ ಪೂರ್ವ ಯುಗದ ರಚನೆಗಳು ದೊರಕುವುದಿಲ್ಲ ಎನ್ನುತ್ತಾರೆ. ಆಧುನಿಕ ಸ್ವರವಚನಗಳು ಇನ್ನೂ ಸಂಗ್ರಹಿಸಬೇಕಾಗಿದೆ ಎನ್ನುತ್ತಾ ಬಸವಾದಿ ಶರಣರಿಂದ ಸರ್ಪಭೂಷಣರವರೆಗಿನ ಸ್ವರವಚಗಳನ್ನು ವಿವೇಚಿಸುತ್ತಾರೆ.[೨೨]

ಎಂ.ಎಂ.ಕಲಬುರ್ಗಿ ಅವರು ವೀರಶೈವದ ಮರುಸುಗ್ಗಿಯಾದ ೧೫ನೆಯ ಶತಮಾನದಿಂದ ಮುಂದೆ ಸ್ವರವಚನ ಪ್ರಕಾರ ಮೊದಲಿಗಿಂತ ಅಧಿಕ ಸಂಖ್ಯೆಯಲ್ಲಿ ಸೃಷ್ಟಿಯಾಗಿದೆ ಎಂದು ಕರಸ್ಥಲದ ನಾಗಿದೇವ ನಿಜಗುಣ ಸರ್ಪಭೂಷಣ, ಬಾಲಲೀಲಾರವರೆಗಿನ ಅವಧಿ ಸ್ವರವಚನ ಸಾಹಿತ್ಯ ಸುವರ್ಣಯುಗ ಎಂದು ಮುಂದೆ ಕಡಕೋಳ ಕೂಡಲೂರು, ಹಾಗಲ್ವಾಡಿ ಮೊದಲಾದವರು, ಅನಂತರ ಅಲ್ಲಲ್ಲಿ ಹುಟ್ಟಿ ಬೆಳೆದ ಇಂಥ ನೂರಾರು ಜನಶರಣರು ಸಾವಿರಾರು ಸ್ವರವಚನಗಳನ್ನು ಬರೆದರು ಎಂದು ಮೂರು ಘಟ್ಟಗಳಾಗಿ ನೋಡುತ್ತಾರೆ. ಈ ಸ್ವರವಚನಗಳು ಶಿಷ್ಟ ಪದವೂ ಅಲ್ಲದ, ಇನ್ನೊಂದು ಕಡೆ ಜನಪದವೂ ಅಲ್ಲದ ಸ್ವರೂಪವನ್ನು ಹೊಂದಿವೆ ಎಂದು ಚರ್ಚಿಸುತ್ತಾರೆ(ಪರಿಕಲ್ಪನೆ, ಪು.೧೦೩-೧೦೪).

ವೀರಣ್ಣ ರಾಜೂರ ಅವರು ಬಸವಯುಗ, ನೂರೊಂದು ವಿರಕ್ತರಯುಗ, ತೋಂಟದ ಸಿದ್ಧಲಿಂಗರ ಯುಗ, ನಿಜಗುಣಾದಿ ತತ್ವಪದಕಾರರ ಯುಗ ಎಂದು ನಾಲ್ಕು ಘಟ್ಟಗಳಲ್ಲಿ ಗುರುತಿಸುತ್ತಾರೆ. ಈ ಎಲ್ಲ ಅಧ್ಯಯನಕಾರರು ಸ್ವರವಚನಗಳನ್ನು ಬಸವಯುಗದ ರಚನೆಗಳೆಂದು ನಂತರದಲ್ಲಿ ಇವು ಬೇರೆ ಬೇರೆ ರೂಪಗಳನ್ನು ಪಡೆದು ಬೆಳೆದ ಚಾರಿತ್ರಿಕ ಬಗೆಯನ್ನು ವಿವರಿಸುತ್ತವೆ.

ಗೀತಮಾಧ್ಯಮದ ಈ ಹಾಡುಗಳನ್ನು 'ಸ್ವರ-ವಚನ' ಅಂದರೆ ರಾಗ-ತಾಳಗಳನ್ನು ಒಳಗೊಂಡು ಹಾಡಲು ಬರುವಂತದ್ದು ಎಂದು ಸಂಗೀತ ದೃಷ್ಟಿಯಿಂದ ಸ್ವರವಚನಗಳೆಂದು ಪರಂಪರೆ ಕಟ್ಟುವ ನೆಲೆಯಲ್ಲಿ ವಿವರಿಸುತ್ತವೆ. ವಚನಗಳಿಂದ ಅವನ್ನು ಭಿನ್ನವಾಗಿ ಗುರುತಿಸುವ ಖಚಿತತೆಗೋಸ್ಕರ ಸ್ವರವಚನ-ಸ್ವರಪದ ಎಂಬ ಮಾತುಗಳನ್ನು ಬಳಸತೊಡಗಿದರು ಎಂದು ಪ್ರತ್ಯೇಕಿಸುತ್ತವೆ.

ವಚನಗಳ ಆಶಯವನ್ನು ಹೊಂದಿದ ಮತ್ತು ರಾಚನಿಕವಾಗಿ ಕೀರ್ತನೆ, ತತ್ವ-ಪದಗಳನ್ನು ಹೋಲುವ ಶರಣರ ಹಾಡುವ ರಚನೆಗಳನ್ನು 'ಸ್ವರವಚನ'ಗಳೆಂದು ಪ್ರತ್ಯೇಕಗೊಳಿಸಿ ನೋಡುತ್ತವೆ.

ವೀರಶೈವ ಅನುಭಾವಿಗಳು ರಚಿಸಿತ ತಾತ್ವಿಕ, ಬೋಧನಾತ್ಮಕ ಗೀತ-ಪದ-ತತ್ವಪದಗಳಿಗೆ ಸ್ವರವಚನವೆಂಬುದು ಸ್ಪಷ್ಟವಾಗಿದೆ ಎಂದು ಉಳಿದ ಸಮಯದವರ(ಎಲ್ಲರ) ತತ್ವಪದ ಹಾಡು-ಕೀರ್ತನೆಗಳನ್ನು 'ಸ್ವರವಚನ'ವೆಂದು ಕರೆಯಲಾಗದು ಎನ್ನುತ್ತವೆ. 'ವೀರಶೈವಾನುಭಾವಿಗಳು ರಚಿಸಿದ ಹಾಡುಗಳಿಗೆ ಮಾತ್ರ 'ಸ್ವರವಚನ'ವೆಂಬುದು ಸ್ಪಷ್ಟವಾಗಿದೆ. ಇನ್ನಿತರ ಧರ್ಮದವರು ಇಲ್ಲವೇ ಅಪಾಂಥಿಕರು ಬರೆದ ಹಾಡುಗಳನ್ನು ಸ್ವರವಚನವೆಂದು ಕರೆಯುವುದು ಉಚಿತವಲ್ಲ'[೨೩] ಎಂದು ಗುರುತಿಸುತ್ತಾರೆ.

'ಗುರುಪಂಥೀಯರಾದ ತತ್ವಪದಕಾರರು ಲಿಂಗದೀಕ್ಷೆ ಹೊಂದಿರುವುದಿಲ್ಲ. ಹೆಚ್ಚಾಗಿ ಕಾಯಕ ತತ್ವ, ದಾಸೋಹ ಸಿದ್ಧಾಂತ ವಿಷಯದಲ್ಲಿ ದೂರವಿರುವವರು ಎಂದು ಪ್ರತ್ಯೇಕಿಸಿ ವೀರಶೈವ ಧರ್ಮದ ಚೌಕಟ್ಟುಗಳಲ್ಲಿಟ್ಟು ನೋಡುತ್ತವೆ. ಇದನ್ನು ಸಮಸ್ಯೆ ಎಂದು ಈ ಅಧ್ಯಯನಗಳು ಭಾವಿಸುವುದಿಲ್ಲ. ಯಾಕೆಂದರೆ ಸುಮಾರು ೧೭-೧೮ನೇ ಶತಮಾನದಲ್ಲಿ ಬರುವ ಖೈನೂರು ಕೃಷ್ಣಪ್ಪ ಬ್ರಾಹ್ಮಣನಾಗಿ ಜನಿಸಿಯೂ ಬ್ರಾಹ್ಮಣ್ಯವನ್ನು ಧಿಕ್ಕರಿಸಿ ಕಡಕೋಳ ಮಡಿವಾಳಪ್ಪನಿಂದ ಲಿಂಗದೀಕ್ಷೆ ಪಡೆದನು. ಶರಣರ ತತ್ವಗಳಿಗೆ ಬದ್ಧನಾಗಿ ಲಿಂಗವೇ ಪ್ರಾಣವಾಗಿ, ಪ್ರಾಣಲಿಂಗಿಯಾದ ಕೃಷ್ಣಪ್ಪನಾಗಲಿ, ಕ್ರಿ.ಶ.೧೯೧೭ರಲ್ಲಿ ಜನಿಸಿದ 'ಮಹಾಗಾಂವ ಮೀರಸಾಬ' ಹುಟ್ಟಿನಿಂದ ಮುಸ್ಲಿಂನು. ಚಂದ್ರಶೇಖರ ಪಾಟೀಲರಿಂದ ಲಿಂಗಧಾರಣೆಯಾದ ನಂತರ ವೀರಶೈವ ಧರ್ಮದ ತತ್ವಗಳನ್ನು ಚಾಚೂತಪ್ಪದೇ ಕಾರ್ಯರೂಪಕ್ಕೆ ತಂದವನು. ಕ್ರಿ.ಶ.೧೯೧೫ರಲ್ಲಿ ದಲಿತನಾಗಿ ಜನಿಸಿದ ಕ್ಯಾನಳ್ಳಿ ಹೊನ್ನಪ್ಪ ಮಹಾರಾಜ, ಗುರು ಪಾವಡೇಶ್ವರರಿಂದ ಜಂಗಮತ್ವ ಹೊಂದಿ ಸಾವಿರಾರು ಜನರಿಗೆ ಲಿಂಗದೀಕ್ಷೆ ನೀಡಿದನು. "ಕೊಡುಪುತ್ರನ ಶಿವನೆ, ವರದ ಶಂಕರನೆ" ಎಂದು ಹಾಡುವ ಹಸನನು ವೀರಶೈವನಾಗದೆಯೂ ವೀರಶೈವ ಕ್ರಿಯಾಚರಣೆಗಳನ್ನೇ ತನ್ನ ಜೀವನದಲ್ಲಿ ಅಳವಡಿಸಿಕೊಂಡ ಯೋಗಿ. ಶಿಶುನಾಳರ "ಲಿಂಗದೊಳಗೆ ಮನವಿಡಿದಿನ್ನಾವರದ, ಇಂಗಿತ ತಿಳಿಯದವರಿಗೇನು ಫಲ?" ಎನ್ನುವುದಾಗಲಿ "ಪಾಲಿಸಯ್ಯ ಪಾರ್ವತಿ ಪತಿ ತ್ರಿಲೋಕದೋಳ್‌ವಿರತಿ" ಎನ್ನುವುದಾಗಲಿ "ಕರುಣೆ ಬಾರದೇನೋ ಸದಾಶಿವ ಕರುಣೆ ಬಾರದೇನೋ"[೨೪] ಇಂಥ ಪದಗಳಲ್ಲಿನ ಸೂಕ್ಷ್ಮತೆ, ಸಂಕರತೆಗಳನ್ನು ಅರಿಯದೆ ಅಧ್ಯಯನ ಮಾಡಲಾಗಿದೆ.

ಶಿವಶರಣರ ಪದಗಳನ್ನು ಬಳಸಿದ ಮಾತ್ರಕ್ಕೆ ವೀರಶೈವರೆಂದು ಇವರ ರಚನೆಗಳನ್ನೆಲ್ಲ ವೀರಶೈವರಾಶಿಗೆ ಸೇರಿಸಿ ಬಿಡುವುದು ನಡೆದಿದೆ. ಎಲ್ಲ ಧರ್ಮಗಳ ಮೀರಿ ನಿಂತ ತತ್ವಪದಕಾರರ ರಚನೆಗಳನ್ನು ಕೇವಲ ವೈಷ್ಣವ, ವೀರಶೈವ, ಮುಸ್ಲಿಂ ಅಥವಾ ಅವುಗಳ ಕಲಸು ಮೇಲೋಗರದ ತತ್ವಗಳನ್ನು ಪ್ರತಿಪಾದಿಸುವ ರಚನೆಗಳು ಎಂದು ಬಿಂಬಿಸಲಾಗಿದೆ. ಇವುಗಳಲ್ಲಿ ತಮ್ಮ ಕಾಲದ ರಾಜಕೀಯ, ಸಾಮಾಜಿಕ, ಧಾರ್ಮಿಕ, ಒತ್ತಡಗಳನ್ನು ಎದುರಿಸುವ, ಆಧುನಿಕತೆಗೆ ಸ್ಪಂದಿಸುವ ತಂತ್ರಗಳೂ ಅಡಗಿವೆ ಎಂಬ ಮಹತ್ವವನ್ನು ಅರಿಯುವುದಿಲ್ಲ. ಸ್ವರವಚನ ಪರಿಭಾಷೆ, ವ್ಯಾಖ್ಯೆಯನ್ನು ವಿಸ್ತರಿಸಿ ಎಲ್ಲವನ್ನು ಅದರ ತೆಕ್ಕೆಯೊಳಕ್ಕೆ ತಂದು ಸುರುವುವ ಹುನ್ನಾರಗಳು ಅಧ್ಯಯನದಲ್ಲಿ ಕಾಣುತ್ತವೆ.

ವೀರಶೈವ ತತ್ವವಸ್ತುಗಳನ್ನೊಳಗೊಂಡ ಈ ಸ್ವರವಚನಗಳನ್ನು ರಚಿಸುವ ಮತ್ತು ಹಾಡುವ ಪರಂಪರೆಯನ್ನು ಹಳ್ಳಿಗಳಲ್ಲಿ ಈಗಲೂ ವೀರಶೈವರೂ, ವೀರಶೈವೇತರರೂ ಮುಂದುವರೆಸಿಕೊಂಡು ಬಂದಿದ್ದಾರೆ. ಇಂದಿನವರೆಗೂ ವೀರಶೈವ ಸ್ವರವಚನ ಸಾಹಿತ್ಯ ಹುಟ್ಟುತ್ತಲಿದೆ[೨೫] ಎಂಬ ತಪ್ಪು ಕಲ್ಪನೆಯ ಅಧ್ಯಯನಗಳು ಹಳ್ಳಿಗರು ರಚಿಸಿರುವ ಮತ್ತು ಹಾಡುತ್ತಿರುವ ಹಾಡುಗಳನ್ನು ಸ್ವರವಚನಗಳೆಂದು ತಿಳಿದಿವೆ.

ಸ್ವರವಚನಗಳ ವಸ್ತು ಹೆಚ್ಚಾಗಿ ವೀರಶೈವತತ್ವ, ಲೋಕನೀತಿ, ಶಿವಸ್ತುತಿ, ಶರಣ ಸ್ತೋತ್ರ, ಸಮಾಜ ವಿಮರ್ಶೆಯೂ ಕಂಡುಬರುತ್ತದೆ. ಶರಣ ರಚನೆಗಳಲ್ಲಿ ತತ್ವಪ್ರತಿಪಾದನೆ ಪ್ರಧಾನವಾಗಿದ್ದರೆ ನಂತರದ ಅನುಭಾವಿಗಳ ರಚನೆಗಳಲ್ಲಿ ಲೋಕನೀತಿ ಪ್ರಧಾನ ಎನ್ನುವತ್ತವೆ. ಭಾಷೆಯ ದೃಷ್ಟಿಯಿಂದ ನಡುಗನ್ನಡವಾದರೂ, ಶರಣರ ರಚನೆಗಳಲ್ಲಿ ಬೆಡಗು, ಸಾಂಕೇತಿಕತೆ ಹೆಚ್ಚಾಗಿ, ಸರಳತೆ ಕಡಿಮೆ ಎನ್ನುತ್ತವೆ. 'ಸ್ವರವಚನಗಳಲ್ಲಿ ಅಖಂಡವಾದ ಒಂದು ಕಥಾ ವಸ್ತುವಿಲ್ಲ. ಇವು ವ್ಯಕ್ತಿನಿಷ್ಠ ರಚನೆಗಳೇ ವಿನಾ ವಸ್ತುನಿಷ್ಠ ರಚನೆಗಳಲ್ಲ. ಮಹಾಕಾವ್ಯದಂತೆ ಇಲ್ಲಿ ಅನೇಕ ಪಾತ್ರಗಳ ಪ್ರವೇಶವಿಲ್ಲ ಒಂದೇ ಕೃತಿಯಲ್ಲಿ ಒಂಬತ್ತು ರಸಗಳ ಬೆರಕೆಯಿಲ್ಲ. ಇಲ್ಲಿ ಏಕವ್ಯಕ್ತಿಯ ಅನೇಕ ಬಾವಗಳ ಖಂಡ ಖಂಡ ಅಭಿವ್ಯಕ್ತಿಯಿದೆ. ಆತ್ಮಸಮ್ಮುಖ ಅಧ್ಯಾತ್ಮವೇ ನಿಚಿತ ಪ್ರಯೋಜನದೊಂದಿಗೆ ಸಮಾಜ ಸಮ್ಮುಖ ವಿಚಾರಧಾರೆಯೂ ಒಂದಿಷ್ಟು ಬಂದಿರುವುದುಂಟು. ಒಂದು ಸಾಹಿತ್ಯ ಕೃತಿಗಿರುವ ಅಖಂಡತೆಯ ಅಭಾವವಿಲ್ಲದ್ದರೂ ಬಿಡಿ ಬಿಡಿಯಾದ ಸ್ವರವಚನಗಳನ್ನು ಇಡಿಯಾಗಿ ನೋಡಿದಾಗ ಪ್ರತಿಮೆ, ಸಂಕೇತ, ಗುಣ-ಅಲಂಕಾರ, ರಸಧ್ವನಿ, ಗಾದೆ, ಒಗಟು, ಆಡುನುಡಿ, ಲೋಕಾನುಭವ, ಪ್ರಾಸಾನುಪ್ರಾಸಗಳನ್ನು ಗುರುತಿಸಬಹುದು[೨೬] ಎಂದು ಸ್ವರವಚನ ಸಾಹಿತ್ಯದ ಸ್ವರೂಪವನ್ನು ಗುರುತಿಸುತ್ತವೆ. ಮುಂದಿನ ರಚನೆಕಾರರಲ್ಲಿ ಶಿಷ್ಟವೂ ಅಲ್ಲದ, ದೇಶಿಯೂ ಅಲ್ಲದ ರಚನೆ ಕಂಡುಬರುತ್ತವೆ ಎಂದೂ ವಿಶ್ಲೇಷಿಸುತ್ತವೆ.

ಹೀಗಾಗಿ ಮೂರು ನಿರ್ಣಯಗಳು ಈ ಅಧ್ಯಯನಗಳಿಗೆ ಕಾರಣವಾಗಿದೆ. ಒಂದು-೧೫ನೆಯ ಶತಮಾನದಲ್ಲಿ ನಿಜಗುಣರಿಂದ ಸ್ವತಂತ್ರವಾಗಿ ಶುರುವಾದ 'ಕೈವಲ್ಯ ಸಾಹಿತ್ಯ'ವನ್ನು ಸ್ವರವಚನವೆಂದು ತಿಳಿದದ್ದು. ಎರಡು - ೧೭ರಿಂದ ೧೯ನೆಯ ಶತಮಾನದ ತತ್ವಪದ ಸಾಹಿತ್ಯವನ್ನೆಲ್ಲ ಸ್ವರವಚನ ಸಾಹಿತ್ಯದ ಸುಗ್ಗಿಯ ಕಾಲವೆಂದು ತಪ್ಪಾಗಿ ಭಾವಿಸಿದ್ದು, ಮೂರು - ಈ ತತ್ವಪದ ಸಾಹಿತ್ಯದಲ್ಲಿ ಬರೀ ವೀರಶೈವತತ್ವವನ್ನು ಹುಡುಕಿದ್ದು, (ಕಲಬುರ್ಗಿ, ರಾಜೂರ, ಪೂಜಾರ ವಿ.ಜಿ., ಶಿರೂರು, ಈಶ್ವರಯ್ಯ ಮಠ, ಸರ್ವಮಂಗಳ ಶಂಕರ ಮೊದಲಾದವರು ಪ್ರತಿಪಾದಿಸಿದ್ದಾರೆ) ಈ ಎಲ್ಲವೂ ತತ್ವಪದಗಳನ್ನು ಧಾರ್ಮಿಕ ಚೌಕಟ್ಟಿನಲ್ಲಿ ಕೂರಿಸುವ ತರ್ಕದ ಗ್ರಹಿಕೆಗಳಾಗಿವೆ.

ಈ ಎಲ್ಲ (ಹೇಳಿಕೆಗಳ) ಅಧ್ಯಯನಗಳ ಸಮಸ್ಯೆ ಎಂದರೆ ಜ್ಯಾತ್ಯತೀತ ನೆಲೆಯ ತತ್ವಗಳನ್ನು ಪ್ರತಿಪಾದಿಸಿದ ಅನುಭಾವಿಗಳನ್ನು ಧರ್ಮದ ಚೌಕಟ್ಟುಗಳಲ್ಲಿರಿಸಿ ನೋಡುವುದು. ಎಲ್ಲ ಜಾತಿಯವರಿದ್ದ

ಅನುಭಾವಿ ಪರಂಪರೆ ೧೫ನೆಯ ಶತಮಾನದಿಂದ ಕರ್ನಾಟಕದಲ್ಲಿ ವಿಶಿಷ್ಟವಾಗಿ ಬೆಳೆದು ಬಂದಿದೆ. ಎಲ್ಲ ಸಾಂಸ್ಥಿಕ ಧರ್ಮಗಳಿಗೆ ಸೆಡ್ಡು ಹೊಡೆದು ನಿಂತ ಈ ಪರಂಪರೆ ಸಾಂಸ್ಕೃತಿಕ ರಿಚ್ಯುಯಲ್‌ಗಳನ್ನು ಮೀರಿ ಅನುಭಾವ, ಅಧ್ಯಾತ್ಮ, ಪರಮಾತ್ಮ ಕೈವಲ್ಯದ ಬಗ್ಗೆ ಚಿಂತನೆ ನಡೆಸಿದೆ. ಇವರಲ್ಲಿ ಕೆಲವರು ವೀರಶೈವರಾಗಿದ್ದರು. ಅಲ್ಲದೆ ಹುಟ್ಟಿನಿಂದ ಬೇರೆ ಬೇರೆ ಧರ್ಮ, ಜಾತಿಯವರಿದ್ದರು. "ಅಂದ ಮಾತ್ರಕ್ಕೆ ಅವರು ತಂತಮ್ಮ ಮತ ಧರ್ಮಗಳನ್ನು ಪ್ರಸಾರ ಮಾಡುವವರೂ, ಇನ್ನೊಂದು ಧರ್ಮೀಯರನ್ನು ಮೆಚ್ಚಿಸಲು ತಮ್ಮ ಧರ್ಮವನ್ನು ವಿರೋಧಿಸುವವರೂ ಅಲ್ಲ. ಅವರ ಪದಗಳಲ್ಲಿ ಇರುವ ಧರ್ಮದ ಸ್ವರೂಪವೇ ಬೇರೆ. ಹಾಗೆ ಕಂಡರೆ ಅದು 'ಧರ್ಮವಲ್ಲ. ಮೂಲತಃ ಗುರುಪಂಥದ "ತತ್ವದರ್ಶನ'. ತತ್ವಪದಕಾರರು ಸಾಮಾನ್ಯವಾಗಿ ತಂತಮ್ಮ ಮತಧರ್ಮಗಳ ಪುರೋಹಿತಶಾಹಿಯನ್ನು ಅದು ರೂಢಿಸುವ ಆಚರಣೆಗಳನ್ನು ಕಟುವಾಗಿ ವಿಮರ್ಶಿಸುತ್ತಾರೆ. ಈ ಕಾರಣಕ್ಕೆ ಅವರು ತಂತಮ್ಮ ಮೂಲ ಧರ್ಮಗಳ ಧಣಿಗಳಿಂದ 'ಧರ್ಮಬಾಹಿರರು'[೨೭] ಹೀಗೆ ಜಾತಿಯ ನೆಲೆಯಿಂದ ಅನುಭಾವಿಗಳನ್ನು ಗುರುತಿಸುವುದು ಸರಿಯಲ್ಲವೆಂದು ರಹಮತ್ ತರೀಕೆರೆ ಅವರು ಅಭಿಪ್ರಾಯಪಡುತ್ತಾರೆ.

ತತ್ವಪದ ಮತ್ತು ಸ್ವರವಚನಗಳನ್ನು ಕೇಂದ್ರವಾಗಿಸಿಕೊಂಡ ಚರ್ಚೆಗಳು ಇವೆ. ಇವು ತತ್ವಪದ ಮತ್ತು ಸ್ವರವಚನಗಳನ್ನು ವಿಭಿನ್ನವಾಗಿ ಗ್ರಹಿಸುತ್ತವೆ. ಬಹುತೇಕ ತತ್ವಪದಗಳನ್ನು ಸ್ವರವಚನಗಳ ಹೆಸರಿನಲ್ಲಿಯೇ ಪ್ರಕಟಿಸಲಾಗಿದೆ. ಭಾರತೀಯ ಧಾರ್ಮಿಕ ಪರಂಪರೆಯಲ್ಲಿ ತತ್ವಪದಗಳ ಪರಂಪರೆಯನ್ನು ಬೌದ್ಧ ಸಿದ್ಧರು, ಬಾವುಲರು, ಕಬೀರಪಂಥಿ ಮೊದಲಾದ ನಿರ್ಗುಣರು, ವಾರಕರಿ ಹಾಗು ನಾಥ ಸಂಪ್ರದಾಯಗಳಲ್ಲಿ ಗುರುತಿಸುತ್ತಾರೆ.[೨೮] ಅಲ್ಲದೆ ಜೈನರಲ್ಲಿಯೂ ಈ ತರದ ರಚನೆಗಳು ಸಿಗುವುದನ್ನು ಪ್ರಸ್ತಾಪಿಸುತ್ತವೆ.

ಅನುಭಾವ ಪದಗಳಿಗೆ ಭಜನೆ ಪದಗಳೆಂದು, ತತ್ವಪದಗಳೆಂದು ಸ್ವರವಚನಗಳೆಂದು ಹೆಸರುಗಳಿವೆ. ತತ್ವಪದ ಎಂದು ಹೆಸರು ಉಳಿದೆಲ್ಲ ಹೆಸರುಗಳನ್ನು ಒಳಗೊಂಡಿದೆ. ಇದಕ್ಕೆ ೧೨ನೆಯ ಶತಮಾನದ ಶರಣರ 'ಸ್ವರವಚನಗಳು ಮೂಲವಾಗಿವೆ. ಸ್ವರವಚನಗಳಿಗಿಂತ ಹಿಂದೆ ತತ್ವಪದಗಳು ಸೃಷ್ಟಿಯಾದ ದಾಖಲೆಗಳು ಇಲ್ಲ'[೨೯] ಎಂದು ಶಾಂತರಸರು ಎಲ್ಲವನ್ನು ಸ್ವರವಚನಗಳ ಹೆಸರಿನಲ್ಲಿ ವಿವರಿಸುತ್ತಾರೆ. ಸೇರಿಸುತ್ತಾರೆ.

೧೫ನೆಯ ಶತಮಾನದಿಂದ ನಿಜಗುಣ ಶಿವಯೋಗಿಯ ರಚನೆಗಳನ್ನು 'ಕೈವಲ್ಯ ಸಾಹಿತ್ಯ'ವೆಂದು ತಿಪ್ಪೇರುದ್ರಸ್ವಾಮಿಗಳು ಪರಂಪರೆಯನ್ನು ಕಟ್ಟುವ ಕೆಲಸ ಮಾಡಿದ್ದಾರೆ. ರಚನೆಕಾರರು ತಮ್ಮ ತತ್ವಪದಗಳ ಸಂಕಲನವನ್ನು ಅವರು 'ಕೈವಲ್ಯಪದ್ಧತಿ' ಎಂದು ಕರೆದರು. ಇದೇ ಮಾರ್ಗದಲ್ಲಿ ನಡೆದ, ಸರ್ಪಭೂಷಣರು, ಬಾಲಲೀಲಾ ಮಹಾಂತರು, 'ಕೈವಲ್ಯ' ಎನ್ನುವ ಮಾತಿನಿಂದಲೇ ಇವುಗಳ ಸಂಕಲನವನ್ನು ಹೆಸರಿಸಲಿಲ್ಲ

'ಕೈವಲ್ಯ ನವನೀತ, ಕೈವಲ್ಯದರ್ಪಣ' ಎಂದು ಮುಂತಾಗಿ ಆ ಮಾತು ಕೆಲವೆಡೆ ಮುಂದುವರೆದರೂ ಅನೇಕರಲ್ಲಿ ಅವು ಹಾಡುಗಳು ತತ್ವಪದಗಳೆಂದೇ ಪ್ರಚಲಿತವಾದವು ಎಂದು ವಿಶ್ಲೇಷಿಸುತ್ತಾರೆ.

'ರೂಪದ ದೃಷ್ಟಿಯಿಂದ (ಭಜನೆ ಪದ) ಹಾಡುಗಳೆಂದು, ವಸ್ತುವಿನ ದೃಷ್ಟಿಯಿಂದ ತತ್ವಪದಗಳೆಂದೂ ಕರೆದರೆ, ಅವು ಉದ್ದೇಶಿಸಿದ ಅತ್ಯಂತಿಕ ಗುರಿಯ ದೃಷ್ಟಿಯಿಂದ 'ಕೈವಲ್ಯಪದಗಳೆಂದು' ಕರೆದರು[೩೦] ಎಂದು ಚರ್ಚಿಸುವುದನ್ನು ಈಶ್ವರಯ್ಯ ಮಠ ಅವರು ಸ್ವರವಚನಗಳ ಪರಿಭಾಷೆಯಲ್ಲಿ ಅಡಕಗೊಳಿಸಿ ಚರ್ಚಿಸುತ್ತಾರೆ. ಆದರೆ ಸ್ವರವಚನ ಕೀರ್ತನೆಯನ್ನು ಬೇರೆ ಬೇರೆಯಾಗಿ ಗ್ರಹಿಸುತ್ತಾರೆ. ವೀರಣ್ಣದಂಡೆ ಅವರು ಅನುಭಾವ ಸಾಹಿತ್ಯವನ್ನು, ಲಾವಣಿಗಳನ್ನು ಸ್ವರವಚನಗಳಲ್ಲಿ ಸೇರಿಸಿದರೆ, ಏಕತಾರಿ, ಭಜನೆ, ಸಖೀಖ್ಯಾಲಿ ಹಾಡುಗಳನ್ನು ತತ್ವಪದಗಳಲ್ಲಿ ಸೇರಿಸಿ ಚರ್ಚಿಸುತ್ತಾರೆ. ಮಲ್ಲಿಕಾರ್ಜುನ ಲಠ್ಠೆ ಅವರು ಕೈವಲ್ಯ ಸಾಹಿತ್ಯ, ತತ್ವಪದ, ಅನುಭಾವಪದ, ಭಜನೆಪದ ಎಲ್ಲವನ್ನು ಸ್ವರವಚನಗಳಲ್ಲಿ ಚರ್ಚಿಸುತ್ತಾರೆ. ಕೀರ್ತನೆಗಳಿಗೂ ಈ ಸ್ವರವಚನಗಳೇ ಮೂಲ ಎನ್ನುತ್ತಾರೆ. ಎಚ್.ಎಸ್. ವೆಂಕಟೇಶಮೂರ್ತಿ ಅವರು ಕವಿರಾಜಮಾರ್ಗಕ್ಕೂ ಮೊದಲೇ ಕನ್ನಡದಲ್ಲಿ ಹಾಡುಗಬ್ಬಗಳ ರಚನೆ ಮೊದಲಾಗಿರಬೇಕು. ಬೆದಂಡೆಯ ಉಲ್ಲೇಖದಿಂದ ಇದು ತಿಳಿಯುತ್ತದೆ. ಇದು ಹಗುರಾದ ಶೃಂಗಾರಕ್ಕೆ ಮೀಸಲಾಗಿತ್ತು. ನಂತರದಲ್ಲಿ ೧೨ನೆಯ ಶತಮಾನದಲ್ಲಿ ಶಿವಶರಣರ ಹಾಡುಗಾರರು ಅಧ್ಯಾತ್ಮದ ಅನುಭಾವದ ಗಂಭೀರ ವಸ್ತುವಿಗೆ ಬಳಸತೊಡಗಿ ಹಾಡುಗಬ್ಬಗಳ ಪ್ರಕಾರಕ್ಕೆ ಗಂಭೀರವಾದ ಅಂತಸ್ತನ್ನು ಕಲ್ಪಿಸಿದರು. ತೆಳುವಾಗಿ ಹರಿದು ಬಂದ ಈ ಸಾಹಿತ್ಯ ಪ್ರಕಾರಕ್ಕೆ ೧೬ನೆಯ ಶತಮಾನದಲ್ಲಿ ಪುರಂದರ, ಕನಕದಾಸರ ಕೀರ್ತನೆಗಳು ಸೇರಿದವು. ಈ ಕಾಲದಲ್ಲೇ ಈ ತೊರೆಗೆ ಶಿವಶರಣ ಯೋಗಿಗಳ 'ಕೈವಲ್ಯ ಪದ್ಧತಿಯ' ತತ್ವಪದಗಳ ಇನ್ನೊಂದು ಸೀಳೂ ಸೇರಿಕೊಂಡಿತು'[೩೧] ಎಂದು ಕೀರ್ತನೆಗಳನ್ನು ಸ್ವರವಚನ, ತತ್ವಪದಗಳಲ್ಲಿ ಸೇರಿಸಿ ವಿವರಿಸುತ್ತಾರೆ.

ಬಸವರಾಜ ಸಬರದ ಅವರು '೧೫ನೆಯ ಶತಮಾನದಲ್ಲಿ ಕಾಣಿಸಿಕೊಂಡ ಸ್ವರವಚನ ಸಂಕಲನ ಹಾಡುಗಳು, ನಿಜಗುಣಶಿವಯೋಗಿ ನಂತರದ ಈ ಹಾದಿಯಲ್ಲಿ ರಚಿತವಾದ ದಾಸರ ಕೀರ್ತನೆಗಳು, ತತ್ವಪದಗಳು ರೂಪದ ದೃಷ್ಟಿಯಿಂದ ಒಂದೇ ಆಗಿವೆ. ಆದರೆ ಆಶಯದ ದೃಷ್ಟಿಯಿಂದ ಇವು ಸಂಪೂರ್ಣ ಭಿನ್ನವಾಗಿವೆ' ಎಂದು ಸ್ವರವಚನ, ಕೀರ್ತನೆಗಳಿಗಿಂತ ತತ್ವಪದಗಳು ಭಿನ್ನ ಎನ್ನುತ್ತಾರೆ.

ಸ್ವರವಚನಗಳು 'ತತ್ವ' 'ಅಧ್ಯಾತ್ಮ'ದಂತಹ ವಸ್ತುವುಳ್ಳವಾದರೂ ವೀರಶೈವ ಧರ್ಮದ ತಾತ್ವಿಕ ಆಚರಣೆಗಳಾದ ಷಟ್ಸ್ಥಲ, ಅಷ್ಟಾವರಣ, ಮುಂತಾದ ಸೈದ್ಧಾಂತಿಕ ನಿಲುವಿಗೆ ಒಳಪಟ್ಟ ಆಧ್ಯಾತ್ಮಿಕ, ಪರತತ್ವ, ಲೌಖಿಕಗಳ ಸಂಕೋಲೆಯಲ್ಲಿ ಸಿಲುಕಿದ ಸಾಹಿತ್ಯವಾಗಿದೆ. ಜನತೆಗೆ ನೀತಿಯ ಉಪದೇಶಗಳನ್ನು ಸಾರುವ ಕೀರ್ತನೆಗಳೂ ಹರಿಯೇ ಸರ್ವೋತ್ತಮನೆಂದು ಸಾರುವ ಪರಮ ಗುರಿವುಳ್ಳವು. ಆದರೆ 'ತತ್ವಪದ'ಗಳಿಗೆ 'ತತ್ವ'ವೇ ಮುಖ್ಯವಾಗಿದೆ. ಕೈವಲ್ಯ ಸ್ಥಿತಿ, ನೀತಿ ಬೋಧನೆಯೇ ಅವುಗಳ ಪರಮ

ಗುರಿ. ಸ್ವರವಚನಗಳು ಹಾಡುವ ನೆಲೆಯಲ್ಲಿ ರಾಗ-ತಾಳಗಳಿಗೆ ಕಟ್ಟು ಬಿದ್ದಂತವು. ಆದರೆ ಜನಪದ ಲಯಗಳನ್ನು ಹೊಂದಿರುವ ಈ ತತ್ವಪದಗಳು ಎತ್ತಿಕೊಂಡವರ ಕೂಸು. ಸರಳವಾದ ನುಡಿಗಟ್ಟುಗಳಲ್ಲಿ ಗಹನ ತತ್ವಗಳನ್ನು ಒಳಗೊಂಡಿರುವಂತವು."[೩೨] ಹೀಗೆ ಆಶಯದ ದೃಷ್ಟಿಯಿಂದ ಭಿನ್ನ ಎನ್ನುತ್ತಾ ಇವುಗಳನ್ನು ಜನಪದ ಮತ್ತು ಶಿಷ್ಟರಚನೆಗಳಾಗಿಯೂ ನೋಡುತ್ತಾರೆ.

ಒಟ್ಟಿನಲ್ಲಿ ಸ್ವರವಚನ-ತತ್ವಪದಗಳು ರೂಪದ ದೃಷ್ಟಿಯಿಂದ ಒಂದೇ ಆಗಿವೆ ಎನ್ನುವ ಕಾರಣದಿಂದ ಈ ಎರಡೂ ರಚನೆಗಳನ್ನು ಒಂದೇ ಎಂದು ಭಾವಿಸಿ ಚರ್ಚಿಸಲಾಗಿದೆ. ಧಾರ್ಮಿಕ ಪರಿಭಾಷೆಯಲ್ಲಿ ಸ್ವರವಚನಗಳನ್ನು ವೀರಶೈವ ರಚನೆಗಳೆಂದು ಚರ್ಚಿಸಲಾಗಿದೆ. ವೀರಶೈವ ತತ್ವಸಿದ್ಧಾಂತಗಳನ್ನು ಒಳಗೊಂಡ ಕಾರಣಕ್ಕಾಗಿ ತತ್ವಪದ ರಚನೆಗಳನ್ನೂ ಸ್ವರವಚನಗಳಲ್ಲಿ ಅಡಕಗೊಳಿಸಲಾಗಿದೆ. ಇವುಗಳಲ್ಲಿ ಕೈವಲ್ಯಪದ, ಅನುಭಾವಪದ, ಭಜನೆ ಪದ, ಕೀರ್ತನೆಗಳೂ ಸೇರಿಹೋಗಿವೆ. ಸ್ವರವಚನಗಳಿಗೆ ಪರಂಪರೆ ಕಟ್ಟುವ ದೃಷ್ಟಿಯಿಂದ ೧೨ನೇ ಶತಮಾನ ಶರಣರ ಹಾಡುವ ರಚನೆಗಳನ್ನು ಬಳಸಿಕೊಳ್ಳಲಾಗಿದೆ. ಶರಣರ ಹಾಡುವ ರಚನೆಗಳು 'ವಚನ ಪದ್ಯಗಳಾಗಿರುವ ಸಾಧ್ಯತೆಯೇ ಹೆಚ್ಚು ಎಂದು ವಿದ್ವಾಂಸರು ಚರ್ಚಿಸಿದ್ದಾರೆ. ಹಾಡಿನ ಉಲ್ಲೇಖ ವಚನಗಳಲ್ಲಿ ಅನೇಕ ಸಲ ಬಂದಿದೆ. ಆದರೆ ಸ್ವರವಚನ ಎನ್ನುವ ವೀರಶೈವ ಪರಿಭಾಷೆ ಮಾತ್ರ ೧೫ನೆಯ ಶತಮಾನದಲ್ಲಿ ಸೃಷ್ಟಿಯಾದುದು. ವೀರಶೈವೀಕರಣ ಮಾಡುವ ಉದ್ದೇಶದಿಂದ ಶೂನ್ಯ ಸಂಪಾದನೆಗಳು, ಸಂಕಲನಗಳು, ಸ್ಥಲಗಳು, ಟೀಕುಗಳು ಹುಟ್ಟಿಕೊಂಡಿರಬಹುದು. ಆಧುನಿಕ ಸಂದರ್ಭದಲ್ಲಿ ಎಲ್.ಬಸವರಾಜು ಅವರು 'ಶಿವದಾಸ ಗೀತಾಂಜಲಿ' ಎಂದು ಹಾಡುಗಳನ್ನು ಸಂಗ್ರಹಿಸುವ ಮೂಲಕ ಸ್ವರವಚನಗಳ ಪ್ರಕಟಣೆಗೆ ಕಾರಣರಾದರು. ಆದರೆ ಇಲ್ಲಿಂದ ೧೫ನೆಯ ಶತಮಾನದಲ್ಲಿ ನಿಜಗುಣರಿಂದ ಸ್ವತಂತ್ರ ಸಾಹಿತ್ಯವೆಂದು ಸೃಷ್ಟಿಯಾದ 'ಕೈವಲ್ಯಸಾಹಿತ್ಯ'ವನ್ನು, ಅನಂತರದ ೧೭ನೆಯ ಶತಮಾನಕ್ಕೆ ಸೇರಿದ ಅನೇಕ ತತ್ವಪದಕಾರರ ರಚನೆಗಳನ್ನು ಅವು ವೀರಶೈವ ತತ್ವಸಿದ್ಧಾಂತವನ್ನು ಪ್ರತಿಪಾದಿಸುತ್ತಿವೆ ಎನ್ನುವ ಮತೀಯ ಕಾರಣದಿಂದ ಸ್ವರವಚನ ಸಂಕಲನಗಳಲ್ಲಿ ಸೇರಿಸಿ ಚರ್ಚಿಸಲಾಗಿದೆ.

ಸ್ವರವಚನ, ತತ್ವಪದಗಳು ರೂಪದ ದೃಷ್ಟಿಯಿಂದ ಒಂದೇ ಆದರೂ ಅಭಿವ್ಯಕ್ತಿ ಮತ್ತು ಆಶಯದ ದೃಷ್ಟಿಯಿಂದ ಭಿನ್ನವಾಗಿರುವುದನ್ನು ನೋಡದೆ ಸ್ವರವಚನಗಳಲ್ಲಿ ಸೇರಿಸಲಾಗಿದೆ. ರೂಪದ ದೃಷ್ಟಿಯಿಂದ ಹೀಗೆ ನೋಡಿದರೆ ಸಮಸ್ಯೆಯಲ್ಲ. ಆದರೆ ಧಾರ್ಮಿಕ ಪರಿಭಾಷೆಯ ನೆಲೆಯಲ್ಲಿ ಯಾವುದೇ ಸಾಹಿತ್ಯ ಪ್ರಕಾರವನ್ನು, ರಚನೆಗಳನ್ನು ಮಿತಿಗೊಳಪಡಿಸುವುದು ಆ ಸಾಹಿತ್ಯದ ಅನೇಕ ಸಾಧ್ಯತೆಗಳನ್ನು ಹರಣ ಮಾಡಿದಂತೆ ಎಂದು ಅಧ್ಯಯನ ಚರ್ಚೆಗಳು ಭಾವಿಸುವುದಿಲ್ಲ. ಇದಕ್ಕೆ ಈ ರಚನೆಗಳ ಸಂಪಾದನಕಾರರ, ಪ್ರಕಟಣಕಾರರ ಮತ್ತು ಅಧ್ಯಯನಕಾರರ ಮನೋಧರ್ಮ ಕಾರಣವಾಗಿದೆ.

ಈ ಎಲ್ಲದರ ಗ್ರಹಿಕೆಯಿಂದಾಗಿ ಪ್ರಾದೇಶಿಕ, ಧಾರ್ಮಿಕವಾಗಿ ಅಲ್ಲದೆ ಕೈವಲ್ಯ, ಅನುಭಾವ, ಭಜನೆ ಪದಗಳು, ಎಂದೆಲ್ಲ ಸಂಗ್ರಹವಾಗಿವೆ. ಇಲ್ಲಿನ ರಚನೆಗಳನ್ನು ತಮ್ಮ ಉದ್ದೇಶಕ್ಕೆ ಅನುಗುಣವಾಗಿ

ಸಂಗ್ರಹಿಸಿ, ಚರ್ಚಿಸಿರುವುದನ್ನು ಕಾಣಬಹುದು. ಈ ತರದ ರಚನೆಗಳು ಬೇರೆ ಬೇರೆ ಕಾಲದಲ್ಲಿ ಕಂಡು ಬಂದಿವೆ. ಅವುಗಳನ್ನು ಸ್ವರವಚನ ಮತ್ತು ತತ್ವಪದ ಪರಿಕಲ್ಪನೆಗಳಿಗೆ ಸೀಮಿತಗೊಳಿಸಿ ನೋಡಲಾಗಿದೆ. ಅವಕ್ಕೆ ಕೆಲವು ಪರಿಮಿತಿಗಳಿವೆ. ಹೀಗಾಗಿ ರಹಮತ್ ತರೀಕೆರೆ ಅವರು ತತ್ವಪದಕಾರರು, ಸ್ವರವಚನಕಾರರು ಎಂದು ಕರೆಯುವುದೇ ಸಾಂಸ್ಕೃತಿಕವಾಗಿ ಹರಕು ಮುರುಕು ತಿಳಿವಿನ ಪರಿಭಾಷೆಯಾಗಿದೆ ಎನ್ನುತ್ತಾರೆ.[೩೩] ಆದರೆ ಇವೆಲ್ಲ ಅಧ್ಯಯನದ ಅನುಕೂಲತೆಗಾಗಿ ಮಾಡಿಕೊಂಡ ವಿಭಜನೆಗಳೇ ಆಗಿವೆ. ತೇಜಸ್ವಿ ಅವರು ಹೇಳವಂತೆ ಸಾಹಿತ್ಯದ ವರ್ಗೀಕರಣ, ವಿಶ್ಲೇಷಣೆಗಳಿಂದ ಹೊರತಾದ ಸಮಕಾಲೀನ ವಿಮರ್ಶೆ ಇನ್ನೂ ರೂಪಗೊಳ್ಳಬೇಕಿದೆ.[೩೪] ಹೀಗಾಗಿ ಸಾಹಿತ್ಯವನ್ನು ಸೀಮಿತ ಪರಿಕಲ್ಪನೆಗಳಿಂದ ಬಿಡಿಸಿ ಗ್ರಹಿಸಬೇಕಾಗಿದೆ.

**ಅಡಿಟಿಪ್ಪಣಿಗಳು**

೧. ಬಸವರಾಜು ಎಲ್., ಫೆಬ್ರವರಿ-ಮಾರ್ಚ್ ೨೦೦೯, ಕನ್ನಡನುಡಿ, ಪು.೬

೨. ಬಸವರಾಜು ಎಲ್.(ಸಂ), ೧೯೯೩, ಶಿವದಾಸ ಗೀತಾಂಜಲಿ, ಪು.೭೭

೩. ಬಸವರಾಜ ಮಲಶೆಟ್ಟಿ, ೨೦೦೮, ಸ್ವರವಚನ ಸಾಹಿತ್ಯ ಮರು ವಿಚಾರ, ಪು.೧೭

೪. ಉಲ್ಲೇಖ : ವೀರಣ್ಣ ರಾಜೂರ ೨೦೦೪, ವಚನ ಸಂಶೋಧನ, ಪು.೪೪

೫. ಸರ್ವಮಂಗಳ ಶಂಕರ, ೨೦೦೫, ಸ್ವರವಚನಗಳು : ಒಂದು ಸಂಗೀತಾತ್ಮಕ ಅಧ್ಯಯನ, ಪು.೧೯

೬. ಉಲ್ಲೇಖ : ವೀರಣ್ಣ ರಾಜೂರ, ೨೦೦೪, ವಚನ ಸಂಶೋಧನ, ಪು.೪೨

೭. ಬಸವನಾಳ ಶಿ.ಶಿ.(ಸಂ), ೧೯೭೩, ಕೈವಲ್ಯ ಕಲ್ಪವಲ್ಲರಿ, ಪ್ರಸ್ತಾವನೆ, ಪು.xx

೮. ಬಸವರಾಜು ಎಲ್.(ಸಂ), ೧೯೬೩, ಶಿವದಾಸ ಗೀತಾಂಜಲಿ, ಪು.೭೭

೯. ಕಲಬುರ್ಗಿ ಎಂ.ಎಂ., ೨೦೦೭, ಪರಿಕಲ್ಪನೆ, ಪು.೯೯-೧೦೦

೧೦. ವೀರಣ್ಣ ರಾಜೂರ, ೨೦೦೪, ವಚನ ಸಂಶೋಧನೆ, ಪು.೪೭-೪೮

೧೧. ಅದೇ, ಪು.೪೮-೪೯

೧೨. ಚಿದಾನಂದಮೂರ್ತಿ ಎಂ., ೧೯೬೬, ವಚನ ಸಾಹಿತ್ಯದ ಉಗಮ, ಪು.೬೧-೬೨

೧೩. ಚಿದಾನಂದಮೂರ್ತಿ ಎಂ., ೧೯೭೫, ವಚನ ಸಾಹಿತ್ಯ, ಪು.೨೪೬

೧೪. ಶಿವಾನಂದ ವಿ., ೧೯೭೮, ಪ್ರೌಢದೇವರಾಯನ ಕಾಲದ ಕನ್ನಡ ಸಾಹಿತ್ಯ, ಪು.೨೨೯

೧೫. ಅದೇ, ಪು.೨೨೮,೨೩೪,೨೩೫

೧೬. ನಾರಾಯಣ ಪಿ.ವಿ., ೨೦೦೫, *ವಚನ ಸ್ವರವಚನ,* ಸಮಗ್ರ ವಚನ, ಪು.೫೧೨

೧೭. ನಾರಾಯಣ ಪಿ.ವಿ., ೧೯೯೯, *ವಚನಗಳು ಮತ್ತು ಸ್ವರವಚನಗಳು,* ಚಿದಾನಂದಮೂರ್ತಿ ಎಂ., ಮಂಜುನಾಥ ಪಿ.ಯು.(ಸಂ), ಭೂಷಣ, ಪು.೩೮೪, ೩೮೫

೧೮. ಈಶ್ವರಯ್ಯಮಠ, ೨೦೦೮, ಹಾರಿತೋ ಹಂಸ ಹಾರಿತೋ, ಪು.೪೧

೧೯. ಬಸವರಾಜ ಮಲಶೆಟ್ಟಿ, ೨೦೦೮, ಬಸವರಾಜ ಮಲಶೆಟ್ಟಿ ಆಯ್ದ ಲೇಖನಗಳು, ಪು.೧೯

೨೦. ಅದೇ, ಪು.೧೬-೧೭

೨೧. ಅದೇ, ಪು.೧೭

೨೨. ಲಠ್ಠೆ ಎಂ.ಎಸ್., ೨೦೦೦, **ಸ್ವರವಚನಗಳು ಒಂದು ವಿವೇಚನೆ**, ಪು.೨೦-೨೧

೨೩. ಈಶ್ವರಯ್ಯ ಮಠ, ೨೦೦೮, **ಹಾರಿತೋ ಹಂಸ ಹಾರಿತೋ**, ಪು.೧೬-೧೭

೨೪. ಪಾಟೀಲ ಗುಂಡೂರು ಎಸ್.ವಿ.(ಸಂ), **ಕನ್ನಡ ಕಬೀರ ಶಿಶುನಾಳ ಶರೀಫ್ ಸಾಹೇಬರು**, ಪು.೨೧-೫೬

೨೫. ಕಲಬುರ್ಗಿ ಎಂ.ಎಂ., ೨೦೦೭, **ಪರಿಕಲ್ಪನೆ**, ಪು.೯೯-೧೦೪

೨೬. ಈಶ್ವರಯ್ಯ ಮಠ, ೧೯೯೭, **ಸ್ವರವಚನ ವಿಚಾರ ಸಂಕಿರಣ**, ಕಲುಬುರ್ಗಿ ಎಂ.ಎಂ.(ಸಂ), ಪು.೭೬

೨೭. ರಹಮತ್ ತರೀಕೆರೆ, ೨೦೦೬, **ಕತ್ತಿಯಂಚಿನ ದಾರಿ**, ಪು.೨೨

೨೮. ಆನಂದಮೂರ್ತಿ ಜಿ.ವಿ.(ಸಂ), ೧೯೯೭, **ತತ್ವಪದಕಾರರು**, ಪು.೪

೨೯. ಶಾಂತರಸ, ೨೦೦೦, **ತತ್ವಪದಗಳು**, ಪ್ರಧಾನ ಸಂಪಾದಕರ ಮಾತು

೩೦. ತಿಪ್ಪೇರುದ್ರಸ್ವಾಮಿ ಎಚ್., ೧೯೮೩, **ಕೈವಲ್ಯ ಸಾಹಿತ್ಯ**, ಪು.೧-೨

೩೧. ವೆಂಕಟೇಶಮೂರ್ತಿ ಎಚ್.ಎಸ್.(ಸಂ), ೨೦೦೦, **ಕೀರ್ತನೆಗಳು**, ಪು.೧೩-೧೪

೩೨. ಬಸವರಾಜ ಸಬರದ(ಸಂ), ೨೦೦೦, **ಹೈದರಾಬಾದ್ ಕರ್ನಾಟಕದ ತತ್ವಪದಗಳು**, ಪ್ರಸ್ತಾವನೆ

೩೩. ರಹಮತ್ ತರೀಕೆರೆ, ೨೦೦೬, **ಕತ್ತಿಯಂಚಿನ ದಾರಿ**, ಪು.೨೨೦

೩೪. ಪೂರ್ಣಚಂದ್ರ ತೇಜಸ್ವಿ, ೨೦೦೭, **ತೇಜಸ್ವಿಲೋಕ**, ಡಿ.ವಿ.ಪ್ರಹ್ಲಾದ(ಸಂ), ಪು.೧೧೭

# ಅಧ್ಯಾಯ ನಾಲ್ಕು

## ತತ್ವಪದ ಅಧ್ಯಯನಗಳ ತಾತ್ವಿಕ ಸ್ವರೂಪ

ತತ್ವಪದಗಳನ್ನು ಕುರಿತು ಅನೇಕ ಬಗೆಯಲ್ಲಿ ಅಧ್ಯಯನಗಳು ನಡೆದಿವೆ. ಈ ಅಧ್ಯಾಯದಲ್ಲಿ ಅವುಗಳ ಕುರಿತು ನೋಡಲಾಗಿದೆ. ಒಂದು ವಿಷಯವನ್ನು ವಿವರಿಸುವುದು, ವಿಶ್ಲೇಷಿಸುವುದು. ಸೈದ್ಧಾಂತೀಕರಿಸುವುದು, ತಾತ್ವೀಕರಿಸುವುದು, ಅಧ್ಯಯನ ಶೋಧನೆಯ ಮುಖ್ಯ ಹಂತಗಳು. ಈ ನಿಟ್ಟಿನಲ್ಲಿ ಅಧ್ಯಯನ ಯಾವ ಹಂತ ತಲುಪಿದೆ ಎನ್ನುವುದನ್ನು ತಿಳಿಯುವ ಮೂಲಕ ಅದರ ಬೆಲೆ ಕಟ್ಟಲಾಗುತ್ತದೆ. ತಾತ್ವಿಕ ಸಮೀಕ್ಷೆ ಎಂದರೆ ಅಧ್ಯಯನಗಳ ದೃಷ್ಟಿಕೋನ, ಸ್ವರೂಪ, ತಿಳುವಳಿಕೆ ಹಾಗೂ ವಿಶ್ಲೇಷಣೆ, ವ್ಯಾಖ್ಯಾನಗಳ ಮಾದರಿಯನ್ನು ಅವಲೋಕಿಸಿ ಅವುಗಳಲ್ಲಿ ತಾಳುವ ನಿಲುವು ಯಾವುದು ಎಂಬ ಸಂಗತಿಗಳನ್ನು ಕಂಡುಕೊಳ್ಳುವುದಾಗಿದೆ.

ತತ್ವಪದಗಳ ಅಧ್ಯಯನ ದೃಷ್ಟಿಯಿಂದ ಮೊದಲ ಹಂತದಲ್ಲಿ ಅಧ್ಯಯನಕ್ಕೆ ಪೂರಕವಾದ ಆಕರಗಳ ಸಂಗ್ರಹ ಮತ್ತು ಕೃತಿಗಳ ಸಂಕಲನ ಕಾರ್ಯ ಹೆಚ್ಚಾಗಿ ನಡೆದಿದೆ. ಈ ಆಕರಗಳನ್ನು ಮತ್ತು ಕ್ಷೇತ್ರಕಾರ್ಯ ವಿವರಗಳನ್ನು ಬಳಸಿಕೊಂಡು ಬೇರೆ ಬೇರೆ ನೆಲೆಯ ಅಧ್ಯಯನಗಳು ನಡೆದಿವೆ. ಈ ಬಗೆಯ ಅಧ್ಯಯನದ ತಾತ್ವಿಕ ಸ್ವರೂಪ ಮತ್ತು ಧೋರಣೆಗಳನ್ನು ಸಮೀಕ್ಷಿಸುವುದು ಉಚಿತವಾಗಿದೆ. ಇದು ಈ ನಿಬಂಧದ ಬಹು ಮುಖ್ಯವಾದ ಭಾಗವೂ ಆಗಿದೆ. ಅಧ್ಯಯನಗಳ ತಾತ್ವಿಕ ಸಮೀಕ್ಷೆಯನ್ನು ಚರ್ಚೆಯ ಅನುಕೂಲಕ್ಕಾಗಿ ಐದು ಭಾಗಗಳಲ್ಲಿ ವಿಂಗಡಿಸಿಕೊಳ್ಳಲಾಗಿದೆ. ೧. ಸಂಗ್ರಹ ಮತ್ತು ಸಂಪಾದನೆಗಳು, ೨. ಸಂಪಾದನೆಯ ಪ್ರಸ್ತಾವನೆಗಳು, ೩. ವಿಮರ್ಶಾ ಲೇಖನಗಳು, ೪. ಸ್ವತಂತ್ರ ಅಧ್ಯಯನ ಕೃತಿಗಳು, ೫. ಪಿಎಚ್‌ಡಿ ಮಹಾಪ್ರಬಂಧಗಳು ಎಂದು ಈ ಹಿನ್ನೆಲೆಯಲ್ಲಿ ಚರ್ಚಿಸಲಾಗಿದೆ.

### ೪.೧. ಸಂಗ್ರಹ ಮತ್ತು ಸಂಪಾದನೆಗಳು

ವಚನ ಬಂಡಾರಿ 'ಶಾಂತರಸನ' ನೇತೃತ್ವದಲ್ಲಿ ೧೨ನೇ ಶತಮಾನದಲ್ಲಿ ವಚನಗಳ ಸಂಗ್ರಹಕಾರ್ಯ ನಡೆಯುತ್ತಿದ್ದಿತೆಂದು ಹೇಳಿದರೂ ಇದಕ್ಕೆ ಆಧಾರಗಳು ಇಲ್ಲ. ಆದರೆ ಕಲ್ಯಾಣದ ಅವನತಿಯಿಂದ

ಚೆಲ್ಲಾಪಿಲ್ಲಿಯಾದ ವಚನಗಳ ಸಂಗ್ರಹ, ಸಂಪಾದನೆಗಳು ೧೫ನೆಯ ಶತಮಾನದಲ್ಲಿ ಹೊರಬಂದವು. ಬಹಳ ದೊಡ್ಡ ಪ್ರಯತ್ನವೆಂಬಂತೆ 'ಸಕಲಪುರಾತನರ ವಚನ ಕಟ್ಟುಗಳು ಶೋಧನೆಯಾದವು. ಇಲ್ಲಿಂದ ಸಂಗ್ರಹ, ಸಂಕಲನ, ಸಂಪಾದನೆಗಳ ಪ್ರಯೋಗ ಶುರುವಾಯಿತೆಂದು ವಿದ್ವಾಂಸರು ಅಭಿಪ್ರಾಯಪಡುತ್ತಾರೆ. ಆದರೆ ಕನ್ನಡ ಸಾಹಿತ್ಯದ ಕ್ರಮ ಬದ್ಧವಾದ ಅಧ್ಯಯನ' ಶುರುವಾದದ್ದು ಮಾತ್ರ ಕಳೆದ ಶತಮಾನದ (೧೯ನೇ ಶತಮಾನ) ಆರಂಭದಲ್ಲಿ. ಈ ಮೊದಲು ಓದುವುದು, ಕೇಳುವುದು ವ್ಯಾಖ್ಯಾನಿಸುವುದು ಇತ್ತು. ಆದರೆ ಸಾಹಿತ್ಯದ ಅಧ್ಯಯನ ಒಂದು ಶೈಕ್ಷಣಿಕ ಶಿಸ್ತಾಗಿ ಬೆಳೆದದ್ದು ಮಾತ್ರ ಈ ಶತಮಾನದಲ್ಲಿಯೇ.

ಪಾಶ್ಚಿಮಾತ್ಯರು ಭಾರತದಲ್ಲಿ ಗ್ರಂಥಸಂಪಾದನೆಯ ಕಾರ್ಯವನ್ನು ಆರಂಭಿಸಿದರು. ಮೊದಲು ಕನ್ನಡ ಸಾಹಿತ್ಯದ ಅಧ್ಯಯನ ಗ್ರಂಥಸಂಪಾದನೆಯ ಮೂಲಕವೇ ಶುರುವಾಯಿತು. ಇಲ್ಲಿ ಪ್ರಾಚೀನ ಕೃತಿಗಳ ಹಸ್ತಪ್ರತಿಗಳನ್ನು ಸಂಪಾದಿಸಿ, ಪರಿಷ್ಕರಿಸಿ ಪ್ರಕಟಿಸುವುದು ಅಧ್ಯಯನದ ಉದ್ದೇಶವಾಗಿತ್ತು. ಭಾರತದಲ್ಲಿ ಎಡ್ಗರ್ಟನ್, ಮ್ಯಾಕ್ಸ್ ಮುಲ್ಲರ್, ಬ್ಯೂಲರ್ ಮೊದಲಾದವರು. ಪ್ರಾಚೀನ ಸಂಸ್ಕೃತ ಗ್ರಂಥಗಳ ಪರಿಷ್ಕರಣೆ ಕಾರ್ಯ ಕೈಗೊಂಡರು. ಪಾಶ್ಚಾತ್ಯ ಮಿಷನರಿಗಳೂ ಸೂಕ್ತ ತತ್ವಗಳನ್ನು ಅಳವಡಿಸಿಕೊಂಡು ಕನ್ನಡ ಗ್ರಂಥ ಸಂಪಾದನೆ ಮಾಡಿದರು. ಅವರಲ್ಲಿ ಮೆಕೆಂಜಿ, ಮೋಗ್ಲಿಂಗ್, ಡಬ್ಲ್ಯೂ.ಜಿ. ವರ್ತ್, ಸ್ಯಾಂಡರ್ಸನ್, ಜಿ.ಸ್ಟೀವನ್ಸನ್, ಎಫ್.ಕಿಟೆಲ್ ಮತ್ತು ಬಿ.ಎಲ್.ರೈಸ್ ಪ್ರಮುಖರು. ಹಳಗನ್ನಡ ಕಾವ್ಯಗಳನ್ನು ಪ್ರಕಟಿಸುವ ಅಭಿಲಾಷೆಯಿಂದ ಮೋಗ್ಲಿಂಗ್ 'ಬಿಬ್ಲಿಯೊಥಿಕಾ ಕರ್ನಾಟಕ' ಎಂಬಮಾಲೆಯನ್ನು ಆರಂಭಿಸಿದನು. ಇದು 'ಪ್ರಾಚೀನ ಕನ್ನಡ ಕಾವ್ಯ ಭಾಗಗಳ ಸಂಕಲನ'(೧೮೬೮) ಎಂಬ ಹೆಸರಿನಿಂದ ಪ್ರಕಟವಾಗಿತ್ತು. ಹಾಗೆಯೇ ಕಿಟೆಲ್ ಅವರು 'ಶಬ್ದಮಣಿ ದರ್ಪಣ' ಕೃತಿಯನ್ನು ಶಾಸ್ತ್ರೀಯ ರೀತಿಯಲ್ಲಿ ಸಂಪಾದಿಸಿ, ಸಂಪಾದನೆಯ ಹೊಸ ಕ್ರಮಕ್ಕೆ ನಾಂದಿ ಹಾಡಿದರು. ಕೀರ್ತನೆಗಳ ಸೊಗಸಿಗೆ ಮಾರು ಹೋದ ಪಾಶ್ಚಾತ್ಯ ವಿದ್ವಾಂಸರು ಕಳೆದ ಶತಮಾನದಲ್ಲಿಯೇ ದಾಸರ ಕೀರ್ತನೆಗಳನ್ನು ಪ್ರಕಟಿಸುವ ಮೂಲಕ ದಾಸಸಾಹಿತ್ಯ ಸಂಪಾದನೆಗೂ ಶ್ರೀಕಾರ ಹಾಡಿದರು. ಹೀಗೆ ಕಳೆದ ಶತಮಾನದಲ್ಲಿ ಭಾರತಕ್ಕೆ ಬಂದ ಮಿಷನರಿಗಳು ಮತ್ತು ಅಧಿಕಾರಿಗಳಿಂದಾಗಿ ಕನ್ನಡ ಸಾಹಿತ್ಯ ವಲಯದಲ್ಲಿ ಹೊಸ ಚೈತನ್ಯ ಉಂಟಾಯಿತು. ಬಾಸೆಲ್ ಮಿಷನರಿಗಳು ಕನ್ನಡಕ್ಕೆ ಸಲ್ಲಿಸಿದ ಸೇವೆ ಅಮೂಲ್ಯವಾದುದು. ಅದರಲ್ಲೂ ಕಿಟೆಲ್ ಮತ್ತು ರೈಸ್ ಗ್ರಂಥಸಂಪಾದನೆ ಶಾಸ್ತ್ರೀಯವಾಗಿ ಬೆಳೆಯಲು ಕಾರಣರಾದರು. ದೇಶೀಯ ವಿದ್ವಾಂಸರು ಇದರಲ್ಲಿ ಭಾಗಿಗಳಾಗಿದ್ದರು. ಇಲ್ಲಿಂದ ಇದು ದೀರ್ಘ ಇತಿಹಾಸವನ್ನು ಹೊಂದಿ ವಿಸ್ತಾರವಾಗಿ ಬೆಳೆದು ಬಂದಿದೆ. ಆಧುನಿಕ ಸಂದರ್ಭಗಳಲ್ಲಿ ಸೈದ್ಧಾಂತಿಕ ನೆಲೆಗಳನ್ನು ಕಂಡುಕೊಂಡಿದೆ.

ಕನ್ನಡ ಸಾಹಿತ್ಯ ಪರಿಷತ್ತು, ಕರ್ನಾಟಕ ಸಾಹಿತ್ಯ ಅಕಾಡೆಮಿ, ವಿಶ್ವವಿದ್ಯಾಲಯಗಳು, ವೀರಶೈವ ಮಠಗಳು, ಪ್ರತಿಷ್ಠಾನಗಳು(ಬಿ.ಎಂ.ಶ್ರೀ ಸ್ಮಾರಕ ಮುಂತಾದ), ಧರ್ಮಸ್ಥಳದ ಮಂಜೂಷದಂತ ಸಂಸ್ಥೆಗಳು, ಹಸ್ತಪ್ರತಿ ಸಂಗ್ರಹ, ಸಂರಕ್ಷಣೆ ಬಗ್ಗೆ ಕಾಳಜಿಯಿಂದ ಸ್ವಂತ ಹಸ್ತಪ್ರತಿ ಭಂಡಾರಗಳನ್ನು ನಿರ್ಮಿಸಿಕೊಂಡಿವೆ.

ಇಲ್ಲಿನ ಹಸ್ತಪ್ರತಿಗಳ ನೆರವಿನಿಂದ ಅನೇಕ ಗ್ರಂಥ ಸಂಪಾದನೆಗಳು ಹೊರಬಂದಿವೆ. ಕನ್ನಡ ಶ್ರೇಷ್ಠ ಕವಿಗಳ ಅತ್ಯುತ್ತಮ ಕೃತಿಗಳೆಲ್ಲ ಪರಿಷ್ಕಾರಗೊಂಡು ಪ್ರಕಾಶನಗೊಂಡಿವೆ. ಶರಣರ ಸಮಗ್ರ ವಚನ, ಸಂಪುಟಗಳು, ತತ್ವಪದಗಳು, ಪ್ರಾಚೀನ ವ್ಯಾಕರಣ, ಛಂದಸ್ಸು, ನಿಘಂಟಿಗೆ ಸಂಬಂಧಿಸಿದ ಬಹುಪಾಲು ಕೃತಿಗಳು ಸಂಪಾದಿತವಾಗಿವೆ. ಕೆಲವು ಮತ್ತೆ ಮತ್ತೆ ಪ್ರಕಟವಾಗಿವೆ. ಆಧುನಿಕ ಸಂದರ್ಭದಲ್ಲಿ ಸಂಪಾದನೆಗಳು ಅನೇಕ ಸೈದ್ಧಾಂತಿಕ ನೆಲೆಯಲ್ಲಿ ನಡೆದಿವೆ. ಆಧುನಿಕ ಸಾಹಿತ್ಯದ ಪ್ರಭಾವಕ್ಕೆ ಒಳಗಾದ ಮನಸ್ಸಂತೂ ತನ್ನ ನಿಲುವಿಗೆ ಅಗತ್ಯವೆನಿಸುವ ಅಂಶಗಳ ಕಡೆಗೇ ಗಮನ ಹರಿಸಿ ಸಂಪಾದನೆ ಮಾಡಿದೆ.

ಗ್ರಂಥಸಂಪಾದನೆಶಾಸ್ತ್ರದ ಗರಡಿಯಿಂದ ಪಳಗಿ ಬಂದ ಆಧುನಿಕ ವಿದ್ವಾಂಸರು ತತ್ವಪದಗಳಂತ ಮೌಖಿಕ/ಜನಪದ ರಚನೆಗಳನ್ನು ಇದೇ ಶಿಸ್ತಿನ ನೆಲೆಯಲ್ಲಿ ನೋಡಿದರು. ಮೌಖಿಕ ಸಾಹಿತ್ಯವನ್ನು ಸಂಪಾದಿಸುವಾಗ ಅದನ್ನು ಶುದ್ಧೀಕರಿಸಿ ಪ್ರಕಟಿಸುವ ಹಠ ತೋರಿದರು. ಇದು ಹಾಡುಗಳ ಜನಪದ ಸಂವೇದನೆ, ಮತ್ತು ತಮ್ಮ ಒಡಲೊಳಗೆ ಕಾಪಿಟ್ಟುಕೊಂಡು ಬಂದ ಜನಸಮುದಾಯಗಳ ಸಂವೇದನೆಗೆ ವಿರುದ್ಧವಾದುದು. ಶತಶತಮಾನಗಳಷ್ಟು ಕಾಲ ಕನ್ನಡ ಜನಸಮುದಾಯ ಈ ರಚನೆಗಳನ್ನು ಕಾಪಾಡಿಕೊಂಡು ಬಂದಿದೆ. ಹಾಗೇ ಬರುವುದಕ್ಕೆ ಬೇರೆ-ಬೇರೆ ಕಾರಣಗಳೂ ಇವೆ.

'ಧರ್ಮ ಪ್ರತಿಪಾದನೆಯೆಂದು, ಶಾಸ್ತ್ರ ನಿರೂಪಣೆಯೆಂದು, ಕಾವ್ಯಾತ್ಮಕವೆಂದು, ಸಾಮಾಜಿಕ ಹೋರಾಟದ ಭಾಷಿಕ ಪ್ರತಿಫಲನವೆಂದು, ಅಧ್ಯಾತ್ಮ ಸಾಧನೆಯ ತೋರು ಕುರುಹುಗಳೆಂದು, ವೈಯಕ್ತಿಕ ತೊಳಲಾಟ ಹುಡುಕಾಟಗಳ ದಾಖಲೆಗಳೆಂದು, ಚಾರಿತ್ರಿಕ ಆಕರಗಳೆಂದು ಇತ್ಯಾದಿಯಾಗಿ ತಮ-ತಮಗೆ ಮುಖ್ಯವೆಂದು ತೋರುವ ಕಾರಣಕ್ಕೆ ವಚನಗಳನ್ನು ಗಮನಿಸಬೇಕೆಂದು ಬಯಸುವ ಮನಸ್ಸುಗಳು ವಚನಗಳನ್ನು ತಮ್ಮ ಉದ್ದೇಶಕ್ಕೆ ಅನುಗುಣವಾಗಿ ಸಂಗ್ರಹಿಸಿ ನಮ್ಮ ಕಾಲದವರೆಗೆ ತಲುಪಿಸಿದ್ದಾರೆ.'[೧] ವಚನಗಳನ್ನು ಕುರಿತು ಓ.ಎಲ್.ನಾಗಭೂಷಣಸ್ವಾಮಿ ಅವರು ಹೇಳುವ ಈ ಮಾತುಗಳನ್ನು ತತ್ವಪದಗಳಿಗೂ ಅನ್ವಯಿಸಬಹುದು. ಇದೆಲ್ಲ ಯಾಕೆ ಚರ್ಚಿಸಬೇಕಾಯಿತೆಂದರೆ ಅನೇಕ ತತ್ವಪದ ಸಂಗ್ರಹ. ಸಂಕಲನಗಳು ಹಸ್ತಪ್ರತಿ ಮತ್ತು ಮೌಖಿಕ ಹಿನ್ನೆಲೆಯಲ್ಲಿ ಸಂಪಾದಿಸಿದ್ದಾಗಿವೆ. ಹಸ್ತಪ್ರತಿಗಳ ನೆರವಿನಿಂದ ಸಾಮಾನ್ಯವಾಗಿ ನಾಡಿನ ವೀರಶೈವ ಮಠಗಳು ಹೆಚ್ಚಾಗಿ ಪ್ರಕಟಿಸಿವೆ. ವಿಶ್ವವಿದ್ಯಾಲಯಗಳು, ಅಕಾಡೆಮಿ, ಪರಿಷತ್ತು ಕೂಡ ಈ ನೆಲೆಯ ಸಂಪಾದನೆಗಳನ್ನು ಮಾಡಿವೆ. ಮಠಗಳು ಮತ್ತು ವಿಶ್ವವಿದ್ಯಾಲಯಗಳು ಸ್ವರವಚನಗಳೆಂದು ಹೆಚ್ಚಾಗಿ ಪ್ರಕಟಿಸಿವೆ. ಅಕಾಡೆಮಿ, ಪರಿಷತ್ತು ಇತರೆ ಜನಪ್ರಿಯ ಪ್ರಕಾಶಕರು ಅವುಗಳನ್ನು ತತ್ವಪದ ಅನುಭಾವಪದಗಳು, ಭಜನೆಪದಗಳು, ಕೈವಲ್ಯಪದ ಹೀಗೆ ವಿವಿಧ ಹೆಸರುಗಳಲ್ಲಿ ಪ್ರಕಟಿಸಿರುವುದು ಕಾಣುತ್ತೇವೆ. ಅಲ್ಲದೆ ಅಕಾಡೆಮಿ, ಪರಿಷತ್ತು, ಮಠಗಳು, ಜನಪ್ರಿಯ ಪ್ರಕಟಣೆಕಾರರೆಲ್ಲರೂ ಮೌಖಿಕ ವಾಗಿರುವ ತತ್ವಪದ ಹಾಡುಗಳನ್ನು ಸಂಗ್ರಹಿಸಿರುವುದೂ ಕಂಡುಬರುತ್ತದೆ. ಇವುಗಳನ್ನು ಸಂಪಾದಿಸುವಾಗ ತಮ್ಮ ಮೂಲ ಉದ್ದೇಶದ ಪರಿಕಲ್ಪನೆಯನ್ನು ಅಳವಡಿಸಿಕೊಂಡಿದ್ದಾರೆ. ತತ್ವಪದಗಳು ಹೆಚ್ಚಾಗಿ

ಮೌಖಿಕವಾಗಿದ್ದು, ಅವುಗಳ ಅಸ್ತಿತ್ವ ಜನಸಮುದಾಯಗಳಲ್ಲಿದೆ. ತತ್ವಪದಗಳನ್ನು ಅವರು ತಮ್ಮದೇ ಆದ ಲಯ, ದಾಟಿಯಲ್ಲಿ ಹಾಡುತ್ತಾರೆ. ಅವರಿಗೆ ತತ್ವ ತಿರುಳು ಮುಖ್ಯವೇ ಹೊರತು ಬೇರಾವುದು ಅಲ್ಲ. ಹೀಗಾಗಿ ಸಂಗ್ರಹಕಾರರು ಅವುಗಳನ್ನು ಪರಿಷ್ಕರಿಸಿ ಬೇಕಾಗದ ಶಿಸ್ತನ್ನು ಹೇರಿ ಸಂಗ್ರಹ, ಸಂಪಾದನೆ ಮಾಡಿರುವುದು ಕಂಡುಬರುತ್ತದೆ. ಹಾಗೆಯೇ ವರ್ತಮಾನದ ಒತ್ತಡಗಳೂ ಪ್ರಸ್ತುತ ಸಂಕಲನಗಳ ಹಿಂದೆ ಕೆಲಸ ಮಾಡಿರುವಂತೆ ತೋರುತ್ತದೆ. ಆದರೆ ಯಾವುದೇ ಬಂಧ-ನಿರ್ಬಂಧಗಳಿಲ್ಲದೇ ಮುಕ್ತವಾಗಿರುವ, ಬಯಲು ಸ್ವರೂಪದ ಈ ತತ್ವಪದಗಳನ್ನು ಇಂದು ಅನೇಕ ಬಗೆಯ ಬಂಧಗಳಲ್ಲಿ ಬಂಧಿಸಲಾಗಿದೆ. ಅವುಗಳನ್ನು ಒಂದು ನಿರ್ದಿಷ್ಟ ಮಿತಿಗೆ ತರ್ಕಕ್ಕೆ, ತಾತ್ವಿಕತೆಗೆ ಒಳಪಡಿಸುವ ಕಾರ್ಯ ನಡೆದಿದೆ. ಇದರಿಂದ ಒಂದು ನಿರ್ದಿಷ್ಟ ಓದು, ಗ್ರಹಿಕೆ, ಅರ್ಥ ಮತ್ತು ಅಧ್ಯಯನ ಸೃಷ್ಟಿಯಾಗಿ ಇವು ಸೀಮಿತಗೊಂಡಿವೆ ಎನ್ನುವ ಆರೋಪಗಳಿವೆ. ಟಿ.ಆರ್.ಚಂದ್ರಶೇಖರ ಅವರು ಹೇಳುವಂತೆ 'ಅರ್ಥವೆನ್ನುವುದು ಸ್ಥಿರವಾದ ಅಥವಾ ಸಿದ್ಧವಾದ ಸಂಗತಿಯಲ್ಲ ಅದನ್ನು ಓದುಗರು ಪ್ರತಿಕ್ಷಣದಲ್ಲಿ ಕಂಡುಕೊಳ್ಳುತ್ತಾರೆ ಅಥವಾ ಕಟ್ಟುತ್ತಿರುತ್ತಾರೆ'[೨] ಹಾಗಾಗಿ ತತ್ವಪದಗಳು ಮಿತಿಗಳನ್ನು ಮೀರಿ ಓದುಗರಿಗೆ ಸಲ್ಲುವ ಅನೇಕ ಸಾಧ್ಯತೆಗಳನ್ನು ಅವು ಆಂತರ್ಯದಲ್ಲೇ ಹುದುಗಿಸಿಟ್ಟುಕೊಂಡಿವೆ.

ಅಧ್ಯಯನದ ಅನುಕೂಲಕ್ಕೆಂದು ಸಂಗ್ರಹಗಳು. ಬೋಧಿಸುವ ಅನುಕೂಲಕ್ಕೆ ಆಯ್ದ ಭಾಗಗಳು ರೂಢಿಗೆ ಬಂದಿವೆ. ತತ್ವಪದಕಾರರ, ಅವಧೂತರ, ಸಿದ್ಧಸಂತರ, ಅನುಭಾವಿಗಳ ಇಂಥ ರಚನೆಗಳನ್ನು ಸಂಗ್ರಹ, ಸಂಪಾದನೆ ಮಾಡುವ ಮೂಲಕ ಅವರ ಜೀವನ-ಚಾರಿತ್ರಿಕ ಘಟನೆ, ಸಮಕಾಲೀನ ಬದುಕಿನ ಅನುಭವ, ಅನುಭಾವವನ್ನು ಅವರ ವಾಕ್ಯಾಮೃತದಿಂದ ಜನರಿಗೆ ತಿಳಿಸುವುದು ಈ ಸಂಪಾದನೆಗಳ ಮಹತ್ವದ ಕೆಲಸವಾಗಿದ್ದಂತೆ ತೋರುತ್ತದೆ.

ತತ್ವಪದಗಳ ಕುರಿತ ಸಾಕಷ್ಟು ಸಂಗ್ರಹ-ಸಂಪಾದನೆಗಳು ಹೊರಬಂದಿವೆ. ಹೀಗಾಗಿ ಇಲ್ಲಿ ಪ್ರಾತಿನಿಧಿಕ ಸಂಗ್ರಹ-ಸಂಪಾದನೆಗಳನ್ನು ಅನುಲಕ್ಷಿಸಿ ಚರ್ಚಿಸಲಾಗಿದೆ. ಇಲ್ಲಿ ತೆಗೆದುಕೊಂಡ ಕೃತಿಗಳ ಮೂಲಕವೇ ಒಟ್ಟು ಈ ಸಂಪಾದನೆ-ಸಂಗ್ರಹಗಳ ಹಿಂದಿನ ಧೋರಣೆ-ಉದ್ದೇಶಗಳನ್ನು, ಸ್ವರೂಪವನ್ನು ಸಮೀಕ್ಷಿಸಲಾಗಿದೆ. ಅಧ್ಯಯನದ ಅನುಕೂಲಕ್ಕಾಗಿ ಪ್ರಕಾಶನದ ಹಿನ್ನೆಲೆಯಲ್ಲಿ ಅವುಗಳನ್ನು ನಾಲ್ಕು ಹಂತಗಳಲ್ಲಿ ವಿಂಗಡಿಸಿಕೊಳ್ಳಲಾಗಿದೆ.

೧. ವೀರಶೈವ ಮಠಗಳು

೨. ಸಾಹಿತ್ಯ ಪರಿಷತ್ತು ಮತ್ತು ಸಾಹಿತ್ಯ ಅಕಾಡೆಮಿಗಳು

೩. ವಿಶ್ವವಿದ್ಯಾಲಯಗಳು

೪. ಜನಪ್ರಿಯ ಪ್ರಕಟಣೆಗಳು

### ೪.೧.೧. ವೀರಶೈವ ಮಠಗಳು

ಕನ್ನಡ ಸಾಹಿತ್ಯ ಕೃತಿಗಳ ಪ್ರಕಟಣೆ ಕಾರ್ಯವನ್ನು ನಾಡಿನ ವೀರಶೈವ ಮಠಗಳು ನೋಂಪಿಯಂತೆ ಕೈಗೊಂಡಿವೆ. ವೀರಶೈವ ಸಂಸ್ಕೃತಿಯ ಸಮಸ್ತ ಮುಖಗಳ ಅಧ್ಯಯನ, ಪ್ರಕಟಣೆ ಇವುಗಳ ಮೂಲ ಉದ್ದೇಶವಾಗಿದೆ. ನಾಡಿನ ಸಾಂಸ್ಕೃತಿಕ ಶ್ರೀಮಂತಿಕೆಯನ್ನು ಪುಸ್ತಕ ಪ್ರಕಟಣೆಗಳ ಮೂಲಕ ತೋರಿಸಿಕೊಡಲಾಗುತ್ತದೆ. ಪುಸ್ತಕಗಳ ಪ್ರಕಟಣೆ, ಪ್ರಸಾರವನ್ನು ವೀರಶೈವ ಚಟುವಟಿಕೆಗಳ ಸಾಂಸ್ಕೃತಿಕ ಭಾಗವೆಂದು ತಿಳಿದಿವೆ. ಈ ನಿಟ್ಟಿನಲ್ಲಿ ಗದುಗಿನ ಶ್ರೀ ತೋಂಟದಾರ್ಯ ಸಂಸ್ಥಾನ ಮಠದ 'ವೀರಶೈವ ಅಧ್ಯಯನ ಸಂಸ್ಥೆ' ಸಮಗ್ರ ವೀರಶೈವ ಅಪ್ರಕಟಿತ ಪ್ರಾಚೀನ ಸಾಹಿತ್ಯ ಪ್ರಕಟಣಾ ಯೋಜನೆ'ಯ ಮೂಲಕ ಅನೇಕ ಸ್ವರವಚನ (ತತ್ವಪದಗಳ) ಕೃತಿಗಳನ್ನು ಹೊರತಂದಿದೆ. ಮೈಸೂರಿನ ಸುತ್ತೂರು ಮಠವು 'ಸಾಹಿತ್ಯ ದಾಸೋಹ'ದ ಫಲವಾಗಿ 'ಜಗದ್ಗುರು ಶ್ರೀ ಶಿವರಾತ್ರೀಶ್ವರ ಗ್ರಂಥಮಾಲೆ'ಯ ಮೂಲಕ ಸಾಹಿತ್ಯ ಪ್ರಕಟಣೆಯ ಕಾರ್ಯವನ್ನು ಕೈಗೊಂಡಿದೆ. ಅಪ್ರಕಟಿತ ರೂಪದಲ್ಲಿರುವ ಲಿಖಿತ ಮತ್ತು ಮೌಖಿಕ ಪರಂಪರೆಯ ಅನೇಕ 'ಸ್ವರವಚನ ಸಂಕಲನಗಳು, ಇತರೆ ಸಂಕಲನಗಳು ಹೊರಬಂದಿವೆ. ಉಪೇಕ್ಷೆಗೆ ಒಳಗಾದ ಶರಣರ ಸಾಹಿತ್ಯವನ್ನು ಪ್ರಕಟಿಸುವ ಮೂಲಕ ಅದಕ್ಕೆ ಆ ಕೊರತೆಯನ್ನು ನೀಗಿಸಿದ ಸಮಾಧಾನವಿದೆ. ಹಾಗೆಯೇ ಬೆಂಗಳೂರಿನ ಸರ್ಪಭೂಷಣ ಮಠದ ಟ್ರಸ್ಟ್, ಧಾರವಾಡದ ಹಾವೇರಿಪೇಟೆ ಮುರುಘಾಮಠ, ಶಿವಮೊಗ್ಗದ ಆನಂದಪುರ ಮಲೆನಾಡ ವೀರಶೈವ ಅಧ್ಯಯನ ಸಂಸ್ಥೆ, ಮುರುಘರಾಜೇಂದ್ರ ಸಂಸ್ಥಾನಮಠ, ಶ್ರೀ ತರಳಬಾಳು ಪ್ರಕಾಶನ ಸಿರಿಗೆರೆ ಮುಂತಾದವು ಮಹತ್ವದವಾಗಿವೆ.

ಗದಗಿನ ಶ್ರೀ ತೊಂಟದಾರ್ಯಮಠವು 'ಸಮಗ್ರ ವೀರಶೈವ ಅಪ್ರಕಟಿತ ಪ್ರಾಚೀನ ಸಾಹಿತ್ಯ ಪ್ರಕಟಣಾ ಮಾಲೆ'ಯ ಮೂಲಕ ವೀರಶೈವ ಸಾಹಿತ್ಯದಲ್ಲಿ ಉಪೇಕ್ಷೆಗೆ ಗುರಿಯಾದ, ಬೆಳಕಿಗೆ ಬಾರದಿರುವ ಸಾಹಿತ್ಯವನ್ನು ವಿವಿಧ ಯೋಜನೆಗಳಲ್ಲಿ ಒಂದು ವ್ಯವಸ್ಥಿತ ರೀತಿಯಲ್ಲಿ ಅಕಾಡೆಮಿಕ್ ಆದ ರೀತಿಯಲ್ಲಿ ಹೊರತರುತ್ತಿದೆ. ಇದೊಂದು ಸಾಂಸ್ಕೃತಿಕ ಚುಟವಟಿಕೆಯಾಗಿ ಶ್ರದ್ಧೆಯಿಂದ ಮಾಡುತ್ತಾ ಬರುತ್ತಿದೆ. ಈಗಾಗಲೇ 'ಕಡಕೋಳ ಮಡಿವಾಳೇಶ್ವರ ವಿರಚಿತ ಸ್ವರವಚನಗಳು, ಕೆಸ್ತೂರ ದೇವರ ಸ್ವರವಚನಗಳು, ಕೂಡಲೂರ ಬಸವಲಿಂಗ ಶರಣರ ಸ್ವರವಚನಗಳು, ಜಿಗುನಿ ಮರಳದೇವರ ಕೃತಿಗಳು, ಮೈಲಾರ ಬಸವಲಿಂಗ ಶರಣರ ಸಮಗ್ರ ಸಾಹಿತ್ಯ (ಪುರಾತನ ಸಾಹಿತ್ಯ ರತ್ನಮಾಲೆ ಮೂಲಕ), ಗುರುಬಸವಾರ್ಯನ ಸ್ವರವಚನಗಳು, ಹಾಗಲವಾಡಿ ಮುದ್ವೀರ ಸ್ವಾಮಿಯ ಸ್ವರವಚನಗಳು, ಶಂಕರದೇವರ ಸ್ವರವಚನಗಳು, ಮರಿಶಾಂತ ಬಸವದೇವರ ಸ್ವರವಚನಗಳು, ಸ್ವರವಚನವಾಹಿನಿ(ಸಂಪುಟ - ೧ ಮತ್ತು ೨), ರಾಮಪುರ ಬಕ್ಕಪ್ಪಯ್ಯ ಸ್ವರವಚನತಿವಿಧಿ, ನೀರಲಕೆರೆ ಶರಣರ ಸ್ವರವಚನಗಳು ಮುಂತಾದವು ಹೊರಬಂದಿವೆ. ಕೆಲವು ಕೃತಿಗಳನ್ನು ಇಲ್ಲಿ ಪರಿಶೀಲಿಸಲಾಗಿದೆ.

ಎಂ.ಎಸ್.ಲಠ್ಠೆಯವರ 'ಕಡಕೋಳ ಮಡಿವಾಳೇಶ್ವರ ವಿರಚಿತ ಸ್ವರವಚನಗಳು'(೧೯೮೨) ಕೃತಿಯಲ್ಲಿ ಸು.೩೧೦ ಹಾಡುಗಳನ್ನು ಸಂಗ್ರಹಿಸಿದ್ದಾರೆ. ಓದುಗರ ಅನುಕೂಲಕ್ಕಾಗಿ ಈ ಹಾಡುಗಳನ್ನು ಪ್ರಾರ್ಥನೆ, ವಿಡಂಬನೆ, ತತ್ವಸಿದ್ಧಾಂತ, ಮಂಗಳಾರತಿ ಎಂದು ನಾಲ್ಕು ಭಾಗಗಳಲ್ಲಿ ವಿಂಗಡಿಸಿದ್ದಾರೆ.

ಪ್ರಸ್ತಾವನೆಯಲ್ಲಿ ಸ್ವರವಚನಗಳ ಲಕ್ಷಣ, ವೈಶಿಷ್ಟ್ಯವನ್ನು ಹೇಳಿದ್ದಾರೆ. ಜೊತೆಗೆ ಮಡಿವಾಳೇಶ್ವರರ ಜೀವನ ಚರಿತ್ರೆ, ದೀಕ್ಷೆ, ಗುರುಪರಂಪರೆ, ಶಿಷ್ಯಸಮೂಹ ಮುಂತಾದವುಗಳನ್ನು ಪರಿಚಯಿಸಿದ್ದಾರೆ. ಹಾಡುಗಳು ಹುಟ್ಟಿಕೊಂಡು ಬಂದ ಸಂದರ್ಭ ಸನ್ನಿವೇಶಗಳನ್ನು ಸ್ಪಷ್ಟಪಡಿಸಿದ್ದಾರೆ. ಉದಾಹರಣೆಗೆ ಶಿಷ್ಯನಾದ ಗಂಹಾರಶಾಸ್ತ್ರೀ ಮಡಿವಾಳಪ್ಪನವರನ್ನು ಕಾಣಲು ಬಂದಾಗ ಮಡಿವಾಳಪ್ಪನವರು ಕುರುಳು ಬಡಿಯುತ್ತಿದ್ದ ಪ್ರಸಂಗ ಭಕ್ತನ ಮನೆಗೆ ಊಟಕ್ಕೆ ಹೋದ ಪ್ರಸಂಗ, ಮಡಿವಾಳಪ್ಪನವರ ಅಯ್ಯಾಚಾರ ವಿರೋಧಿಸಿದ ಹಳಪ್ಯಾಟಿ ಬಸಯ್ಯನ ಪ್ರಸಂಗ ಕುರಿತು ವಿಶ್ಲೇಷಿಸಿದ್ದಾರೆ. ಜಾತೀಯತೆಯ ಪರಿಧಿಗೆ ಸಿಕ್ಕು ಡಂಭಾಚಾರದ ಜೀವನವನ್ನು ಸಾಗಿಸುವ ಲೋಕದ ಜನರನ್ನು ವಿಡಂಬನೆಯ ಮೂಲಕ ಎಚ್ಚರಿಸಿದ ಇಂಥ ಅನೇಕ ಸಂದರ್ಭಗಳನ್ನು ವಿಡಂಬನೆ ಭಾಗದಲ್ಲಿ ಸಂಕಲಿಸಿದ್ದಾರೆ.

ಬಹುಮುಖ್ಯ ವ್ಯಕ್ತಿತ್ವದ ಮಡಿವಾಳಪ್ಪನವರ ಜೀವನದ ಘಟನೆಗಳನ್ನು ಸುಂದರವಾಗಿ ಕಲೆ ಹಾಕಿದ್ದಾರೆ. ಇದನ್ನು 'ಕೈವಲ್ಯ ವಾಕ್ಯಾಮೃತ' ಕೃತಿಯಿಂದ ಆಯ್ದುಕೊಂಡು ಪರಿಚಯಿಸಲಾಗಿದೆ. ಶಾಸ್ತ್ರೀಯವಾದ ಸಂಪಾದನೆಯಲ್ಲಿ ಪಾಠಗಳನ್ನು ನಿರ್ದರಿಸಿ ಪಾಠಾಂತರಗಳನ್ನು ಒದಗಿಸಿ, ಪೀಠಿಕೆಗಳನ್ನು ಬರೆದು ಅಗತ್ಯವಿದ್ದಲ್ಲಿ ಟಿಪ್ಪಣಿ ವ್ಯಾಖ್ಯಾನಗಳನ್ನು ನೀಡಿ, ಅರ್ಥಕೋಶಗಳನ್ನು ಒದಗಿಸಿ, ಬೆಳಕಿಗೆ ತರುವುದೇ ಸಂಪಾದನೆಯಾಗಿದೆ. ಈ ಕೃತಿಯು ಇದನ್ನು ಅನುಸರಿಸಿದೆ. ಈ ಕೃತಿಯ ಕೊನೆಯಲ್ಲಿ ಓದುಗರ ಸಹಾಯಕ್ಕೆ ಅರ್ಥಕೋಶ ಕೊಟ್ಟಿಲ್ಲದಿರುವುದು ಒಂದು ಕೊರತೆಯಾಗಿದೆ. ಪ್ರಾದೇಶಿಕ ಭಾಷೆಯು ಈ ಹಾಡುಗಳಲ್ಲಿರುವುದರಿಂದ ಇತರೆ ಪ್ರದೇಶದ ಓದುಗರಿಗೆ ಅರ್ಥವಾಗುವುದಿಲ್ಲ. ಈ ಕಾರಣವಾಗಿ ಅರ್ಥಕೋಶ ಅವಶ್ಯವಾದುದು. ಹಾಡುಗಳ ವರ್ಣಾನುಕ್ರಮಣಿಕೆಯೂ ಕೊಡಬೇಕಾಗಿತ್ತು. ಇಂಥ ಒಂದೆರಡು ದೋಷಗಳು ಈ ಕೃತಿಯಲ್ಲಿ ಕಾಣಿಸಿವೆ.

ವೀರಣ್ಣ ರಾಜೂರ ಅವರ 'ಹಾಗಲವಾಡಿ ಮುದ್ದೀರಸ್ವಾಮಿಯ ಸ್ವರವಚನಗಳು(೧೯೮೬)' ಕೃತಿಯು ಗದಗದ ವೀರಶೈವ ಅಧ್ಯಯನ ಸಂಸ್ಥೆಯಿಂದ ಪ್ರಕಟವಾದ 'ಪ್ರಾಚೀನ ಸಾಹಿತ್ಯ ಮಾಲೆಯ' ೧೯ನೆಯ ಕೃತಿಯಾಗಿದೆ. ಇದರಲ್ಲಿ ೧೦೭ ಸ್ವರವಚನಗಳು ಮತ್ತು ಒಂದು ವಚನ (ಶಾಂಭವೀ ನಿರ್ಣಯದ ವಚನ) ಸೇರಿಸಿ ಒಟ್ಟು ೧೦೮ ಸ್ವರವಚನಗಳನ್ನು ಸಂಕಲಿಸಲಾಗಿದೆ. ಇವುಗಳನ್ನು ವಿವಿಧ ಹಸ್ತಪ್ರತಿ(ತಾಮ್ರಪತ್ರ, ಕಾಗದಪ್ರತಿ, ಓಲೆಪ್ರತಿ)ಗಳ ನೆರವಿನಿಂದ ಸಂಗ್ರಹಿಸಿ ಪರಿಷ್ಕರಿಸಿ ಕೊಡಲಾಗಿದೆ. ಹಾಡುಗಳ ಅಡಿಯಲ್ಲಿ ಪರಿಷ್ಕರಣೆಯ ವಿವರ ನೀಡಲಾಗಿದೆ. ರಾಗ-ತಾಳಗಳ ಸೂಚನೆಯೂ ಇದೆ. ವಿವಿಧ ಶೀರ್ಷಿಕೆಗಳ ನೆಲೆಯಲ್ಲಿ ಇಲ್ಲಿನ ಹಾಡುಗಳು ಇವೆ. ಆಕರಗಳ ಪರಿಷ್ಕರಣೆಯ ಸಮಗ್ರ ವಿವರ ಮೊದಲಿಗೆ

ನೀಡಿರುವುದು ಸಂಪಾದನೆಯ ಶಾಸ್ತ್ರೀಯ ಮಾದರಿಯೆನಿಸಿದೆ. ಅನುಬಂಧದಲ್ಲಿ ಸ್ವರವಚನಗಳ ಅಕಾರಾದಿ, ರಾಗ-ತಾಳಗಳ ಅಕಾರಾದಿ ಪಾರಿಭಾಷಿಕ ಪದಕೋಶ, ಕಠಿಣ ಪದಕೋಶ, ಒಪ್ಪೋಲೆ ಮುಂತಾದ ಅಂಶಗಳು ಕೃತಿಯ ಓದುಗರಿಗೆ ಉಪಯುಕ್ತವಾಗಿವೆ. ಪ್ರಸ್ತಾವನೆಯಲ್ಲಿ ಹಾಗಲವಾಡಿ ಪಾಳೆಗಾರರ ಸಂಕ್ಷಿಪ್ತ ಮತ್ತು ವಿವರವಾದ ರಾಜಕೀಯ ಸಾಂಸ್ಕೃತಿಕ ವಿವರಗಳನ್ನು ಚರ್ಚಿಸಿದ್ದಾರೆ. ಹಾಗಲವಾಡಿಯ ರಾಜಗುರುವಾಗಿ ಮುದ್ದೀರಸ್ವಾಮಿಯು ಅನೇಕ ಕೃತಿಗಳನ್ನು ರಾಜನ ಆಶ್ರಯದಲ್ಲಿದ್ದು ಬರೆದಿದ್ದು ಕುರಿತಂತೆ ಮತ್ತು ಹಾಗಲವಾಡಿ ಮುದ್ದೀರಸ್ವಾಮಿಯ ಜೀವನ ವೃತ್ತಾಂತ, ಕಾಲ, ದೇಶ ಕುರಿತೂ ಚರ್ಚಿಸಿದ್ದಾರೆ. ತೋಂಟದ ಸಿದ್ಧಲಿಂಗ ಪರಂಪರೆಗೆ ಸೇರಿದ ಮುದ್ದೀರಸ್ವಾಮಿಯ ಕಾಲವನ್ನು ಕವಿಚರಿತೆ ಮುಂತಾದ ಆಕರಗಳಿಂದ ಸು.೧೭೦೦-೧೭೭೦ ಎಂದು ನಿರ್ಣಯಕ್ಕೆ ಬಂದಿದ್ದಾರೆ. ನೀತಿಪ್ರತಿಪಾದನೆ, ತತ್ವಪ್ರತಿಪಾದನೆ ಇವರ ಸಾಹಿತ್ಯದ ಮುಖ್ಯ ತಿರುಳು ಎಂದು ಗುರುತಿಸಿದ್ದಾರೆ. ವಸ್ತುವೈವಿಧ್ಯ, ರೂಪವೈವಿಧ್ಯ, ಗೇಯತೆ, ನಿರಾಡಂಬರತೆ, ನಿರರ್ಗಳತೆ, ಭಾವದ ಉತ್ಕಟತೆ ಮುಂತಾದವು ಅನುಭಾವಿ ಕವಿ ಮುದ್ದೀರಸ್ವಾಮಿಯ ಸ್ವರವಚನಗಳ ವೈಶಿಷ್ಟ್ಯವನ್ನು ಎತ್ತಿ ತೋರಿಸುತ್ತವೆ ಎಂದಿದ್ದಾರೆ. ಆದರೆ ಈ ಕುರಿತ ವಿಶ್ಲೇಷಣೆಯನ್ನು ಅವರು ಮಾಡಿಲ್ಲ. ನಮ್ಮ ಪ್ರಾಚೀನ ಕವಿಗಳಾದ ಪಂಪ, ರನ್ನ, ಪೊನ್ನ, ಜನ್ನ ಮುಂತಾದವರಂತೆ ಈ ಮುದ್ದೀರಸ್ವಾಮಿಯು ರಾಜನ/ಪಾಳೆಗಾರನ ಆಶ್ರಯದಲ್ಲಿ ಇದ್ದವರು. ಆದ್ದರಿಂದ ಸಹಜವಾಗಿಯೇ ಇವರ ರಚನೆಗಳಲ್ಲಿ ಆಶ್ರಯದಾತರ ಕುರಿತ ನಿಲುವುಗಳೇನು? ಎಂಬುದು ಪ್ರಶ್ನೆಯಾಗುತ್ತದೆ. ನೀತಿ, ತತ್ವಬೋಧನೆ ಇವರಿಗೆ ಮುಖ್ಯವಾಗಿತ್ತೆ ಎಂಬ ಪ್ರಶ್ನೆಯೂ ಏಳುತ್ತದೆ.

ಎಸ್.ವಿದ್ಯಾಶಂಕರ ಅವರು ಸಂಪಾದಿಸಿದ 'ಜಿಗುನಿ ಮರುಳದೇವರ ಕೃತಿಗಳು' ಇದನ್ನು ೧೯೮೩ರಲ್ಲಿ ಪ್ರಕಟಿಸಲಾಗಿದೆ. ತೋಂಟದ ಸಿದ್ಧಲಿಂಗಯತಿ ಪರಂಪರೆಗೆ ಸೇರಿದ ಜಿಗುನಿ ಮರುಳದೇವರು ರಚಿಸಿರುವ ೧೫೬ ಸ್ವರವಚನಗಳು, ೧೩೫ ಕಂದಪದ್ಯಗಳು ಮತ್ತು ಚಿತ್ಕ್ರಿಯಾಸಂಗ್ರಹ ಎಂಬ ಕೃತಿ ಇಲ್ಲಿ ಒಂದು ಸಂಪುಟವಾಗಿ ಬಂದಿದೆ. ಇದೊಂದು ಶಾಸ್ತ್ರೀಯ ಸಂಪಾದನೆಯಾಗಿದೆ. ಕಂದಪದ್ಯಗಳಿಗೆ ಪರ್ವತ ಶಿವಯೋಗಿಯ ವ್ಯಾಖ್ಯಾನವನ್ನು ಕಲ್ಪಿಸಲಾಗಿದೆ. ಸಂಪಾದಕರು ಪೂರ್ವೋಕ್ತ ಕೃತಿಗಳಿಗೆ ಅಭ್ಯಾಸಪೂರ್ಣ ಮುನ್ನುಡಿ, ಅನುಬಂಧಗಳನ್ನು ನೀಡಿರುವುದು ಉಪಯುಕ್ತವಾಗಿದೆ. ಆದರೆ ಸ್ವರವಚನಗಳ ವಸ್ತು-ವಿಷಯ ಕುರಿತು ಇನ್ನಷ್ಟು ಪ್ರವೇಶಿಕೆಯ ಮಾತುಗಳನ್ನು ಹೇಳಿದ್ದರೆ ಓದುಗರಿಗೆ ಉಪಯುಕ್ತವೆನಿಸುತ್ತಿತ್ತು. ಇದೊಂದು ಕೊರತೆಯಾಗಿದೆ.

'ಮರಿಶಾಂತ ಬಸವದೇವರ ಸ್ವರವಚನಗಳು' ಕೃತಿಯ ಸಂಪಾದಕರಾದ ಎಸ್ .ಶಿವಣ್ಣ ಅವರು ಬೆಂಗಳೂರು ವಿಶ್ವವಿದ್ಯಾಲಯದ ಸಂಗ್ರಹದಲ್ಲಿನ ಓಲೆಪ್ರತಿಯ ಸಹಾಯದಿಂದ ಇಲ್ಲಿನ ಹಾಡುಗಳನ್ನು ಸಂಗ್ರಹಿಸಿದ್ದಾರೆ. ಒಟ್ಟು ೭೩ ಸ್ವರವಚನಗಳಿವೆ. ಕೆಲವು ಸ್ವರವಚನಗಳಿಗೆ ರಾಗಗಳನ್ನು ಸೂಚಿಸಿದ್ದಾರೆ. ಇಲ್ಲಿನ ಬಹುಪಾಲು ಸ್ವರವಚನಗಳ ವಸ್ತು ಶೃಂಗಾರಕ್ಕೆ ಸಂಬಂಧಿಸಿದ್ದಾಗಿದೆ. ಕೆಲವು ಗುರು ಲಿಂಗ-

ಜಂಗಮಗಳ ಮಹಿಮೆಯನ್ನು ಕುರಿತು ಹೇಳುತ್ತಿವೆ. ಸಂಪಾದಕರು ಈ ಸಂಕಲನಕ್ಕೊಂದು ದೀರ್ಘ ಪ್ರಸ್ತಾವನೆ ಬರೆಯಬಹುದಾಗಿತ್ತು. ಈ ಹಾಡುಗಳ ಪ್ರವೇಶಕ್ಕೆ ಅವುಗಳ ಅರ್ಥಸ್ಫುರಣೆಗೆ ಓದುಗರಿಗೆ ಅನುಕೂಲವಾಗುತ್ತಿತ್ತು. ಅನುಬಂಧದಲ್ಲಿ ಸ್ವರವಚನಗಳ ಅಕಾರಾದಿ, ರಾಗಗಳ ಅಕಾರಾದಿಯಷ್ಟೇ ಇವೆ. ಆದರೆ ಈ ಹಾಡುಗಳಿಗೆ ಸಂಬಂಧಿಸಿದಂತೆ ಬರುವ ಕೆಲವು ಶಬ್ದಾರ್ಥಕೋಶವನ್ನು ಕೊನೆಯಲ್ಲಿ ನೀಡಿಲ್ಲ. ಈ ಕೊರತೆಗಳು ಎದ್ದು ಕಾಣುತ್ತವೆ. ಓದುಗರಿಗೆ ಇಲ್ಲಿನ ಕೆಲವು ಪಾರಿಭಾಷಿಕ ಪದಗಳ ಅರ್ಥ ಕೊಟ್ಟಿದ್ದರೆ ಈ ಹಾಡುಗಳ ಗ್ರಹಿಕೆಗೆ ಸುಲಭವಾಗುತ್ತಿತ್ತು ಎನಿಸುತ್ತದೆ.

'ಮೈಲಾರ ಬಸವಲಿಂಗ ಶರಣರ ಸಮಗ್ರಸಾಹಿತ್ಯ'(೧೯೮೪) ಕೃತಿಯು ಗದಗಿನ ವೀರಶೈವ ಅಧ್ಯಯನ ಸಂಸ್ಥೆಯ ಮೂಲಕ 'ವೀರಶೈವ ಪುರಾತನ ಸಾಹಿತ್ಯ ರತ್ನಮಾಲೆ' ಯೋಜನೆ ಅಂಗವಾಗಿ ಬಂದುದು. ಸಂಪಾದಕರಾದ ಎಸ್ .ವಿ.ಅಯ್ಯನಗೌಡರ ಅವರು ಹಸ್ತಪ್ರತಿಯ ನೆರವಿನಿಂದ ಬಸವಲಿಂಗರ ಸಮಗ್ರ ಸಾಹಿತ್ಯವನ್ನು ಪರಿಷ್ಕರಿಸಿ ಪ್ರಕಟಿಸಿದ್ದಾರೆ. ಇದಕ್ಕೂ ಮೊದಲು ಶಿ.ಶಿ. ಬಸವನಾಳರು 'ಶ್ರೀ ಮೈಲಾರದ ಬಸವಲಿಂಗ ಶರಣರ ಕೃತಿಗಳು' ಎಂಬ ಹೆಸರಿನಿಂದ ಧಾರವಾಡದ ಮುರುಘಾಮಠದಿಂದ ಪ್ರಕಟಿಸಿದ್ದರು. ಅಯ್ಯನಗೌಡರ ಅವರು ಹೆಚ್ಚಿನ ಹೊಸ ಹಸ್ತಪ್ರತಿಗಳ ಸಹಾಯದಿಂದ ಮತ್ತೂ ಪರಿಷ್ಕರಿಸಿ ಪ್ರಕಟಿಸಿದ್ದಾರೆ. ೧. ಗುರು ಕರುಣ ತ್ರಿವಿಧಿ, ೨. ಷಟ್ಸ್ಥಲ ನಿರಾಭಾರ ವೀರಶೈವ ಸಿದ್ಧಾಂತ ೩. ಷಟ್ಸ್ಥಲ ಜ್ಞಾನಾನುಭಾವ, ೪. ಲಿಂಗ ಪೂಜಾವಿಧಾನ, ೫. ಶಿವಾನುಭವ ದರ್ಪಣ ೬. ಭಕ್ತಿಭಿನ್ನಹ ದಂಡಕ ೭. ಬಸವಲಿಂಗ ಶರಣರ ಹೆಚ್ಚಿನ ಪದ್ಯ-ಶ್ಲೋಕ ಮುಂತಾದ ಅಂಶಗಳ ಮೂಲಕ ಪರಿಷ್ಕರಿಸಿ ಹೊಸ ಕ್ರಮದಲ್ಲಿ ಪ್ರಕಟಿಸಿದ್ದಾರೆ. ಬಸವಲಿಂಗರ ಸಂಕ್ಷಿಪ್ತ ಜೀವನ ಪರಿಚಯ, ಅವರ ಕೃತಿಗಳ ವಸ್ತುವಿಷಯ ಪ್ರಸ್ತಾಪಿಸಿದ್ದಾರೆ. ಆದರೆ ಹೆಚ್ಚಿನ ವಿವರಗಳು ಈ ಕುರಿತು ತಮ್ಮ ಪ್ರಸ್ತಾವನೆಯಲ್ಲಿ ಇಲ್ಲ. ಅನುಬಂಧದಲ್ಲಿ ನುಡಿಗಳ ಮೊದಲ ಸಾಲನ್ನು ತೆಗೆದುಕೊಂಡು ಅಕಾರಾದಿಯಾಗಿ ಕೊಡಲಾಗಿದೆ. ಕಠಿಣ ಪದಗಳ ಕೋಶ, ಪಾರಿಭಾಷಿಕ ಪದಕೋಶ, ನಾಮಸೂಚಿಯನ್ನು ಕೊಡಲಾಗಿದೆ. ಓದುಗರಿಗೆ ಸಮಗ್ರ ಪರಿಚಯದ ದೃಷ್ಟಿಯಿಂದ ಇದೊಂದು ಉಪಯುಕ್ತ ಗ್ರಂಥವಾಗಿದೆ. ರಾಗಗಳ ಸೂಚನೆಯನ್ನು, ಪರಿಷ್ಕರಣೆಯ ವಿವರಣೆಯನ್ನು ಆಯಾ ಹಾಡುಗಳ ಕೆಳಗೆ ಸೂಚಿಸಲಾಗಿದೆ.

'ನೀರಲಕೆರೆ ಬಸವಲಿಂಗ ಶಿವಯೋಗಿಗಳ ಸ್ವರವಚನಗಳು(೧೯೯೫) ಕೃತಿಯ ಸಂಪಾದಕರಾದ ಬಸವಲಿಂಗ ಸೊಪ್ಪಿಮಠ ಅವರು ತಾವು ಸಂಗ್ರಹಿಸಿದ ನೀರಲಕೆರೆ ಬಸವಲಿಂಗರ ಮೌಖಿಕ ಪರಂಪರೆಯ ಹಾಡುಗಳು ಹಾಗೂ ಹಸ್ತಪ್ರತಿಯ ನೆರವಿನಿಂದ ಈಗಾಗಲೇ 'ಜ್ಞಾನಗೀತೆ' ಎಂಬ ಹೆಸರಿನಿಂದ ಪ್ರಕಟವಾದ ಹಾಡುಗಳ ಕೃತಿಯ ಆಧಾರ ಪಡೆದು ಪರಿಷ್ಕರಿಸಿ ಪ್ರಕಟಿಸಿದ್ದಾರೆ. ಇಲ್ಲಿ ಅವರು ಸಂಪಾದಕನ ಪಾಠಕ್ಕೆ ಪ್ರತ್ಯೇಕ ಒತ್ತುಕೊಡದೆ ಭಾವ, ಭಾಷೆಯ ಸಂಬಂಧ, ಲಯ, ಛಂದಸ್ಸು, ಗೇಯತೆ ಇವುಗಳನ್ನು ಗಮನಿಸಿ ಮೂಲ ಪಾಠವನ್ನು ನೀಡಿದ್ದಾರೆ. ಮೂಲ ಪ್ರತಿಯಲ್ಲಿ ರಾಗ ನಿರ್ದೇಶನವಿಲ್ಲ. ಇವರೂ ರಾಗ-ತಾಳವನ್ನು

ಸೂಚಿಸಿಲ್ಲ. 'ಜ್ಞಾನಗೀತೆ' ಎಂಬ ಹೆಸರು ಇಟ್ಟದ್ದು ಬಸವಲಿಂಗರು ಎಂಬ ಬಗ್ಗೆ ಅನುಮಾನ ವ್ಯಕ್ತಪಡಿಸಿದ್ದಾರೆ. ಹಸ್ತಪ್ರತಿಯಲ್ಲಿ ಈ ಕುರಿತ ಸ್ಪಷ್ಟನೆ ಇಲ್ಲದ್ದಕ್ಕೆ ಅವರು ತಮ್ಮ ಸಂಕಲನಕ್ಕೆ 'ನೀರಲಕೆರೆ ಬಸವಲಿಂಗ ಶಿವಯೋಗಿಗಳ ಸ್ವರವಚನಗಳು' ಎಂದು ಹೆಸರಿಸಿದ್ದೇನೆ ಎನ್ನುತ್ತಾರೆ.

ಪ್ರಸ್ತಾವನೆಯಲ್ಲಿ ನೀರಲಕೆರೆ ಬಸವಲಿಂಗರ ಜೀವನ ಕುರಿತ ಪರಿಚಯ ಮತ್ತು ಅವರು ಬೆಳೆದು ಬಂದ ಪರಿಯನ್ನು ಕುರಿತು ವಿವರಿಸಿದ್ದಾರೆ. ಬಸವಲಿಂಗರಿಗೆ 'ಅನ್ನದಲ್ಲಿ ಮದ್ದನಿಕ್ಕಿದ ಪ್ರಸಂಗ', 'ಸ್ತ್ರೀಲಂಪಟ' ಎಂಬ ಅರೋಪ ಹೊರಿಸಿ ಚಿತ್ರಹಿಂಸೆ ಕೊಟ್ಟ ಪ್ರಸಂಗ, ಊರಿಂದ ಬಹಿಷ್ಕಾರ ಹಾಕಿದ್ದು ಈ ಮುಂತಾದ ಉಪಟಳಗಳನ್ನು ಸಮಾಜದಲ್ಲಿ ದಿಟ್ಟವಾಗಿ ಎದುರಿಸಿದ್ದನ್ನು ಕುರಿತು ನುಡಿಗಟ್ಟುಗಳ ಮೂಲಕ ಪರಿಚಯಿಸಿದ್ದಾರೆ. ಈ ಕೃತಿಯ ಅನುಬಂಧದಲ್ಲಿ ಸ್ವರವಚನಗಳ ಅಕಾರಾದಿ ಕೊಟ್ಟಿಲ್ಲ. ಬಹಳ ಮುಖ್ಯವಾಗಿ ಓದುಗರ ಅನುಕೂಲಕ್ಕಾಗಿ ಶಬ್ದಾರ್ಥ ಪದಕೋಶವನ್ನು ಕೊಡದೆ ಇರುವುದು ಈ ಗ್ರಂಥದ ಕೊರತೆಯಾಗಿದೆ. ಮೌಖಿಕ ಹಾಡುಗಳನ್ನು ಸಂಗ್ರಹಿಸಿದ ಇವರು ಹಸ್ತಪ್ರತಿಯ ಹಾಡುಗಳಿಗೆ ತಾಳೆ ನೋಡಿ ಶಾಸ್ತ್ರೀಯವಾಗಿ ಪರಿಷ್ಕರಿಸಿರುವುದು ಕೂಡ ಅಷ್ಟೊಂದು ಸಮಂಜಸವೆನಿಸದು.

'ಶ್ರೀಗುರು ಬಸವೇಶಾಂಕಿತದ ಸ್ವರವಚನಗಳು'(೨೦೦೨) ಕೃತಿಯು ಶ್ರೀ ಇಮ್ಮಡಿ ಗುರುಸಿದ್ಧ ಸ್ವಾಮಿಗಳ ಶಿಷ್ಯ(?)ರ ಹಾಡುಗಳ ಸಂಕಲನ ಎನ್ನಲಾಗಿದೆ. ಇದರ ವಿವರ ಅಸ್ಪಷ್ಟವಾಗಿದೆ. ಅದಕ್ಕೆ ಅಜ್ಞಾತ ಕರ್ತೃ ಎನ್ನಲಾಗಿದೆ. ಹಾಗಾಗಿ ಅಂಕಿತದ ಹೆಸರಿನಲ್ಲಿಯೇ ಹಾಡುಗಳನ್ನು ಸಂಕಲಿಸಲಾಗಿದೆ. ಇದರ ಸಂಪಾದಕರಾದ ಎಸ್.ಶಿವಣ್ಣ ಅವರು ಇವುಗಳನ್ನು ೨೨ ಸ್ಥಲಾನುಕ್ರಮದಲ್ಲಿ ಸಂಗ್ರಹಿಸಿದ್ದಾರೆ. ಇವು ಬಹುಪಾಲು ಶಿವಯೋಗ ಕುರಿತ ನಿರೂಪಣೆಗೆ ಮೀಸಲಾಗಿವೆ. ಪ್ರಸ್ತುತ ಸಂಕಲನದಲ್ಲಿ ಒಟ್ಟು ೧೮೮ ಹಾಡುಗಳಿವೆ. ಇವನ್ನು ಚಿತ್ರದುರ್ಗ ಬೃಹನ್ಮಠದ ಸಂಗ್ರಹದಲ್ಲಿನ ಓಲೆಕಟ್ಟುಪ್ರತಿಗಳ ನೆರವಿನಿಂದ ಸಂಕಲಿಸಲಾಗಿದೆ. ವಿವಿಧ ರಾಗಗಳ ಸೂಚನೆ ಇವುಗಳಲ್ಲಿನ ಹಾಡುಗಳಿಗಿವೆ. ಅನುಬಂಧದಲ್ಲಿ ಅರ್ಥಕೋಶವನ್ನು ಕೊಡಲಾಗಿದೆ. ರಾಗಗಳ ಅಕಾರಾದಿಯನ್ನು ನೀಡಲಾಗಿದೆ. ಆದರೆ ಹಾಡುಗಳ ಅಕಾರಾದಿಯನ್ನು ಕೊಡುವಲ್ಲಿ ಸರಿಯಾದ ಕ್ರಮವನ್ನು ಅನುಸರಿಸಿಲ್ಲ. ಈ ಕೃತಿಗೆ ಪ್ರಸ್ತಾವನೆ ಇಲ್ಲ. ಇಲ್ಲಿನ ವಸ್ತು ವಿಷಯಗಳೇನು? ಸ್ಥಳಗಳ ಪರಿಚಯ ಮುಂತಾದ ಅಂಶಗಳ ಕುರಿತು ಚರ್ಚಿಸಿದ್ದರೆ ಕೃತಿ ಪ್ರವೇಶಕ್ಕೆ ಅನುಕೂಲವಾಗುತ್ತಿತ್ತು.

'ರಾಮಪುರ ಬಕ್ಕಪ್ಪಯ್ಯನ ಸ್ವರವಚನ ತ್ರಿವಿಧಿ' (೧೯೯೬) ಕೃತಿಯು ವೀರಶೈವ ಅಧ್ಯಯನ ಸಂಸ್ಥೆಯಿಂದ ಪ್ರಕಟವಾದ ೪೭ನೆಯ ಕೃತಿಯಾಗಿದೆ. ಈ ಕೃತಿಯ ಸಂಪಾದಕರಾದ ವಿ.ಜಿ.ಪೂಜಾರ ಅವರು ಬಕ್ಕಪ್ಪನ ಸ್ವರವಚನ ತ್ರಿವಿಧಿಗಳನ್ನು ಭಾಗ-೧ ಮತ್ತು ಭಾಗ-೨ರಲ್ಲಿ ವಿಂಗಡಿಸಿ ಒಟ್ಟಾಗಿ ಪ್ರಕಟಿಸಿದ ಕೃತಿಯಾಗಿದೆ. ಪ್ರಸ್ತುತ ಕೃತಿಯಲ್ಲಿನ ೫೫ ಸ್ವರವಚನಗಳನ್ನು ಪ್ರಾರ್ಥನೆ, ಗುರುಭಕ್ತಿ, ಶರಣಸತಿ, ಲಿಂಗಪತಿಭಾವ, ಅನುಭಾವ, ಬೆಡಗು-ತತ್ವವಿಲಾಸ, ಸಾಮಾಜಿಕ ವಿಡಂಬನೆ, ಹೆಚ್ಚಿನ ಸ್ವರವಚನಗಳು

ಈ ಉಪಶೀರ್ಷಿಕೆಗಳಲ್ಲಿ ಸಂಗ್ರಹಿಸಲಾಗಿದೆ. ಭಾಗ ೨ರ ತ್ರಿವಿಧಿಗಳಲ್ಲಿ ಗುರುಸ್ಮರಣೆ, ಕರುಣೆ, ಬಸವಾದಿ ಪ್ರಮಥರ ಸ್ತುತಿ, ಇಷ್ಟಲಿಂಗದ ಮಹತಿ, ಅಂತರಂಗ-ಬಹಿರಂಗ, ವೀರಶೈವತತ್ವ, ಆಚರಣೆ, ಶರಣ ನಡೆ-ನುಡಿ, ಬಡತನ-ಸಿರಿತನ, ಕುಲ-ಛಲ-ನಿಂದೆ-ಹಿಂಸೆ, ನೀತಿ-ಲೋಕಾನುಭವ, ಸಮಾಜ ವಿಡಂಬನೆ, ತ್ರಿವಿಧಿಗಳ ಮಹತ್ವ ಎಂಬ ೧೦ ಉಪವಿಭಾಗಗಳ ಹಿನ್ನೆಲೆಯಲ್ಲಿ ಒಟ್ಟು ೨೧೦ ತ್ರಿವಿಧಿಗಳನ್ನು ಸಂಕಲಿಸಿ ಕೊಡಲಾಗಿದೆ. ಒಂದು 'ವಚನ'ವನ್ನೂ ಕೊನೆಗೆ ಸೇರಿಸಲಾಗಿದೆ. ರಾಗ-ತಾಳಗಳ ಸೂಚನೆ ಈ ಹಾಡುಗಳಿಗೆ ನೀಡಿಲ್ಲ. ಇಲ್ಲಿನ ಹಾಡುಗಳು ಪ್ರಕಟಿತ ಗ್ರಂಥದಿಂದ ಹಾಗೂ ಭಜನೆ ಹಾಡುಗಾರರಿಂದ ಸಂಕಲಿಸಿ ಇವುಗಳನ್ನು ಹೋಲಿಸಿ ನೋಡಿ ಪರಿಷ್ಕರಿಸಿ ಪ್ರಕಟಿಸಲಾಗಿದೆ. ಕ್ಷೇತ್ರಕಾರ್ಯದ ಮೂಲಕವೂ ಕೆಲವು ಹಾಡುಗಳನ್ನು ಇಲ್ಲಿ ಪರಿಷ್ಕರಿಸಿ ಶಾಸ್ತ್ರೀಯ ಕ್ರಮವನ್ನು ಅನುಸರಿಸಿ ಸಂಕಲಿಸಿಕೊಡಲಾಗಿದೆ. ಕ್ಷೇತ್ರಕಾರ್ಯದ ಮೂಲಕ ಸಂಗ್ರಹಿಸಿದ ಹಾಡುಗಳು ಮೌಖಿಕವಾದವು ಅವುಗಳಿಗೆ ಬೇಕಾಗದ ಸಂಪಾದನ ಕ್ರಮವನ್ನು ಅನುಸರಿಸಲಾಗಿದೆ. ಅವುಗಳಿಗೆ ಶಾಸ್ತ್ರೀಯ ಸಂಪಾದನಾ ಶಿಸ್ತನ್ನು ಹೇರಿದಗೆ ಎಷ್ಟೇ ಎಚ್ಚರ ವಹಿಸಿದರೂ ಹಾಡುಗಳ ಮೂಲ ಸತ್ವಕ್ಕೆ ಭಂಗ ಬರುತ್ತದೆಂಬುದನ್ನು ಗಮನಿಸಿಲ್ಲ.

ಪ್ರಸ್ತಾವನೆಯಲ್ಲಿ ಬಕ್ಕಪ್ಪಯ್ಯನ ಇತಿವೃತ್ತ, ಆತನ ಜೀವನ-ಕಾಲ-ದೇಶ ಕುರಿತಾಗಿ ಚರ್ಚಿಸಲಾಗಿದೆ. ಬಕ್ಕಪ್ಪಯ್ಯನ ಮೇಲೆ ಬಸವಾದಿ ಮತ್ತು ತಮಿಳುನಾಡಿನ ಪುರಾತನ ಶಿವಶರಣರು ಬೀರಿದ ಪ್ರಭಾವ ಎಂಥದು, ಆತನ ಈ ಹಾಡುಗಳು ಮುಂದಿನ ಅನುಭಾವಿಗಳಾದ ಕಡಕೋಳ, ಕೂಡಲೂರು, ಬಸವಲಿಂಗಶರಣ ಮತ್ತು ಶಿಶುನಾಳ ಷರೀಫ್ ಮುಂತಾದವರ ಮೇಲೆ ಬೀರಿದ ಪ್ರಭಾವವನ್ನು ಗುರುತಿಸಿದ್ದಾರೆ. ಹಾಗೆಯೇ ಬಕ್ಕಪ್ಪಯ್ಯನ ಸ್ವರವಚನಗಳು ತ್ರಿವಿಧಿಗಳ ಸಾಹಿತ್ಯ ಮಹತ್ವವನ್ನು ವಿವರಿಸಲಾಗಿದೆ. ಅನುಬಂಧದಲ್ಲಿ ಹೆಚ್ಚಿನ ಕಠಿಣ ಪದಗಳ ಅರ್ಥವನ್ನು ನೀಡಿಲ್ಲ. ಇದೊಂದು ಕೊರತೆ ಹಾಗೇ ಉಳಿದಿದೆ.

ಗದಗಿನ ವೀರಶೈವ ಅಧ್ಯಯನ ಸಂಸ್ಥೆಯು ಈ ಮೊದಲು 'ಸ್ವರವಚನಗಳ ಸ್ವತಂತ್ರ ಸಂಪುಟಗಳನ್ನು ಮತ್ತು ಏಕವ್ಯಕ್ತಿ ರಚಿತ ಸ್ವರವಚನಗಳ' ಅನೇಕ ಕೃತಿಗಳನ್ನು ಹೊರತಂದಿತು. ನಂತರ ಬಿಡಿಬಿಡಿಯಾಗಿ ಸಿಗುವ ಸ್ವರವಚನಗಳನ್ನು ಹಲವು ಹಸ್ತಪ್ರತಿಗಳ ನೆರವಿನಿಂದ 'ಸ್ವರವಚನ ವಾಹಿನಿ' ಎಂಬ ಮಾಲೆಯ ಮೂಲಕ ಶಾಸ್ತ್ರೀಯವಾಗಿ ಸಂಪುಟಗಳಲ್ಲಿ ಹೊರತರುವ ಯೋಜನೆ ಹಾಕಿಕೊಂಡಿತು. ಎಸ್. ಉಮಾಪತಿ ಅವರ ಸಂಪಾದಕತ್ವದಲ್ಲಿ 'ಸ್ವರವಚನ ವಾಹಿನಿ ಸಂ.೧(೧೯೯೪) ಮೊದಲ ಕೃತಿಯಾಗಿ ಹೊರಬಂದಿದೆ. ಪ್ರಸ್ತುತ ಕೃತಿಯಲ್ಲಿ ವೀರಶೈವ ಪರವೆನಿಸಬಹುದಾದ ಹಾಡುಗಳನ್ನು ಇಲ್ಲಿ ಆಯ್ದುಕೊಳ್ಳಲಾಗಿದೆ. ಕೆಲವು ಬೇರೆಯ ವಿಷಯ ಒಳಗೊಂಡವೂ ಇವೆ. ಪಾಠ ಪರಿಷ್ಕರಣೆಯನ್ನು ಇಲ್ಲಿನ ಹಾಡುಗಳಿಗೆ ಮಾಡಲಾಗಿದೆ. ರಾಗ-ತಾಳಗಳನ್ನು ಹಾಡುಗಳಿಗೆ ಸೂಚಿಸಲಾಗಿದೆ. ಪರಿಷ್ಕರಣೆಯ ವಿವರವನ್ನು ಹಾಡುಗಳ ಅಡಿಯಲ್ಲಿ ಕೊಡಲಾಗಿದೆ. ಆದರೆ ಸಂಪಾದಕರು ಇದಕ್ಕೊಂದು ಪ್ರಸ್ತಾವನೆ ಬರೆಯುವ

ಅವಶ್ಯಕತೆ ಇತ್ತು. ಏಕೆಂದರೆ ಇಲ್ಲಿನ ಹಾಡುಗಳು ಬಹುತೇಕ ವಿಭಿನ್ನವಾಗಿರುವಂತವು. 'ಸ್ವರವಚನವಾಹಿನಿ'ಯ ಮೊದಲ ಸಂಪುಟವೂ ಇದಾಗಿದೆ. ಇದು ಈ ಮುಂಚಿನ ಪ್ರಕಟಣೆಗಳಿಗಿಂತ ಭಿನ್ನವೂ ಆದ ಕಾರಣ ಇಲ್ಲಿ ಸಂಪಾದನೆಯ ತಾತ್ವಿಕ ನಿಲುವು ರಾಗ-ತಾಳಗಳ ಸೂಚನೆಗೆ ಅನುಕರಿಸಿದ ಕ್ರಮ, ಈ ಸಾಹಿತ್ಯದಲ್ಲಿರುವ ವಸ್ತು ವೈವಿಧ್ಯ ಕುರಿತಂತೆ ಓದುಗರ ಪ್ರವೇಶಕ್ಕೆ ಒಂದು ದೀರ್ಘವೇ ಆದ ಪ್ರವೇಶಿಕೆಯ ಅವಶ್ಯಕತೆ ಇತ್ತು. ಈ ಗ್ರಂಥಕ್ಕೆ ಇದೊಂದು ದೊಡ್ಡ ಕೊರತೆಯಾಗಿದೆ. ಅನುಬಂಧದಲ್ಲಿ ಪಲ್ಲವಿಗಳ ಅಕಾರಾದಿ ಮತ್ತು ಅಂಕಿತಗಳ ಅಕಾರಾದಿ ಉಪಯುಕ್ತವಾಗಿವೆ. ಆದರೆ ಓದುಗರಿಗೆ ಉಪಯುಕ್ತವಾಗುವ ಪಾರಿಭಾಷಿಕ ಪದಗಳು, ಶಬ್ದಾರ್ಥಗಳನ್ನು ಕೊಟ್ಟಿಲ್ಲ. ಇವು ಕೃತಿಯ ಹಾಡುಗಳ ಅರಿಯುವಿಕೆಗೆ ಉಪಯುಕ್ತವಾದವು ಎಂಬುದನ್ನು ಸಂಪಾದಕರು ಗಮನಿಸಿಲ್ಲ.

ಎಸ್.ಶಿವಣ್ಣ ಅವರ ಸಂಪಾದಕತ್ವದಲ್ಲಿ 'ಸ್ವರವಚನ ವಾಹಿನಿ' ಸಂ-೨ ಹೊರಬಂದಿದೆ. ಬೇರೆ ಬೇರೆ ಊರುಗಳಿಂದ ಸಂಗ್ರಹಿಸಿದ ಹಸ್ತಪ್ರತಿಗಳನ್ನು ಪರಾಮರ್ಶಿಸಿ ಸಂಪಾದಿಸಿದ ಹಾಡುಗಳು ಇವು. ಸು.೧೨೦ ಕ್ಷೇತ್ರಗಳ ದೈವತ ಇಲ್ಲವೆ ಗುರುಗಳು, ಭಕ್ತರು ಬರೆದ ಹಾಡುಗಳಿವು ಎಂದು ಸಂಪಾದಕರು ಅಭಿಪ್ರಾಯಪಡುತ್ತಾರೆ. ಇವು ಸಾಮಾನ್ಯವಾಗಿ ೧೭, ೧೮, ೧೯ನೇ ಶತಮಾನಗಳ ರಚನೆಗಳಾಗಿವೆ. ಇಲ್ಲಿನ ಹಾಡುಗಳಲ್ಲಿ ತತ್ವಜ್ಞಾನಕ್ಕಿಂತ ಲೋಕನೀತಿ, ದೈವಭಕ್ತಿ ಅಧಿಕವಾಗಿವೆ.

ಗದುಗಿನ ವೀರಶೈವ ಅಧ್ಯಯನ ಸಂಸ್ಥೆಯಂತೆ ಮೈಸೂರಿನ ಸುತ್ತೂರು ಶ್ರೀ ಶಿವರಾತ್ರೀಶ್ವರ ಗ್ರಂಥಮಾಲೆಯು 'ಸ್ವರವಚನ ಸಾಹಿತ್ಯ' ಪ್ರಕಟಣೆಯ ಇತಿಹಾಸದಲ್ಲಿ ಮಹತ್ವದ ಗ್ರಂಥಗಳನ್ನು ಹೊರತಂದಿದೆ. ಅಪ್ರಕಟಿತ ರೂಪದಲ್ಲಿರುವ ಲಿಖಿತ ಮತ್ತು ಮೌಖಿಕ ಪರಂಪರೆಯ ಎಲ್ಲ ಸ್ವರವಚನಗಳನ್ನು ಪ್ರಕಟಿಸುವ ಉದ್ದೇಶ ಹೊಂದಿದೆ. ಈ ಸಾಹಿತ್ಯವನ್ನು ಪ್ರಕಟಿಸಲು ಪ್ರಸ್ತುತ ಎರಡು ಹಂತಗಳಲ್ಲಿ ಯೋಜನೆ ಹಾಕಿಕೊಂಡಿದೆ.

೧. ಹಸ್ತಪ್ರತಿಗಳಲ್ಲಿ ಬಿಡಿಬಿಡಿಯಾಗಿ ಸಿಗುವ ಸ್ವರವಚನಗಳನ್ನು ಸಂಗ್ರಹಿಸಿ, ಪರಿಷ್ಕರಿಸಿ, ಸಂಪುಟ ರೂಪದಲ್ಲಿ ತುರುವುದು. ಬೇರೆ-ಬೇರೆ ಪ್ರದೇಶಗಳಲ್ಲಿ ಮೌಖಿಕ ಪರಂಪರೆಯಲ್ಲಿ ಸಿಗುವ ಸ್ವರವಚನಗಳನ್ನು ಕ್ಷೇತ್ರಕಾರ್ಯದ ಮೂಲಕ ಧ್ವನಿಮುದ್ರಣ ರೂಪದಲ್ಲಿ ತಂದು ಸಂಪುಟಗಳಲ್ಲಿ ಪ್ರಕಟಿಸುವುದು.

೨. ಹೀಗೆ ಸಂಗ್ರಹಿಸಿದ ಸ್ವರವಚನಗಳಿಗೆ ಮತ್ತು ಈಗಾಗಲೇ ಪ್ರಕಟಿತ ರೂಪದ ಎಲ್ಲ ಸ್ವರವಚನ ಕೃತಿಗಳನ್ನು ಒಂದು ಶಿಸ್ತಿಗೆ ಅಳವಡಿಸಿ ವಿವಿಧ ಲೇಖಕರ ನೆರವಿನಿಂದ ಹದಿನೈದು ಸಂಪುಟಗಳಲ್ಲಿ ಹೊರತರುವುದು ಮುಖ್ಯ ಉದ್ದೇಶವಾಗಿದೆ.

ಮೊದಲನೆಯ ಸಂಪುಟ ೧೯೯೫ರಲ್ಲಿ ಬಂದುದು ಬಸವೇಶ್ವರ ಮತ್ತು ಇತರ ಶರಣರ ಬಿಡಿ ಸ್ವರವಚನ ಸಂಪುಟವಾಗಿದೆ. ಎರಡನೆಯ ಸಂಪುಟ 'ನಿಜಗುಣಯೋಗಿಯಿಂದ ಮೈಲಾರ ಬಸವಲಿಂಗ

ಶರಣರವರೆಗೆ ಒಟ್ಟು ಆರು ಜನ ಪ್ರಸಿದ್ಧ ಸ್ವರವಚನಕಾರರವರೆಗೆ ಇವೆ. ಇವು ಹಸ್ತಪ್ರತಿಗಳ ನೆರವಿನಿಂದ ಸಂಪಾದಿಸಿ ಪರಿಷ್ಕರಿಸಿದ ಸಂಪುಟಗಳಾಗಿವೆ. ಸಂಪುಟ ಮೂರು, ನಾಲ್ಕು ಮತ್ತು ಐದು 'ಗುರು ಬಸವಾರ್ಯ, ಕರಸ್ಥಲನಾಗಿದೇವ ಮುಂತಾದವರಿಂದ ಕರಿಬಸವೇಶ್ವರ, ಗುರುಗುಂಡ ಬಸವ ಇತ್ಯಾದಿ. ೧೬ ಜನ ಅಪ್ರಸಿದ್ಧ ಸ್ವರವಚನಕಾರರ ಸಂಪುಟಗಳು ಇವೆ. ಸಂಪುಟ ಆರು, ಏಳು, ಎಂಟು, ಒಂಬತ್ತು ಮತ್ತು ಹತ್ತು ಹಸ್ತಪ್ರತಿಗಳಲ್ಲಿ ಸಿಗುವ ಬಿಡಿಸ್ವರವಚನ ಸಂಪುಟಗಳು ಬಂದಿವೆ. ಹನ್ನೊಂದು, ಹನ್ನೆರಡು, ಹದಿಮೂರು, ಹದಿನಾಲ್ಕು ಮತ್ತು ಹದಿನೈದನೇ ಸಂಪುಟಗಳಲ್ಲಿ ವಿಶೇಷವಾಗಿ ಬೇರೆ-ಬೇರೆ ಪ್ರದೇಶಗಳಲ್ಲಿ ಸಿಗುವ ಮೌಖಿಕ ರಚನೆಗಳನ್ನು ಕ್ಷೇತ್ರಕಾರ್ಯದ ಮೂಲಕ ಕಡಕೋಳ ಮಡಿವಾಳಪ್ಪ, ಕೂಡಲೂರು ಬಸವಲಿಂಗ ಶರಣರು, ನೀರಲಕೆರೆ ಸ್ವಾಮಿಗಳು ಮತ್ತು ರಾಮಪುರದ ಬಕ್ಕಪ್ಪ ಮೊದಲಾದವರ ಹಾಡುಗಳನ್ನು ಸಂಗ್ರಹಿಸಿ ಪ್ರಕಟಿಸಲಾದ ಸಂಪುಟಗಳಾಗಿವೆ. ಪ್ರತಿಯೊಂದು ಸಂಪುಟದ ಪ್ರಸ್ತಾವನೆಯಲ್ಲಿ ಸ್ವರವಚನಕಾರರ ಇತಿವೃತ್ತ ವಿಚಾರ, ಸ್ವರವಚನಗಳ ವಿಶಿಷ್ಟತೆ ಮತ್ತು ಅವುಗಳ ಮಹತ್ವವನ್ನು ಕುರಿತಂತೆ ಚರ್ಚಿಸಲಾಗಿದೆ. ಅನುಬಂಧದಲ್ಲಿ ಪಾರಿಭಾಷಿಕ ಪದಕೋಶಗಳಿವೆ. ಸ್ವರವಚನಗಳ ಅಕಾರಾದಿ, ರಾಗ-ತಾಳಗಳ ಉಲ್ಲೇಖ ವಿಶಿಷ್ಟ ನಾಮಸೂಚಿ ಕೊಡಲಾಗಿದೆ. ಹೀಗೆ 'ಸಮಗ್ರ ಸ್ವರವಚನ ಸಾಹಿತ್ಯ ಪ್ರಕಟಣ ಯೋಜನೆಯ ಮೂಲಕ ಮಹತ್ವದ ಕೃತಿಗಳನ್ನು ಹೊರತಂದಿದೆ.

ಇದಕ್ಕೂ ಮೊದಲು 'ಶಿವದಾಸ ಗೀತಾಂಜಲಿ'ಯನ್ನು (೧೬೬೩) ಪ್ರಕಟಿಸುವ ಮೂಲಕ ಇದಕ್ಕೆ ನಾಂದಿ ಹಾಡಲಾಗಿತ್ತು. ೧೨ನೇ ಶತಮಾನದ ಶರಣರಿಂದ ಸ್ವರವಚನ ರಚನೆಗಳನ್ನು ಸಂಕಲಿಸಲಾಗಿದೆ. ಇದಕ್ಕೆ ಅಧ್ಯಯನಪೂರ್ಣ ಮುನ್ನುಡಿಯನ್ನು ಬರೆಯಲಾಗಿದೆ. ಇದರ ಮುಂದುವರಿಕೆ ಎಂಬಂತೆ ನಂತರದಲ್ಲಿ 'ಮುಪ್ಪಿನ ಷಡಕ್ಷರಿಗಳ ಕೈವಲ್ಯಪದ'(೧೯೯೭) ಸಂಪುಟವನ್ನು ಶಿವರಾತ್ರಿ ದೇಶಿಕೇಂದ್ರ ಸ್ವಾಮಿಗಳವರ ಸಂಪಾದಕತ್ವದಲ್ಲಿ ಹೊರತರಲಾಗಿತ್ತು. ಪ್ರಸ್ತುತ ಗ್ರಂಥಸಂಪಾದನೆಗೆ ಒಟ್ಟು ೮ ಹಸ್ತಪ್ರತಿಗಳನ್ನು ಬಳಸಿಕೊಳ್ಳಲಾಗಿದೆ. ಮೈಸೂರು, ಬೆಂಗಳೂರು ವಿಶ್ವವಿದ್ಯಾಲಯಗಳ ಕನ್ನಡ ಅಧ್ಯಯನ ಸಂಸ್ಥೆಯ ಕೋರಿಕಾಗದ ಪ್ರತಿಗಳು, ತಾಳೆಯೋಲೆಯ ಪ್ರತಿ ಮುದ್ರಿತ ಪ್ರತಿಗಳು ಹಾಗೂ ಈ ಮುಂಚೆಯೇ ಹರ್ಡೇಕರ ಮಂಜಪ್ಪ ಅವರು ಸಂಗ್ರಹಿಸಿದ 'ಮುಪ್ಪಿನ ಷಡಕ್ಷರಿ ದೇವರ ಸುಬೋಧಸಾರ' ಅಲ್ಲದೇ ಬಸವರಾಜಯ್ಯನವರ ತಾಡೋಲೆಯ ಪ್ರತಿ ಇಷ್ಟನ್ನು ಬಳಸಿಕೊಂಡು ಪರಿಷ್ಕರಿಸಿ ಪ್ರಕಟಿಸಲಾಗಿದೆ. ಒಟ್ಟು ೮೭ ಹಾಡುಗಳು ಪ್ರಸ್ತುತ ಸಂಕಲನದಲ್ಲಿವೆ. ಈ ಹಿಂದೆ ಇಲ್ಲದ ೧೦ ಹೊಸ ಹಾಡುಗಳು ಈ ಸಂಕಲನದಲ್ಲಿ ಸೇರಿವೆ. ಇಲ್ಲಿನ ಹಾಡುಗಳನ್ನು ವಿವಿಧ ಷಟ್ಪದಿಗಳಲ್ಲಿ ಸಂಕಲಿಸಿ ಕೊಡಲಾಗಿದೆ. ಪಾಠ ಪರಿಷ್ಕರಣೆಯ ಪದಗಳ ವ್ಯತ್ಯಾಸವನ್ನು ಆಯಾ ಪದ/ಹಾಡುಗಳ ಕೆಳಗೆ ಅಂಕಿಗಳ ಮೂಲಕವೇ ಸೂಚಿಸಲಾಗಿದೆ.

ಪ್ರಸ್ತಾವನೆಯಲ್ಲಿ ಬಸವಣ್ಣನವರ ವಚನ ಸಾಹಿತ್ಯದಿಂದ ಕವಲೊಡೆದ ಈ ಸಾಹಿತ್ಯ ಹೇಗೆ ಮುಂದೆ ವಿಶಿಷ್ಟವಾಗಿ ಬೆಳೆಯಿತು ಎಂಬುದನ್ನು ವಿವರಿಸಿದ್ದಾರೆ. ಮುಪ್ಪಿನ ಷಡಕ್ಷರಿಯ ಕಾಲ, ದೇಶ, ಕೃತಿ ಕುರಿತಂತೆ

ಯಾವುದೇ ಸ್ಪಷ್ಟವಾದ ವಿವರಗಳ ಮೂಲಕ ಚರ್ಚಿಸಿಲ್ಲ. ಈ ಹಿಂದಿನ ಮಾಹಿತಿಗಳೇ ಇಲ್ಲಿ ಹೊಸದೆಂಬಂತೆ, ಚರ್ಚಿಸಲಾಗಿದೆ.

ಷಡಕ್ಷರಿಗಳ ಹಾಡುಗಳನ್ನು ವಚನಗಳ ಜೊತೆ ಸಮೀಕರಿಸಿ ಇವುಗಳ ವೈಶಿಷ್ಟ್ಯವನ್ನು ವಿವರಿಸಿದ್ದಾರೆ. ಇವರ ಮಧುರ ಭಕ್ತಿಯನ್ನು, ವೈರಾಗ್ಯ ವೈಭವವನ್ನು ಸಾಧನೆ ಸಿದ್ಧಿಯನ್ನು ಇದೇ ನೆಲೆಯಲ್ಲಿ ವಿವರಿಸಿದ್ದಾರೆ. ಆದರೆ ಶರಣರ ನಂತರದ ಶತಮಾನಗಳಷ್ಟು ಕಾಲ ಅಂತರದಿಂದ ಬದುಕಿದ ಇವರ ಸಾಹಿತ್ಯವನ್ನು ಕಾಲದ ಸಾಂಸ್ಕೃತಿಕ ಸಂದರ್ಭ, ಒತ್ತಡಗಳ ಹಿನ್ನೆಲೆಯಲ್ಲಿ ಹಾಗೂ ಭಿನ್ನವಾದ ನೆಲೆಯಲ್ಲಿ ನೋಡಬೇಕಾಗಿದೆ. ಆದರೆ ಭಕ್ತಿ-ಜ್ಞಾನ-ವೈರಾಗ್ಯಗಳಿಂದ ಮೂಡಿ ಇವರ ಸಾಹಿತ್ಯ ಹೇಗೆ ಜನಸಾಮಾನ್ಯರಿಗೆ ಪ್ರಿಯವಾಯಿತು. ನೀತಿಯನ್ನು ಬೋಧಿಸಿತು ಎಂಬುದನ್ನು ಕುರಿತು ಹೇಳಿದ್ದಾರೆ. ಅನುಬಂಧದಲ್ಲಿ ಪದಗಳ ಅಕಾರಾದಿಯನ್ನು ನೀಡಲಾಗಿದೆ. ಕಠಿಣಪದಗಳ ಅರ್ಥಕೋಶವನ್ನು ನೀಡಲಾಗಿದೆ. ಇವು ಓದುಗರಿಗೆ ಉಪಯುಕ್ತವಾಗಿವೆ.

ಧಾರವಾಡದ ಮುರುಘಾಮಠದಿಂದ ಬಾಲಲೀಲಾ ಮಹಾಂತ ಶಿವಯೋಗಿ ವಿರಚಿತ 'ಕೈವಲ್ಯ ದರ್ಪಣ'(೧೯೫೨) ಕೃತಿಯು ಶಿ.ಶಿ. ಬಸವನಾಳ ಅವರಿಂದ ಸಂಪಾದಿತವಾಗಿ ಪ್ರಕಟವಾಗಿದೆ. ಸಾಹಿತ್ಯ ಹಾಗೂ ತತ್ವಪ್ರಸಾರದ ಅಭಿಮಾನದಿಂದ ಹಾಗೂ ಕವಿ, ಕಾಲ, ಕಾವ್ಯ, ಐತಿಹಾಸಿಕ ಮಹತ್ವ, ಪ್ರಸ್ತಾವನೆ ಮುಂತಾದ ಅಂಶಗಳು ಈ ಮೊದಲು ಇಲ್ಲದೇ ಇದ್ದುದರಿಂದ ಆ ಕೊರತೆಯನ್ನು ನೀಗಿಸುವ ಉದ್ದೇಶದಿಂದ 'ಶ್ರೀಬಾಲಲೀಲಾ ಮಹಾಂತ ಶಿವಯೋಗೀಶ್ವರ ಗ್ರಂಥಮಾಲೆಯ' ಮೂಲಕ 'ಕೈವಲ್ಯ ದರ್ಪಣ' ಹಾಗೂ ಘನಮಠದಾರ್ಯರ 'ಭಕ್ತಿಸುಧಾಸಾರ' ಕೃತಿಗಳನ್ನು ಪ್ರತ್ಯೇಕವಾಗಿ ಪ್ರಕಟಿಸಲಾಗಿದೆ. ಈ ಮೊದಲು ಈ ಕೃತಿಗಳು ಒಟ್ಟಿಗೆ (ಒಂದೇ ಗ್ರಂಥದಲ್ಲಿ) ಇದ್ದವು.

'ಕೈವಲ್ಯ ದರ್ಪಣ' ಪ್ರಸ್ತುತ ಕೃತಿಯಲ್ಲಿ ೧೪೨ ಹಾಡುಗಳಿವೆ. ಈ ಹಾಡುಗಳು ಕೆಲವು ಷಟ್ಪದಿಗಳಲ್ಲಿವೆ. ಕೆಲವು ಹಾಡುಗಳನ್ನು ರಾಗಗಳ ಹಿನ್ನೆಲೆಯಲ್ಲಿ ಸಂಕಲಿಸಲಾಗಿದೆ. ಇದೊಂದು ಪರಿಷ್ಕೃತ ಆವೃತ್ತಿಯಾಗಿದೆ. ಜೀವನ ಚರಿತ್ರೆ ಕುರಿತಂತೆ ಪ್ರಚಲಿತವಿರುವ ಅಂಶಗಳನ್ನು ಬಳಸಿ ಕ್ರೋಢೀಕರಿಸಿ ಕೊಡಲಾಗಿದೆ. ತತ್ವಸಾಹಿತ್ಯವೇ ಈ ಸಂಕಲನದ ಪ್ರಧಾನ ವಿಷಯವಾಗಿದೆ. ಆದರೆ ಈ ಹಿಂದೆ ಮೌಖಿಕವಾಗಿ ಸಾಮಾನ್ಯಜನತೆ ಹಾಡಿದ ಹಾಡುಗಳನ್ನು ಸಂಗ್ರಹಿಸಿದವುಗಳನ್ನು ಈ ಸಂಪಾದಕರು ಬಳಸಿಕೊಂಡು ಇವುಗಳನ್ನು ಪರಿಷ್ಕರಿಸಿ ಈ ಸಂಪಾದನೆಯಲ್ಲಿ ಅಳವಡಿಸಿಕೊಳ್ಳಲಾಗಿದೆ. ಹೀಗೆ ಮಾಡುವುದರಿಂದ ಜನರು ಹಾಡಿದ ಮೌಖಿಕ ರಚನೆಗಳನ್ನು/ಹಾಡುಗಳನ್ನು ತಮಗೆ ಸರಿಕಂಡ ರೀತಿಯಲ್ಲಿ ಬಳಸಿಕೊಳ್ಳುವುದರಿಂದ ಅವುಗಳ ನಿಜ ಆಶಯ ಮರೆಮಾಚಿದಂತೆ ಆಗುತ್ತದೆ. ಮೌಖಿಕವಾಗಿ ಹಾಡುವಾಗ ಅಲ್ಲಿರುವ ಅಂಕಿತದ ಬದಲಿಗೆ ತಮಗೆ ಸರಿಕಂಡ ಅಂಕಿತಗಳನ್ನು ಬಳಸಿ ಹಾಡುತ್ತಾರೆ. ಈ ರಚನೆಗಳನ್ನು ಹಾಡುವಾಗ ಅವುಗಳ ಮೂಲ ಅರ್ಥಕ್ಕೆ ಭಂಗ ತರುವುದಿಲ್ಲ. ಇಲ್ಲಿ ಇವರಿಗೆ ಹಾಡಿನ ಹಕ್ಕಿನ ಪ್ರಶ್ನೆ

ಕಾಡುವುದಿಲ್ಲ. ಆದರೆ ಸಂಪಾದಕರು ತಮ್ಮ ಸಂಪಾದನೆಯ ಶಾಸ್ತ್ರೀಯ ಶಿಸ್ತನ್ನು ಇವುಗಳ ಮೇಲೆ ಹೇರುವುದರಿಂದ ಅವುಗಳ ಅರ್ಥಸಾಧ್ಯತೆಗಳನ್ನು ಶಕ್ತಿಯನ್ನು ಕುಂದುಗೊಳಿಸಿದಂತೆ ಆಗುತ್ತದೆ. ಈ ದೃಷ್ಟಿಯಿಂದ ಈ ಸಂಕಲನದ ಹಾಡುಗಳಲ್ಲಿ ಅಧಿಕೃತತೆಯನ್ನು ಸಾರುವ, ಹಠವಿದ್ದಂತೆ ತೋರುತ್ತದೆ.

ಆನಂದಪುರದ (ಶಿವಮೊಗ್ಗ) ಮಲೆನಾಡ ವೀರಶೈವ ಅಧ್ಯಯನ ಸಂಸ್ಥೆಯು ವೀರಶೈವ ಸಂಸ್ಕೃತಿ ಸಂವರ್ಧನೆಯ ದೃಷ್ಟಿಯಿಂದ ೧. ಮಲೆನಾಡ ವೀರಶೈವ ಸಾಹಿತ್ಯ ವಾಹಿನಿ, ೨. ವೀರಶೈವ ಸಂಸ್ಕೃತಿ, ಸಂಚಾರ ಹಾಗೂ ೩. ವೀರಶೈವ ಸಮಾಜ ಸಮ್ಮೇಳನ ಎಂಬ ಮೂರು ಯೋಜನೆಗಳನ್ನು ರೂಪಿಸಿದೆ. ಇವುಗಳಲ್ಲಿ ಸಾಹಿತ್ಯವಾಹಿನಿಯು ಪ್ರಾಚೀನ, ಆಧುನಿಕ, ಜನಪ್ರಿಯ ಸಾಹಿತ್ಯ ತರಂಗಗಳೆಂಬ ಮೂರು ಶಾಖೆಯಲ್ಲಿ ಅನೇಕ ಕೃತಿಗಳನ್ನು ಪ್ರಕಟಿಸಲಾಗಿದೆ. ಪ್ರಸ್ತುತ 'ಕೈವಲ್ಯ ಸೋಪಾನ ನಾಮೈಕೋತ್ತರ ಶತಸ್ಥಲ ಸ್ವರವಚನಗಳು'(೧೯೮೯) ಕೃತಿಯನ್ನು ಜಿ.ಎಂ.ಶಿವಲಿಂಗಯ್ಯ ಅವರು ಸಂಪಾದಿಸಿದ್ದಾರೆ. ಇದು ವೀರಶೈವ ಪ್ರಾಚೀನ ತರಂಗದ ದ್ವಿತೀಯ ಗ್ರಂಥವಾಗಿದೆ. ಸ್ವರವಚನಗಳನ್ನು ಸ್ಥಲಗಳ ಹಿನ್ನೆಲೆಯಲ್ಲಿ ಸಂಪಾದಿಸಲಾಗಿದೆ.

ಈ ಕೃತಿಯ ಪ್ರಸ್ತಾವನೆಯಲ್ಲಿ ದೀಕ್ಷೆ, ಪಾದೋದಕ, ಮಂತ್ರಸ್ವರೂಪವನ್ನು ಕ್ರಿಯಾರ್ಪಣ, ಗುಣತ್ರಯ, ಪರಶಿವನ ಸ್ವರೂಪ, ಅಂಗ ಲಿಂಗ ವಿವೇಕ ಮೊದಲಾದ ವಿಷಯಗಳನ್ನು ಚರ್ಚಿಸಲಾಗಿದೆ. ಇಲ್ಲಿನ ಸ್ವರವಚನಗಳನ್ನು ಎರಡು ಹಸ್ತಪ್ರತಿಗಳ ಆಧಾರದಿಂದ ಸಂಪಾದಿಸಲಾಗಿದೆ. ರಾಗ-ಸೂಚನೆಯನ್ನು ಮಾಡಲಾಗಿದೆ. ಅನುಬಂಧದಲ್ಲಿ ಪದ್ಯಗಳ ಅಕಾರಾದಿ, ಕಠಿಣ ಪದಗಳ ಶಬ್ದಾರ್ಥ ಕೋಶವನ್ನು ಕೊಡಲಾಗಿದೆ.

ಬೆಂಗಳೂರು ಸರ್ಪಭೂಷಣ ಶಿವಯೋಗಿಗಳ ಮಠದ ಟ್ರಸ್ಟ್ 'ಶ್ರೀ ಸರ್ಪಭೂಷಣರ ಜೀವನ ಚರಿತ್ರೆ, ಅವರ ಸ್ವರವಚನಗಳ ಸಂಕಲನವಾದ ಕೈವಲ್ಯ ಕಲ್ಪವಲ್ಲರಿ ಶ್ರೀ ಸರ್ಪಭೂಷಣರ ಜನಪ್ರಿಯ ಹಾಡುಗಳ ಕಿರು ಹೊತ್ತಿಗೆಗಳನ್ನು ತರುವ ಉದ್ದೇಶ ಹೊಂದಿದೆ. ಈ ಹಿನ್ನೆಲೆಯಲ್ಲಿ ಬಂದ ಎಸ್.ಶಿವಣ್ಣ ಅವರು ಸಂಪಾದಿಸಿದ 'ಕೈವಲ್ಯ ಕಲ್ಪವಲ್ಲರಿ'(೧೯೯೫) ಕೃತಿಯು ಮಹತ್ವದ್ದಾಗಿದೆ. ಬೆಂಗಳೂರು ವಿಶ್ವವಿದ್ಯಾಲಯ ಕನ್ನಡ ಅಧ್ಯಯನ ಕೇಂದ್ರದ ಹಸ್ತಪ್ರತಿಗಳನ್ನು ಆಧರಿಸಿ ಪರಿಷ್ಕರಿಸಿ ಪ್ರಕಟಿಸಿದ ಗ್ರಂಥವಾಗಿದೆ. ಈ ಹಸ್ತಪ್ರತಿಯ ಕಾಲೋಲ್ಲೇಖದಿಂದ ಇದು ಶ್ರೀಸರ್ಪಭೂಷಣರ ಜೀವಿತ ಕಾಲದಲ್ಲಿ ಲಿಖಿತವಾಗಿದೆ ಎಂಬುದನ್ನು ಗುರುತಿಸಿದ್ದಾರೆ. ಮೊದಲ ಕೆಲವು ಹಾಳೆಗಳು ತ್ರುಟಿತವಾಗಿವೆ. ಅಲ್ಲಿ ಪರಿಷ್ಕರಣೆಗೆ ಶಿ.ಶಿ.ಬಸವನಾಳರ ಮುದ್ರಣ ಗ್ರಂಥವನ್ನು (೧೯೪೮) ಅನುಸರಿಸಿ ಪಠ್ಯಭಾಗವನ್ನು ನೀಡಲಾಗಿದೆ. ಪಾರಮಾರ್ಥಿಕ ವಿಷಯಗಳ ಬೋಧನೆ ಕೃತಿಯ ವಸ್ತುವಾಗಿದೆ. ೧೭೭ ಹಾಡುಗಳಿವೆ. ಪ್ರತಿ ಹಾಡಿಗೂ ರಾಗಗಳ ನಿರ್ದೇಶನವಿದೆ. ಶಿವಕಾರುಣ್ಯ ಪ್ರಾರ್ಥನಸ್ಥಲ, ಜೀವಸಂಬೋಧನ ಸ್ಥಲ, ನಿತಿಕ್ರಿಯಾಚರ್ಯ ಪ್ರತಿಪಾದನಸ್ಥಲ, ಯೋಗಪ್ರತಿ ಪಾದನಸ್ಥಲ, ಜ್ಞಾನ ಪ್ರತಿಪಾದನಸ್ಥಲ ಎಂಬ ಐದು

ಸ್ಥಲಗಳಲ್ಲಿ ಹಾಡುಗಳನ್ನು ಸಂಕಲಿಸಲಾಗಿದೆ. ಮೊದಲಿಗೆ ಪಲ್ಲವಿಗಳ ಅಕಾರಾದಿಯನ್ನು ಕೊಡಲಾಗಿದೆ. ಮುನ್ನುಡಿಯಲ್ಲಿ ಸರ್ಪಭೂಷಣ ಮಠ ಹಾಗೂ ಶಿವಯೋಗಿಗಳ ಇತಿವೃತ್ತ ಕುರಿತಂತೆ ಹಾಗೂ ಅವರ ಸಮಕಾಲೀನ ಮಠಾಧೀಶರು ಮತ್ತು ಇತರರು ಸ್ವತಂತ್ರ ಸಿದ್ಧಲಿಂಗೇಶ್ವರರ ಪರಂಪರೆಗೆ ಸೇರಿದವರು ಎಂಬ ಸಂಗತಿಗಳನ್ನು ಚರ್ಚಿಸಿದ್ದಾರೆ. ಆದರೆ 'ಕೈವಲ್ಯ ಕಲ್ಪವಲ್ಲರಿ'ಯ ವಸ್ತುವಿಷಯ ಮತ್ತು ಅದರೊಳಗಿನ ನೀತಿ ಅಧ್ಯಾತ್ಮ ಕುರಿತ ಅವರ ನಿಲುವು ಮುಂತಾದ ಅಂಶಗಳ ಅಧ್ಯಯನ ಕುರಿತ ಒಂದು ದೀರ್ಘ ಪ್ರಸ್ತಾವನೆ ಈ ಕೃತಿಯ ಕೊರತೆಯಾಗಿ ಕಂಡುಬರುತ್ತದೆ.

ಶಿವಪ್ಪನಾಯಕ ವಸ್ತುಸಂಗ್ರಹಾಲಯ ಮತ್ತು ಸಂಶೋಧನ ಪ್ರತಿಷ್ಠಾನ, ಬೆಕ್ಕಿನಕಲ್ಮಠ ಶಿವಮೊಗ್ಗದಿಂದ ಗೌ.ಮ. ಉಮಾಪತಿಶಾಸ್ತ್ರಿ ಅವರ ಸಂಪಾದಕತ್ವದಲ್ಲಿ ಹೊರಬಂದ "ಸ್ವರವಚನ ಸಂಚಯ"(೨೦೦೭) ಕೃತಿಯು "೧೭ನೆಯ ಶತಮಾನದ ಶರಣರ ಅಪ್ರಕಟಿತ ಸ್ವರವಚನಗಳ ಆಳವಾದ ಶಾಸ್ತ್ರೀಯ ಅಧ್ಯಯನ ನಡೆಸಿ ಸಂಪಾದಿಸಿದ ಕೃತಿ" ಎಂದು ಪ್ರಸ್ತಾವನೆಯಲ್ಲಿ ಹೇಳಲಾಗಿದೆ. ವೀರಶೈವ ಹಿನ್ನೆಲೆಯ ನಿಜಗುಣ ಶಿವಯೋಗಿಯ ನಂತರದ ರಚನೆಗಳನ್ನು ಇದರಲ್ಲಿ ಸೇರಿಸಲಾಗಿದೆ. ಇವುಗಳನ್ನು ವೀರಶೈವದ ತಾತ್ವಿಕ ನೆಲೆಯಲ್ಲಿ ಸಂಪಾದಿಸಿ ಪ್ರಕಟಿಸಲಾಗಿದೆ. ೨೦ ಜನ ಶರಣರ ೨೦೦ಕ್ಕೂ ಹೆಚ್ಚು ಸ್ವರವಚನಗಳನ್ನು ಇಲ್ಲಿ ಸಂಕಲಿಸಲಾಗಿದೆ. ಇಲ್ಲಿನ ಹಾಡುಗಳನ್ನು ಕೊನೆಗೆ ಬರುವ ಇಷ್ಟದೈವದ ಅಂಕಿತದಿಂದ ಗುರುತಿಸಬಹುದಾಗಿದೆ. ಆದರೆ ರಚನೆಕಾರರ ಹೆಸರಿನಿಂದ ಇವು ಸಂಕಲಿತವಾಗಿಲ್ಲ. ಬದಲಿಗೆ ೧. ಸ್ವಾಮಿನಮೋ, ೨. ಏಳಯ್ಯ ಬೆಳಗಾಯಿತು, ೩. ಗಣಂಗಳ ಪಾದವನೆನವುತ್ತ, ೪. ಗುರುವಿನ ನೋಡಿದೆನಮ್ಮ ೫. ಶಿವಯೋಗವ ಮಾಡು, ೬. ಧೀರನೇ ಶಿವಯೋಗಿಯೋ, ೭. ಮಾಡಿಲಿಲ್ಲವೆ ಮನವೆ, ೮. ತಂದು ತೋರೆ ಎನ್ನ ಪ್ರಾಣಕಾಂತನ, ೯. ಬಯಲ ಬಾವಿಯ ನೀರು, ೧೦. ನಯನಿನ್ನೊಳಗೆ ನೆಲೆಗೊಳಿಸು, ೧೧. ಹೇಮದಾರತಿಯ ಬೆಳಗಿದೆ. ಈ ವಿಭಾಗಗಳ ಹಿನ್ನೆಲೆಯಲ್ಲಿ ಸಂಕಲನಗೊಂಡಿದೆ. ಓದುಗರಿಗೆ ಉಪಯುಕ್ತವಾದ ಪಾರಿಭಾಷಿಕ ಪದಕೋಶ, ಅಧ್ಯಯನಪೂರ್ಣ ಪ್ರವೇಶಿಕೆ ಈ ಕೃತಿಗೆ ಕೊರತೆಯಾಗಿ ಕಂಡಿದೆ.

### ೪.೧.೨. ಸಾಹಿತ್ಯ ಪರಿಷತ್ತು ಮತ್ತು ಸಾಹಿತ್ಯ ಅಕಾಡೆಮಿಗಳು

ಕಳೆದ ತೊಂಬತ್ನಾಲ್ಕು ವರ್ಷಗಳಿಂದ ನಾಡು-ನುಡಿ-ಸಂಸ್ಕೃತಿಯ ರಕ್ಷಣೆ ಮತ್ತು ಕನ್ನಡ ವಿಕಾಸಕ್ಕಾಗಿ ಕಂಕಣಬದ್ಧವಾಗಿರುವ ಸಂಸ್ಥೆ ಕನ್ನಡ ಸಾಹಿತ್ಯ ಪರಿಷತ್ತು. ಕನ್ನಡ ಭಾಷಿಕರ ಪ್ರಾತಿನಿಧಿಕ ಸಂಸ್ಥೆಯಾದ ಪರಿಷತ್ತು, ಕನ್ನಡ ಜನಬದುಕಿನ ಬಹುಮುಖಿಯಾದ ಸಾಂಸ್ಕೃತಿಕ ಆಯಾಮಗಳಿಗೆ ಚಿಂತನೆ-ಅಕ್ಷರ-ಕ್ರಿಯೆಗಳ ಮೂಲಕ ಸ್ಪಂದಿಸುತ್ತಲೇ ನಡೆದಿದೆ. ಅದರಲ್ಲೂ ಪುಸ್ತಕ ಪ್ರಕಟಣೆಯ ಕಾರ್ಯವನ್ನು ಪರಿಷತ್ತು ನೋಂಪಿಯಂತೆ ನಿರಂತರವಾಗಿ ನಡೆಸಿಕೊಂಡು ಬಂದಿದೆ. ಸಾಹಿತ್ಯದ ಸೃಜನಶೀಲ ಕೃತಿಗಳಲ್ಲದೆ, ಸೃಜನೇತರವಾದ ಅಂದರೆ ವ್ಯಾಕರಣ, ನಿಘಂಟು, ಸಮಾಜವಿಜ್ಞಾನ, ಮನೋವಿಜ್ಞಾನ, ಚರಿತ್ರೆ, ತತ್ವಶಾಸ್ತ್ರ,

ಪರಿಶೋಧನೆ, ಶಾಸನಶಾಸ್ತ್ರ, ವಿಮರ್ಶೆ, ಸಂಶೋಧನೆ, ಜಾನಪದ ಹೀಗೆ ಹಲವಾರು ಜ್ಞಾನ ವಿಷಯಗಳ ಕೃತಿಗಳನ್ನು ಪ್ರಕಟಿಸುತ್ತಾ ಬರುತ್ತಿದೆ. ಇದೆಲ್ಲವೂ ಕನ್ನಡ ಭಾಷೆಯನ್ನು ಬಹುಮುಖಿ ಅಭಿವ್ಯಕ್ತಿಗಳಿಗೆ ಸಿದ್ಧಗೊಳಿಸುವುದೇ ಆಗಿದೆ.

ಈ ಹಿನ್ನೆಲೆಯಲ್ಲಿ ತತ್ವಪದಗಳಿಗೆ ಸಂಬಂಧಿಸಿದ ಹಾಗೆ ಶಿಶುನಾಳ ಶರೀಫರ ಪದಗಳ ಸಂಗ್ರಹವಾದ 'ಬರಕೋ ಪದ ಬರಕೋ'(೧೯೮೧) ಶಿವಾನಂದ ಗುಬ್ಬಣ್ಣನವರ ಸಂಪಾದಕತ್ವದಲ್ಲಿ ಹೊರಬಂದ ಮಹತ್ವದ ಗ್ರಂಥವಾಗಿದೆ. ಪ್ರಸ್ತುತ ಕೃತಿಯಲ್ಲಿ ೪೧೦ ಹಾಡುಗಳನ್ನು ಸಂಕಲಿಸಲಾಗಿದೆ. ಸಂಪಾದಕರು ಓದುಗರ ಅನುಕೂಲಕ್ಕಾಗಿ ೧. ದೇವಸ್ತುತಿ, ೨. ಶಕ್ತಿಸ್ತುತಿ, ೩. ಗುರುಸ್ತುತಿ, ೪. ಬೋಧ, ೫. ಸಾಧು ೬. ಶಿವಯೋಗಿ, ೭. ಮನ, ೮. ಮಾನಿನಿ, ೯. ಘಟನಾತ್ಮಕ, ೧೦. ನೀತಿ, ೧೧. ಪಶು-ಪಕ್ಷಿ-ಕೀಟ, ೧೨. ದಂಡಕ, ೧೩. ಕಾಲಜ್ಞಾನ, ೧೪. ಲಾವಣಿ ೧೫. ಹೋಳೀಪದ ೧೬. ಮಂಗಳಾರತಿ, ೧೭. ರಿವಾಯತ್ ಎಂದು ಹದಿನೇಳು ಭಾಗಗಳನ್ನಾಗಿ ವಿಂಗಡಿಸಿದ್ದಾರೆ.

ಶರೀಫರ ಹಾಡುಗಳು ಅವರ ಶಿಷ್ಯ ಬಳಗದವರು ಮೌಖಿಕವಾಗಿ ಒಬ್ಬರಿಂದೊಬ್ಬರು ಹೇಳುತ್ತಾ ರಕ್ಷಿಸಿಕೊಂಡು ಬಂದಂತ ಹಾಡುಗಳು ಇವೆ. ಪ್ರಸ್ತುತ ಹಾಡುಗಳನ್ನು ಅರ್ಜುನಪ್ಪ ಮಡಿವಾಳರ ಮತ್ತು ಶರೀಫರ ವಂಶಜನೆಂದು ಹೇಳುವ ಹಜರೇಶ ಸಾಹೇಬನಿಂದ ಹಾಡಿಸಿ ಸಂಗ್ರಹಿಸಿದ ಹಾಡುಗಳಾಗಿವೆ. ಈ ಹಿನ್ನೆಲೆಯಲ್ಲಿ ಈ ಸಂಕಲನಕ್ಕೆ 'ಬರಕೋ ಪದ ಬರಕೋ' ಎನ್ನುವ ಶರೀಫರ ಹಾಡಿನ ಸಾಲನ್ನು ಸೂಚಿಸಿರುವುದು ಔಚಿತ್ಯಪೂರ್ಣವೇ ಆಗಿದೆ. ಶರೀಫರ ಸಮಗ್ರ ಹಾಡುಗಳು ಇದರಲ್ಲಿ ಸೇರಿಲ್ಲವಾದರೂ ಈಗ ದೊರೆತಿರುವ ಅಷ್ಟೂ ಹಾಡುಗಳು ಒಂದೆಡೆ ಸಂಕಲಿಸಿದ ಗ್ರಂಥ ಇಲ್ಲವೆನ್ನಬೇಕು. ಇವುಗಳನ್ನು ಶಾಸ್ತ್ರೀಯವಾಗಿ ವಿಂಗಡಿಸಿ, ಸುದೀರ್ಘ ಪ್ರಸ್ತಾವನೆ ಬರೆಯಲಾಗಿದೆ. ಶರೀಫರ ಜೀವನ, ಬಾಲ್ಯ ಶಿಕ್ಷಣ ಕುರಿತಾಗಿ ಮತ್ತು ಗುರು ಪಡೆದ ಸನ್ನಿವೇಶಗಳನ್ನು ಸಂದರ್ಭಾನುಸಾರ ವಿವರಿಸಿದ್ದಾರೆ. ಸಂಸಾರದ ತಳಮಳದಿಂದಾಗಿ ತೀವ್ರ ವಿಚಲಿತನಾದ ಶರೀಫ್ ನಾಡಿನ ಸಾಧು ಸತ್ಪುರುಷರ ದರುಶನ ಪಡೆದದ್ದು ಹಾಗೂ ಅವರು ದೇಹ ತ್ಯಾಗ ಸಂದರ್ಭ ವಿವಾದ ಕುರಿತ ಸಂಗತಿಗಳನ್ನು ವಿವರವಾಗಿ ಚರ್ಚಿಸಿದ್ದಾರೆ.

ಅವರ ಹಾಡುಗಳಲ್ಲಿ ಪರಮಾತ್ಮನೊಡನೆ ಸಮರಸಗೊಂಡು ಅಮೃತತ್ವ ಪಡೆಯುವ ಜೀವಾತ್ಮದ ಹಂಬಲವನ್ನು ಸಾಧಿಸುವ ಕುರಿತ ಅವರ ಅನುಭಾವ ಮಾರ್ಗವನ್ನು ಹೇಳಲಾಗಿದೆ. ಹಾಗೆಯೇ ಶರೀಫರು ದೇಶಿಯ ವಸಾಹತುವೆನಿಸಿದ ಪುರೋಹಿತ ವರ್ಗದವರ ವಿಡಂಬಿಸಿರುವುದನ್ನು ಗುರುತಿಸಲಾಗಿದೆ. ಮುಗ್ಧ ಜನಗಳನ್ನು ಧಾರ್ಮಿಕ ಅಂಧಶ್ರದ್ಧೆ, ಗೊಡ್ಡು ಸಂಪ್ರದಾಯಗಳಿಗೆ ಬಲಿಪಶು ಮಾಡುತ್ತಿದ್ದ ಅವರ ಅನಿಷ್ಟಗಳ ವಿರುದ್ಧ ಹಾಗೆಯೇ ಬ್ರಿಟಿಷರ ಆಳ್ವಿಕೆಯಲ್ಲಿ ಬಳಲುತ್ತಿದ್ದ ಜನಗಳಿಗೂ ನೈತಿಕ ಶಕ್ತಿಯನ್ನು ತುಂಬುವ ಕೆಲಸ ಮಾಡಿರುವುದನ್ನು ಚರ್ಚಿಸಿದ್ದಾರೆ. ನೀತಿ ಬೋಧನೆಯೇ ಮುಖ್ಯವಾದ ಅವರ ಹಾಡುಗಳ

ವೈಶಿಷ್ಟ್ಯತೆಗಳನ್ನು ಕುರಿತೂ ಚರ್ಚಿಸಲಾಗಿದೆ. ಹೀಗೆ ಬಹುಮುಖ ವ್ಯಕ್ತಿತ್ವವನ್ನು ಹೊಂದಿದ ಶರೀಫ್ ಅವರ ಜೀವನದ ವಿವರಗಳನ್ನು ಸಂಪಾದಕರು ಕಲೆ ಹಾಕಿದ್ದಾರೆ.

ಈ ಕೃತಿಯ ಅನುಬಂಧದಲ್ಲಿ ಶರೀಫರ ಹಾಡುಗಳಲ್ಲಿ ಬರುವ ಅಲ್ಲಿಕೇರಿ, ಕನ್ನೆಯಾಮಾಸಿ, ಗುಗ್ಗಳ, ರಂಡೀಹುಣ್ಣಿವೆ, ಜೋಗವ್ವ, ಐಸುರ, ಮೊಹರಮ್, ಕಲ್ಮಾ, ಜಾರತ್ ಮುಂತಾದ ೩೧ ಪದಗಳ ವಿವರವಾದ ಟಿಪ್ಪಣಿಗಳು ಶರೀಫರ ಹಾಡುಗಳಲ್ಲಿ ಬರುವ ಅಂಕಲಗಿ, ಅಗಡಿ, ಅಣ್ಣಿಗೇರಿ, ಅತ್ತಿಗೇರಿ, ಉಗರಗೋಳ, ಉಳವಿ, ಕಡಕೋಳ, ಕಬನೂರ, ಕರಡೀಗುಡ್ಡ ಮುಂತಾದ ೪೬ ಊರುಗಳ ಪರಿಚಯ ಮತ್ತು ಶರೀಫರು ಒಡನಾಡಿದ ಆಧ್ಯಾತ್ಮಿಕ ಹಿನ್ನೆಲೆಯ ವಿಶೇಷತೆಯನ್ನು ವಿವರವಾಗಿ ಪರಿಚಯಿಸಿದ್ದಾರೆ. ಅಲ್ಲದೇ ಹಾಡಿನ ಮೊದಲ ಚರಣಗಳ ಅಕಾರಾದಿಯನ್ನು ಗ್ರಾಮ್ಯ ಪದಕೋಶ, ಪಾರಿಭಾಷಿಕ ಪದಕೋಶ, ವಿಶಿಷ್ಟ ಪದಕೋಶಗಳು. ಈ ಕೃತಿಯ ಹೆಚ್ಚುಗಾರಿಕೆಯಾಗಿವೆ ಎನಿಸುತ್ತದೆ.

ಶರೀಫರ ಹಾಡುಗಳ ಕುರಿತು ಸಂಪಾದಿಸಲಾದ ಈ ಕೃತಿಯು ಇವರ ಹಾಡುಗಳ ಸಂಪಾದನೆ ಕುರಿತು ಬಂದ ಕೃತಿಗಳಲ್ಲೇ ವಿಶಿಷ್ಟ ಮತ್ತು ಸಮಗ್ರವಾದುದು. ಎಂತಲೇ ೧೯೯೩ರಲ್ಲಿ ಅಕ್ಷಯ ಪ್ರಕಾಶನದ ಮೂಲಕ 'ಶಿಶುನಾಳ ಶರೀಫ ಗೀತೆಗಳು' ಎಂಬ ಹೆಸರಿನಲ್ಲಿ ಮತ್ತೆ ಹೊಸ ಐದು ಹಾಡುಗಳು ಸೇರಿಸುವ ಮೂಲಕ ಪುನರ್ ಮುದ್ರಣಗೊಂಡ ಪರಿಷ್ಕೃತ ಆವೃತ್ತಿಯಾಗಿದೆ. ಇದು ಇದರ ಮಹತ್ವವನ್ನು ಬಿಂಬಿಸುತ್ತದೆ.

ಪರಿಷತ್ತಿನಿಂದ ಹೊರಬಂದ ಮತ್ತೊಂದು ಕೃತಿ ಹೇರೂರು ವಿರುಪನಗೌಡನ 'ಕೈವಲ್ಯಮಂಜರಿ' (ತತ್ವಪದಗಳು)(೨೦೦೬) ಶಾಶ್ವತಸ್ವಾಮಿ ಮುಕ್ಕುಂದಿಮಠ ಅವರು ಸಂಪಾದಿಸಿದ್ದಾರೆ. ಈ ಮೊದಲು ರಾಯಚೂರು ಜಿಲ್ಲೆಯ ೨೩ ತತ್ವಪದಕಾರರ ಚರಿತ್ರೆಯನ್ನು ಒಳಗೊಂಡ 'ರಾಯಚೂರು ಜಿಲ್ಲೆಯ ಅನುಭಾವಿಗಳು'(೧೯೯೬) ಬಸವರಾಜ ಸಬರದ ಸಂಪಾದಕತ್ವದಲ್ಲಿ ಹೊರಬಂದಿದೆ. ಪ್ರಸ್ತುತ 'ಕೈವಲ್ಯ ಮಂಜರಿ' ಕೃತಿಯನ್ನು ಮೂರು ಮುದ್ರಿತ ಪ್ರತಿಗಳು ಮತ್ತು ಒಂದು ಹಸ್ತಪ್ರತಿ ನೆರವಿನಿಂದ ಸಂಕಲಿಸಿದ್ದಾಗಿದೆ. ಈ ಸಂಕಲನದಲ್ಲಿ ೪೨ ತತ್ವಪದಗಳು, ಶಿವಸ್ತುತಿ, ಶೋಭಾನೆಪದ, ಬುಡುಬುಡುಕಿಯಪದ, ಪಾರ್ವತಿಸ್ತೋತ್ರ, ಶ್ರೀ ರುದ್ರೇಶ್ವರ ಶತಕ, ಮಂಗಳಾರತಿ ಪದಗಳು ಸೇರಿ ಒಟ್ಟು ೪೮ ಹಾಡುಗಳು ಸೇರಿವೆ. ಪಾಠಾಂತರಗಳನ್ನು ಆಯಾ ಹಾಡುಗಳ ಕೆಳಗೆ ಕೊಡಲಾಗಿದೆ. ಪದಗಳ ಮೂಲ ಶುದ್ಧತೆಯ ಕಡೆಗೆ ಇವರ ಸಂಪಾದನೆಯ ಶಾಸ್ತ್ರೀಯತೆ ಕೆಲಸ ಮಾಡಿದೆ. ಇಲ್ಲಿನ ಪದಗಳಲ್ಲಿ ಪಲ್ಲವಿ, ಅನುಪಲ್ಲವಿಗಳನ್ನು ಗುರುತಿಸಲಾಗಿದೆ. ನುಡಿಗಳನ್ನು ಪ್ರತ್ಯೇಕವಾಗಿ ವಿಭಜಿಸಲಾಗಿದೆ.

ಪ್ರಸ್ತಾವನೆಯಲ್ಲಿ ವಿರುಪನಗೌಡನ ಜೀವನ ಕುರಿತ ಸಂಕ್ಷಿಪ್ತ ವಿವರವಿದೆ. ಸುಭೇದಾರ ಕೋಪಗೊಂಡು ವಿರುಪಣ್ಣನನ್ನು ಬೈದು ಅವಮಾನಿಸಿದ್ದಕ್ಕಾಗಿ ಸುಭೇದಾರನ ಕೆಲಸ ಹೋಗುತ್ತದೆ. ನಂತರ ಸುಭೇದಾರ ಬಂದು ವಿರುಪಣ್ಣನಲ್ಲಿ ಕ್ಷಮೆ ಕೇಳಲು, ಹೋದ ಕೆಲಸ ಮತ್ತೆ ಸಿಗುವ ಪವಾಡ.

ವಿರುಪಣ್ಣನ ಗಂಡುಸುತನವನ್ನು ಸಂಶಯಿಸಿ ಅಪಹಾಸ್ಯ ಮಾಡಿದ ಕಂಬಾರ ಕಾಳಪ್ಪನಿಗೆ ತನ್ನ ಗಂಡುಸುತನವನ್ನು ತೋರಿಸಿದ ಪ್ರಸಂಗ, ಕಣ್ಣಿಲ್ಲದ ಕುರುಡನಿಗೆ ಕಣ್ಣುಗಳನ್ನಿತ್ತ ಪವಾಡ, ಸರ್ಪರೂಪ ಧರಿಸಿ ಮುದ್ದಮ್ಮ ಕಲ್ಲನಾಗನಿಗೆ ನೈವೇದ್ಯ ತೋರಿಸಿ ಜಗುಲಿಯ ಮೇಲಿಟ್ಟ ಹಾಲನ್ನು ಕುಡಿದು ತಾಯಿಗೆ ಮತ್ತೆ ನಿಜರೂಪ ತೋರಿಸಿದ್ದು. ಜಗದ್ಗುರುಗಳ ಕೈಲಿದ್ದ ಇಷ್ಟಲಿಂಗ ವಿರುಪನು ಕರೆಯಲು ಲಿಂಗ ಬಂದು ಕೈಲಿ ಕುಳಿತ ಪವಾಡ, ಮಹಾಪ್ಲೇಗು ಮಾರಿಯನ್ನು ಊರ ಹೊರಗೋಡಿಸಿದ ಪವಾಡ, ಗೌಡನ ಸೊಸೆಯ ತುಪ್ಪದ ಗಡಿಗೆಯ ಪ್ರಸಂಗ, ಕಂಪ್ಲಿಯ ಯಂಕೋಬಶಾಸ್ತ್ರಿಗಿದ್ದ ಎಲ್ಲ ಸಂಕಷ್ಟಗಳನ್ನು ನಿವಾರಿಸಿದ್ದು. ಇವೇ ಮೊದಲಾದ ಪವಾಡ ಸಂಗತಿಗಳನ್ನು ಕುರಿತು ವಿವರಿಸಿದ್ದಾರೆ.

ವಿರುಪನಗೌಡನ ತತ್ವಪದಗಳು ಆಡುನುಡಿಯಲ್ಲಿವೆ. ಗ್ರಾಮೀಣಭಾಷೆಯ ಸೊಗಡು ಈ ಪದಗಳಿಗೆ ವಿಶೇಷತೆಯನ್ನು ನೀಡಿದೆ. ಗಂಭೀರವಾದ ತತ್ವಾರ್ಥದ ಸಾರವನ್ನು ತುಂಬಿಕೊಂಡಿವೆ. ಜೀವೇಶ್ವರೈಕ್ಯತತ್ವ ಮತ್ತು ಅದ್ವೈತ ಸಿದ್ಧಾಂತವನ್ನು, ಸಾಮಾಜಿಕ ಪ್ರಜ್ಞೆ ಮತ್ತು ಕಳಕಳಿಯ ಪದಗಳೂ, ನೀತಿ ಬೋಧನೆಗಳೂ ಈ ಸಂಕಲನದ ಹಾಡುಗಳ ವಸ್ತುಗಳಾಗಿವೆ. ಆದರೆ ಪಾರಿಭಾಷಿಕ ಪದಕೋಶ, ಅರ್ಥಕೋಶಗಳು ನೀಡದೇ ಇರುವುದು ಈ ಗ್ರಂಥದ ಕೊರತೆಯಾಗಿದೆ. ಗ್ರಾಮೀಣ ಪ್ರದೇಶದ ನುಡಿಗಟ್ಟುಗಳೇ ಈ ತತ್ವಪದಗಳಲ್ಲಿ ಹೆಚ್ಚಾಗಿವೆ. ಪ್ರದೇಶದಿಂದ ಪ್ರದೇಶಕ್ಕೆ ಭಾಷೆಯ ಅರ್ಥಸಾಧ್ಯತೆಗಳು ಭಿನ್ನವಾಗಿವೆ. ಈ ದೃಷ್ಟಿಯಿಂದ ಅರ್ಥಕೋಶ ಕೊಡುವುದು ಓದುಗರ ಸಂವಹನಕ್ಕೆ ಉಪಯುಕ್ತವಾದುದು. ಹಾಡುಗಳನ್ನು ಅರಿಯುವಲ್ಲಿ ಸಹಾಯಕವಾದುದು.

**ಕರ್ನಾಟಕ ಸಾಹಿತ್ಯ ಅಕಾಡೆಮಿ :** ಕನ್ನಡ ಸಾಹಿತ್ಯ ಪರಿಷತ್ತಿನಂತೆಯೇ ಕರ್ನಾಟಕ ಸಾಹಿತ್ಯ ಅಕಾಡೆಮಿಯು ಕನ್ನಡ ಸಾಹಿತ್ಯ ಪರಂಪರೆಯ ಪರಿಚಯವನ್ನು ಗ್ರಂಥಗಳ ಮೂಲಕ ಮಾಡಿಕೊಡುವ ಉದ್ದೇಶ ಹೊಂದಿದೆ. ಅವಜ್ಞೆಗೆ ಒಳಗಾದ ಕನ್ನಡ ಕಾವ್ಯದ ಸ್ಥಗಿತ ಸ್ಥಿತಿಗೆ ದೇಶಿಯವಾದ ಹೊಸ ನೆಲೆಯನ್ನು ಕಂಡುಕೊಳ್ಳುವ ಪ್ರಯತ್ನವೂ, ಸಂಸ್ಕೃತಿಯನ್ನು ಪರಿಚಯಿಸುವ ಆಶಯವೂ ಹೊಂದಿದೆ. ಅಂತೆಯೇ ತತ್ವಪದಗಳ ಮಹತ್ವವನ್ನು ಮನಗಂಡು 'ಮುತ್ತಿನ ಹಾರ'(೧೯೯೬ರಿಂದ) ಮಾಲಿಕೆಯಲ್ಲಿ ಅನೇಕ ಕೃತಿಗಳನ್ನು ಹೊರತಂದಿದೆ. ವಚನಕಾರರು ದಾಸರು ಕುರಿತ ಕೃತಿಗಳೂ ಈ ಹಿನ್ನೆಲೆಯಲ್ಲಿಯೇ ಪ್ರಕಟವಾಗಿವೆ. ಈಗಾಗಲೇ ಪ್ರಕಟವಾದ ತತ್ವಪದಗಳ ಮಹತ್ವದ ಕೃತಿಗಳಿಂದ ಕೆಲವು ಹಾಡುಗಳನ್ನು ಆಯ್ದು ಪ್ರಕಟಿಸಲಾಗಿದೆ. ತತ್ವಪದಗಳು ಹೆಚ್ಚಾಗಿ ಮೌಖಿಕವಾಗಿರುವುದರಿಂದ ಅವುಗಳನ್ನು ಕ್ಷೇತ್ರಕಾರ್ಯದ ಮೂಲಕವೂ ಹಾಡುವ ಹಾಡುಗಾರರಿಂದಲೂ ಅವುಗಳನ್ನು ಸಂಗ್ರಹಿಸಿ ಕೊಡಲಾಗಿದೆ. ಅಂತವುಗಳಲ್ಲಿ 'ಎಸ್.ಜಿ.ಸ್ವಾಮಿಯವರು ಸಂಪಾದಿಸಿದ 'ಕೂಡಲೂರು ಬಸವಲಿಂಗಪ್ಪ', ಟಿ.ಎಂ.ಭಾಸ್ಕರ್ ಅವರ 'ಕ್ಯಾನಳ್ಳಿ ಹೊನ್ನಪ್ಪ ಮಹಾರಾಜ', ಸ.ರಘುನಾಥ ಅವರ 'ಕೈವಾರ ನಾರೇಯಣ' ಮುಖ್ಯವಾದವು. ಈ ಯೋಜನೆಯ ಮೂಲಕ ಉಪೇಕ್ಷೆಗೆ ಒಳಗಾಗಿದ್ದ ಅನೇಕ ತತ್ವಪದಕಾರರು ಬೆಳಕಿಗೆ ಬಂದಿದ್ದು ಇದರ

ವೈಶಿಷ್ಟ್ಯವಾಗಿದೆ. ಹೀಗಾಗಿ ರಾಮಪುರದ ಬಕ್ಕಪ್ಪ, ಮೋಟ್ನಳ್ಳಿ ಹಸನಸಾಬ, ಮಹಾಗಾಂವ ಮೀರಾಸಾಬ, ಗ್ಯಾಗಾಲು ಗುಂಡಪ್ಪ ಮುಂತಾದವರ ತತ್ವಪದಗಳು ಮೊಟ್ಟಮೊದಲು ಪ್ರಕಟಗೊಂಡಿವೆ. ತತ್ವಪದಕಾರರ ಹೆಸರಿನ ಮೂಲಕವೇ ಅವರ ಹಾಡುಗಳನ್ನು ಸಂಕಲಿಸಿಕೊಡಲಾಗಿದೆ.

ತತ್ವಪದಕಾರರಲ್ಲಿ ಪ್ರಸಿದ್ಧರಾದ ನಿಜಗುಣ ಶಿವಯೋಗಿ, ಕಡಕೋಳ ಮಡಿವಾಳಪ್ಪ, ಶಿಶುನಾಳ ಶರೀಫ್, ಕೂಡಲೂರು ಬಸವಲಿಂಗ, ಬಾಲಲೀಲಾ, ಖೇಮಣ್ಣ, ಸಾವಳಗಿ ಮಹಮ್ಮದ ಸಾಬ, ಶಂಕರಾನಂದ ಶಿವಯೋಗಿ, ಖೈನೂರು ಕೃಷ್ಣಪ್ಪ, ರಾಮಪುರದ ಬಕ್ಕಪ್ಪ, ಮೋಟ್ನಹಳ್ಳಿ ಹಸನಸಾಬ, ಕೈವಾರ ನಾರಾಯಣ, ಸರ್ಪಭೂಷಣ ಶಿವಯೋಗಿ, ಘನಮಠ ನಾಗಭೂಷಣ ಶಿವಯೋಗಿ, ಮಹಾಗಾಂವ ಮೀರಾಸಾಬ, ಮುಪ್ಪಿನ ಷಡಕ್ಷರಿ, ಕೊಳ್ಳೂರು ಹುಸನ ಸಾಹೇಬ, ಕ್ಯಾನಳ್ಳಿ ಹೊನ್ನಪ್ಪ ಮಹಾರಾಜ, ಗಬ್ಬೂರ ಹಂಪಣ್ಣ, ದ್ಯಾಗಾಯಿ ಗುಂಡಪ್ಪ, ನೀರಲಕೆರೆ ಬಸವಲಿಂಗ ಶರಣರು ಸೇರಿದಂತೆ ಅನೇಕ ಕೃತಿಗಳು ಹೊರಬಂದಿವೆ. ಈ ಎಲ್ಲ ಕೃತಿಗಳಲ್ಲೂ ತತ್ವಪದಕಾರರ ಜೀವನ, ಸಾಧನೆ ಅವರ ಹಾಡುಗಳ ವೈಶಿಷ್ಟ್ಯ, ವ್ಯಕ್ತಿತ್ವ ಕುರಿತಾದ ಪರಿಚಯಾತ್ಮಕ ಪ್ರಸ್ತಾವನೆ ಇದೆ. ಇದು ಕೃತಿಯ ಪ್ರವೇಶಕ್ಕೆ ಓದುಗರಿಗೆ ಉಪಯುಕ್ತವಾಗಿದೆ. ಕೊನೆಯಲ್ಲಿ ಶಬ್ದಾರ್ಥಕೋಶ, ಭಾವಕೋಶ ಈ ಹಾಡುಗಳ ಅರಿಯುವಲ್ಲಿ ನೆರವಾಗುತ್ತವೆ. ಹಾಡಿನ ಮೊದಲ ಸಾಲುಗಳೇ ಪದಗಳ ಶೀರ್ಷಿಕೆಯಾಗಿವೆ. ರಾಗ ತಾಳಗಳ ಸೂಚನೆಯೂ ಕೆಲವು ಕೃತಿಗಳಲ್ಲಿ ಸೂಚಿಸಲಾಗಿದೆ. ಜನಪ್ರಿಯ ಹಾಡುಗಳೇ ಹೆಚ್ಚಾಗಿ ಸಂಕಲಿಸಲಾಗಿದೆ. ಜಿ.ವಿ. ಆನಂದಮೂರ್ತಿ ಅವರು ಸಂಪಾದಿಸಿದ 'ತತ್ವಪದಕಾರರು'(೧೯೯೬) ಕೃತಿಯೂ ಈ ನಿಟ್ಟಿನಲ್ಲಿ ಮಹತ್ವವಾದುದು. ಇವರು ಕನಕದಾಸರ ಹಾಡುಗಳನ್ನೂ ತತ್ವಪದಗಳಲ್ಲಿ ಸೇರಿಸಿದ್ದಾರೆ. ತತ್ವಪದಗಳು ಕನ್ನಡ ಸಂಸ್ಕೃತಿಯಲ್ಲಿ ಮಾತ್ರ ಇರುವಂತವಲ್ಲ ಅವು ಸೂಫಿ, ಝೆನ್, ವಚನಗಳು, ಬಾನಿ, ದೋಹಾ ಹೀಗೆ ನಾನಾ ರೂಪದಲ್ಲಿ, ರೂಪಕದಲ್ಲಿ ಬೆಳೆದಂತವು ಎನ್ನುತ್ತಾರೆ. ಕ್ರಿ.ಶ.೧ರಿಂದ ೨ನೇ ಶತಮಾನದಲ್ಲಿ ಆರಂಭವಾದ ಈ ಪರಂಪರೆ ಇಂದಿನವರೆಗೂ ಜೀವಂತವಾಗಿದೆ[೩] ಎಂದು ಇವುಗಳ ವ್ಯಾಪಕತೆಯನ್ನು ಗುರುತಿಸುತ್ತಾರೆ. ಅನುಬಂಧದಲ್ಲಿ ತತ್ವಪದಕಾರರ ಸಂಕ್ಷಿಪ್ತ ವಿವರಗಳಿವೆ. ಪದಕೋಶ ನೀಡಲಾಗಿದೆ ಯಾದರೂ ಓದುಗರ ದೃಷ್ಟಿಯಿಂದ ಇನ್ನಷ್ಟು ಪದಗಳ ಅರ್ಥಕೋಶ ಕೊಡಬೇಕಿತ್ತು.

'ಕರ್ನಾಟಕ ಕರಾವಳಿ ಪ್ರದೇಶವನ್ನು ಹೊರತುಪಡಿಸಿ ಉಳಿದೆಲ್ಲ ಭಾಗಗಳಲ್ಲಿ ತತ್ವಪದಕಾರರು ಕಾಣಸಿಗುತ್ತಾರೆ. ಉತ್ತರ ಮತ್ತು ಹೈದ್ರಾಬಾದ್ ಕರ್ನಾಟಕ ಭಾಗಗಳಲ್ಲಿ ಇವರ ಸಂಖ್ಯೆ ಹೆಚ್ಚು. ಇಂದಿಗೂ ಆ ಭಾಗಗಳಲ್ಲಿ ತತ್ವಪದಕಾರರು ಜೀವಂತವಾಗಿದ್ದಾರೆ. ಆದರೆ ಅವರು, ಅವರ ಸಾಹಿತ್ಯ ನಿರ್ಲಕ್ಷ್ಯಕ್ಕೆ ಒಳಗಾಗಿದೆ. ಈ ಕುರಿತು ಸಾಹಿತ್ಯ ಚಿಂತಕರು ಗಮನ ಹರಿಸಿಲ್ಲ''[೪] ಎನ್ನುವ ಉದ್ದೇಶದ ಹಿನ್ನೆಲೆಯಲ್ಲಿ ಅಕಾಡೆಮಿಯಿಂದ ಬಹಳ ಮಹತ್ವದ ಮತ್ತು ಪ್ರಾತಿನಿಧಿಕವಾದ 'ತತ್ವಪದಗಳ'(೨೦೦೦) ಸಂಗ್ರಹ ಕೃತಿ ಮೊದಲ ಬಾರಿಗೆ ಓ.ಎಲ್.ನಾಗಭೂಷಣಸ್ವಾಮಿ ಮತ್ತು ಇತರರ ಸಂಪಾದಕತ್ವದಲ್ಲಿ

ಹೊರಬಂದಿದೆ. ಈ ಸಂಕಲನದಲ್ಲಿ ೧೫೪ ತತ್ವಪದಕಾರರ ೪೧೧ ರಚನೆಗಳು ಮತ್ತು ಅಜ್ಞಾತ ತತ್ವಪದಕಾರರ ೧೮೫ ತತ್ವಪದಗಳು ಇವೆ. ಇಲ್ಲಿನ ಹಾಡುಗಳನ್ನು ಮೊದಲ ಸಾಲುಗಳ ಅಕಾರಾದಿಯಲ್ಲಿ ಜೋಡಿಸಿದೆ. ಕರ್ತೃವಿಗಿಂತ ಅವರ ರಚನೆಗಳು ಮುಖ್ಯ ಎಂಬ ಧೋರಣೆ ಈ ಸಂಕಲನಕಾರರದು. ಪ್ರತಿ ಹಾಡಿನ ಕೊನೆಗೆ ಆಯಾ ಹಾಡಿನ ಕರ್ತೃ, ಅಂಕಿತ ಹಾಗೂ ಆ ರಚನೆಯನ್ನು ಎಲ್ಲಿಂದ ಪಡೆಯಲಾಗಿದೆಯೆಂಬ ಆಕರಗಳನ್ನು ಸೂಚಿಸಲಾಗಿದೆ. ಕನ್ನಡ ಸಂಸ್ಕೃತಿಯ ಅಧ್ಯಯನಕ್ಕೆ ಪೂರಕವಾದ ಹಾಡುಗಳು ಈ ಸಂಕಲನದಲ್ಲಿ ಸೇರಿವೆ.

ಇಂಥ ಮಹತ್ವದ ಗ್ರಂಥಕ್ಕೆ ಅಧ್ಯಯನ ಪೂರ್ಣ ಪ್ರಸ್ತಾವನೆ ಬರೆಯಲಾಗಿದೆ. ಕನ್ನಡ ತತ್ವಪದಗಳನ್ನು ಕುರಿತು ಕಳೆದ ೧೦-೧೫ ವರ್ಷಗಳಿಂದ ಆಸಕ್ತಿ ಮೂಡಿದ ಹಾಗೂ ಮೂಡದೇ ಇರುವ ಕಾರಣಗಳನ್ನು ಗುರುತಿಸಲಾಗಿದೆ. ಪಾಶ್ಚಾತ್ಯ ಶಿಕ್ಷಣದ ಪ್ರಭಾವದಿಂದ ಸಾಹಿತ್ಯದ ಪರಿಕಲ್ಪನೆ ಬದಲಾಯಿತು. ಅಂತೆಯೇ ಸಾಹಿತ್ಯದ ಮಾನವಿಕ ಅಧ್ಯಯನಗಳಿಂದಲೂ ಜಾನಪದ ಕಲ್ಪನೆಯಿಂದಲೂ, 'ತತ್ವಪದಗಳು' ದೂರ ಉಳಿದವು. ನಗರದ ಬದುಕು, ವೈಯಕ್ತಿಕ ಭಾವ, ಇವು ಮಾತ್ರ ಸಾಹಿತ್ಯಕ ವಿಶ್ಲೇಷಣೆಗೆ ಮುಖ್ಯವಾದವು. ಧರ್ಮ ನಿರಪೇಕ್ಷೆ ಮತ್ತು ವೈಚಾರಿಕತೆ ಎಂಬ ಆದರ್ಶಗಳು ಕನ್ನಡದ ಶಿಕ್ಷಿತ ಮನಸ್ಸಿಗೆ ಮುಖ್ಯವಾದವು. ಹೀಗಾಗಿ ಧರ್ಮ ಮತ್ತು ಭಕ್ತಿಯಂತ ವಿಷಯಗಳ ಅಧ್ಯಯನ ಅಮುಖ್ಯವಾದವು ಎಂದು ಅಧ್ಯಯನದ ಉಪೇಕ್ಷೆ ಕುರಿತು ಚರ್ಚಿಸಲಾಗಿದೆ.

ಇತ್ತಿಚೆಗೆ ಸಾಹಿತ್ಯ ಶುದ್ಧ ಸಾಹಿತ್ಯವಾಗಿ ಉಳಿದಿಲ್ಲ. ಬದಲಾಗಿ ಅದು ರಾಜಕೀಯ, ಸಾಮಾಜಿಕ, ಧಾರ್ಮಿಕ, ಆರ್ಥಿಕವೆಂಬ ವಿಶಾಲ ಪರಿಕಲ್ಪನೆಯ ನೆಲೆಯಲ್ಲಿ ವಿಸ್ತರಿಸಿಕೊಂಡಿದೆ. ಈ ನೆಲೆಯ ಅಧ್ಯಯನಗಳಲ್ಲಿ ಹೊಸ ತಿಳುವಳಿಕೆಯನ್ನು ಪಡೆಯಬಹುದು ಎಂಬ ಧೋರಣೆಯೂ ಕಾಣುತ್ತಿದೆ. ಈ ಹಿನ್ನೆಲೆಯಲ್ಲಿ ಮೂರು ದೃಷ್ಟಿಕೋನಗಳು ತತ್ವಪದ ಅಧ್ಯಯನಗಳಲ್ಲಿ ಪ್ರಧಾನವಾಗಿ ಕೆಲಸ ಮಾಡಿರುವುದನ್ನು ಗುರುತಿಸಲಾಗಿದೆ. ಭಕ್ತಿ, ಧರ್ಮ, ದೇವರು ಮುಂತಾದ ವಿಷಯಗಳಲ್ಲಿ ನಡೆದ ಅಧ್ಯಯನಗಳು ಎಂದು, ತತ್ವಪದಗಳು ಪಲಾಯನವಾದಿ, ಶರಣಾಗತಿ, ಕೀಳರಿಮೆಗಳ ಅಭಿವ್ಯಕ್ತಿ ಎಂದು ವಿಚಾರವಾದದ ಹಿನ್ನೆಲೆಯಲ್ಲಿ ನಡೆದ ಅಧ್ಯಯನಗಳು ಮತ್ತು ವಸಾಹತುಶಾಹಿ ಅನುಭವಕ್ಕೆ ತೋರಿದ ಪ್ರತಿಕ್ರಿಯೆಗಳೆಂದು ಗುರುತಿಸಲಾಗಿದೆ.

ತತ್ವಪದಗಳು ಕೇವಲ ಕಾವ್ಯ ಪ್ರಕಾರವಲ್ಲ. ಜನಸಮುದಾಯಗಳು ಬದುಕಿನ ವಿವರಗಳ ಮೂಲಕ ಬೆಳಕು ಕಾಣುವ ಸಾಮೂಹಿಕ ಚಹರೆಯುಳ್ಳವು ಎಂಬುದನ್ನು ಕಾಣಿಸಲಾಗಿದೆ. ಇವು ಅನೇಕ ಪಠ್ಯಗಳನ್ನೊಳಗೊಂಡ ಸಂಕೀರ್ಣ ಪಠ್ಯಗಳಾಗಿವೆ. ಅವುಗಳ ಲಕ್ಷಣ ಬಹುಸಂಸ್ಕೃತಿ, ಬಹು ದೇವತೋಪಾಸನೆ, ಜಾತಿಕಟ್ಟುಗಳ ಮೀರುವಿಕೆ, ಬಹುಭಾಷಿಕ ಬಳಕೆಯ ವಿಶಿಷ್ಟತೆ, ಈ ಮುಂತಾದ ಅಂಶಗಳ ಜೊತೆಗೆ ಜನ ಜೀವನದ ಮೇಲೆ ಬೀರಿದ ಪ್ರಭಾವ ಒಡೆದು ಕಾಣಬಹುದು ಎಂದು ವಿಶ್ಲೇಷಿಸಲಾಗಿದೆ.

ಕೊನೆಗೆ ಅನುಬಂಧ-೧ರಲ್ಲಿ ಕೆಲವು ತತ್ವಪದಗಳಲ್ಲಿನ ಕುಟ್ಟುವ ಹಾಡು ಮತ್ತು ಸೋಬಾನೆ ಹಾಡುಗಳ ಮಾದರಿಯನ್ನು ನೀಡಲಾಗಿದೆ. ಅಂಥ ೧೫ ಹಾಡುಗಳು ಇವೆ. ಅನುಬಂಧ-೨ರಲ್ಲಿ ತತ್ವಪದಗಳ ಬೇರೆ ಬೇರೆ ಲೇಖಕರ ಒಂದೇ ತರದ, ಪರಸ್ಪರ ಸಾಮ್ಯವುಳ್ಳ(೧೦) ಹಾಡುಗಳು ಇವೆ. ಅನುಬಂಧ-೩ರಲ್ಲಿ 'ತತ್ವಪದಗಳ ಕರ್ತೃ-ಕೃತಿಸೂಚಿ' ಇವೆ. ಅನುಬಂಧ-೪ರಲ್ಲಿ ಅಜ್ಞಾತ ತತ್ವಪದಕಾರರ ಸೂಚಿ ಮತ್ತು ಅಂಕಿತಗಳು ಇವೆ. ಅನುಬಂಧ-೫ರಲ್ಲಿ 'ತತ್ವಪದಕಾರರ ಸಂಕ್ಷಿಪ್ತ ಪರಿಚಯ, ಅಂದರೆ ಕಾಲ, ಹುಟ್ಟಿದ ಊರು, ಕಾರ್ಯಸ್ಥಳ, ತಂದೆ-ತಾಯಿ, ಹೆಂಡತಿ, ಗುರು, ಇವರ ಕೃತಿಗಳು, ಅಂಕಿತ ಈ ವಿವರಗಳನ್ನು ನೀಡಲಾಗಿದೆ. ಅನುಬಂಧ-೬ರಲ್ಲಿ 'ಕಠಿಣ ಪದಕೋಶ'ದಲ್ಲಿ ಪ್ರಾದೇಶಿಕ, ಅನುಭಾವಿಕ ಪರಿಭಾಷೆಯ ಪದಗಳನ್ನು ನೀಡಲಾಗಿದೆ. ಅನುಬಂಧ ೭ರಲ್ಲಿ ಈ ಸಂಕಲನಕ್ಕೆ ಬಳಸಿಕೊಳ್ಳಲಾದ 'ತತ್ವಪದಗಳ ಆಕರ ಸೂಚಿ ನೀಡಲಾಗಿದೆ. ಅನುಬಂಧ ೮ರಲ್ಲಿ ಸಂಕ್ಷೇಪ ವಿವರ, ಅನುಬಂಧ ೯, ಅಂಕಿತಗಳ ಅಕಾರಾದಿ, ಅನುಬಂಧ-೧೦ರಲ್ಲಿ ಬಿಟ್ಟು ಹೋದ ತತ್ವಪದಗಳು ನೀಡಲಾಗಿದೆ. ಒಟ್ಟಾರೆ ಉಪಯುಕ್ತವಾದ ಮಾಹಿತಿಗಳನ್ನು ಓದುಗರಿಗೆ ನೀಡಿರುವುದು ಈ ಗ್ರಂಥದ ಹೆಗ್ಗಳಿಕೆಯಾಗಿದೆ. ಇದೊಂದು ತತ್ವಪದಗಳ ಕುರಿತ ಮಹತ್ವದ ಗ್ರಂಥವಾಗಿದೆ.

ಕರ್ನಾಟಕ ಜಾನಪದ ಮತ್ತು ಯಕ್ಷಗಾನ ಅಕಾಡೆಮಿಯ ಮೂಲಕ 'ಕೋಹಿನೂರು ಹಸನಸಾಬರ ತತ್ವಪದಗಳು' ಹಾಗೆಯೇ 'ಗುರು ಶಿಷ್ಯರ ತತ್ವಪದಗಳು' (೧೯೯೭) ಎಂಬ ವಿಶಿಷ್ಟ ಕೃತಿಗಳು ವಿಜಯಶ್ರೀ ಸಬರದ ಅವರ ಸಂಪಾದಕತ್ವದಲ್ಲಿ ಹೊರಬಂದಿವೆ. 'ಗುರು-ಶಿಷ್ಯರ' ಪರಂಪರೆ ಕುರಿತ ಈ ರೀತಿಯ ತತ್ವಪದ ಸಂಗ್ರಹ ಇದು ಮೊದಲ ಪ್ರಯತ್ನವಾಗಿದೆ. ತತ್ವಪದಕಾರರ ಪರಂಪರೆಯೇ ಗುರು ಶಿಷ್ಯರಿಂದ ಕೂಡಿರುವಂತದ್ದು. ಆದರೆ ಈ ಮೊದಲು ಇಂಥದೊಂದು ಕೃತಿ ಬೆಳಕಿಗೆ ಬಂದಿಲ್ಲ. ಇದು ಮೊದಲ ಕೃತಿಯಾಗಿದೆ. ಹೀಗೆ ಅನೇಕ ಜನ ತತ್ವಪದಕಾರರ ಗುರು ಶಿಷ್ಯರಿಗೆ ಸಂಬಂಧಿಸಿದ ಹಾಡುಗಳ ಸಂಗ್ರಹ ತರಬಹುದಾಗಿದೆ.

ಪ್ರಸ್ತುತ ಕೃತಿಯಲ್ಲಿ ತಿಪ್ಪಣ್ಣ ತಾತನ(೧೧), ಯರಮಾರೆಪ್ಪನ(೧೬), ಹೊಸೂರು ತಿಪ್ಪಣ್ಣನ(೨೧), ಕಲ್ಮಲಾ ತಾಯಣ್ಣನ(೦೩) ತತ್ವಪದಗಳು ಸಂಕಲನಗೊಂಡಿವೆ. ದೈವಸ್ತುತಿ, ಜೀವನತತ್ವ, ಭಾವ ನಿರ್ಭರತೆ, ದೈವದ ಬಗೆಗಿನ ನಂಬಿಕೆ ಇಲ್ಲಿನ ಹಾಡುಗಳ ತಿರುಳಾಗಿದೆ. ಪ್ರಸ್ತಾವನೆಯಲ್ಲಿ ತತ್ವಪದ ವಿಶ್ಲೇಷಣೆ ಇದೆ. ಪ್ರಾದೇಶಿಕವಾಗಿ ಸಂಗ್ರಹಿಸಿದ್ದಾಗಿದೆ. ಈ ತತ್ವಪದಕಾರರು ರಾಯಚೂರು ಜಿಲ್ಲೆಯವರೇ ಆದ ಕಾರಣ ಆ ಜಿಲ್ಲೆಯ ವಿಶಿಷ್ಟತೆ, ಈ ಹಿಂದಿನ ಅನುಭಾವಿ ಕವಿಗಳ ಪರಂಪರೆ ಹಾಗೂ ಪ್ರಸ್ತುತ ಗುರು-ಶಿಷ್ಯರ ಸಂಕ್ಷಿಪ್ತ ಪರಿಚಯ ಅವರ ಸಾಹಿತ್ಯದ ವಿಶಿಷ್ಟತೆ ಮುಂತಾಗಿ ವಿವೇಚಿಸಲಾಗಿದೆ.

ಅನುಬಂಧದಲ್ಲಿ ತತ್ವಪದಗಳ ಅಕಾರಾದಿಯನ್ನು ನೀಡಲಾಗಿದೆ. ಆದರೆ ಪಾರಿಭಾಷಿಕ ಪದಗಳ ಅರ್ಥಕೋಶ ಅಪೂರ್ಣವೆನಿಸುತ್ತದೆ. ಯಾಕೆಂದರೆ ಪ್ರಾದೇಶಿಕ ಭಿನ್ನತೆಯ ಅನೇಕ ತತ್ವಪದಗಳು ಈ

ರಚನೆಗಳಲ್ಲಿ ಇಡಿಕಿರಿದಿವೆ. ಅವುಗಳ ಹೆಚ್ಚಿನ ಪದಗಳ ಅರ್ಥಕೋಶ ಇಲ್ಲದಿರುವುದು ಈ ಕೃತಿಯ ಕೊರತೆಯಾಗಿದೆ.

ಕಾಳೇಗೌಡ ನಾಗವಾರ ಮತ್ತು ಜಿ.ವಿ.ಆನಂದಮೂರ್ತಿ ಅವರು ಸಂಪಾದಿಸಿದ 'ಹಲವು ತೋಟದ ಹೂಗಳು'(೨೦೦೦) ಕರ್ನಾಟಕ ಜಾನಪದ ಮತ್ತು ಯಕ್ಷಗಾನ ಅಕಾಡೆಮಿಯಿಂದ ಪ್ರಕಟವಾಗಿದೆ. ಇದು ಕರ್ನಾಟಕದ ಎಲ್ಲಾ ಭಾಗಗಳಲ್ಲಿನ ತತ್ವಪದಕಾರರ ಪ್ರಾತಿನಿಧಿಕ ರಚನೆಗಳನ್ನು ಒಳಗೊಂಡ ಕೃತಿಯಾಗಿದೆ.

ಈ ಕೃತಿಯಲ್ಲಿಹಾಡುಗಳು ಎರಡು ಭಾಗಗಳಲ್ಲಿ ಸಂಕಲನಗೊಂಡಿವೆ. 'ನಾನಾರೆಂಬುದು ನಾನಲ್ಲ' ಕೃತಿಯ ಮೊದಲ ಭಾಗದಲ್ಲಿ ಒಟ್ಟು ೯೫ ಅಜ್ಞಾತ ತತ್ವಪದಕಾರರು ಮತ್ತು ಎರಡನೇ ಭಾಗದಲ್ಲಿ 'ಯಾವ ದೇಶದ ಹೂವಿದ್ದಾವ ಇವು' ವಚನಕಾರರು, ದಾಸರುಗಳನ್ನೊಳಗೊಂಡಂತೆ ಒಟ್ಟು ೭೦ ಜನ ತತ್ವಪದಕಾರರ ರಚನೆಗಳು ಇದರಲ್ಲಿ ಸೇರಿವೆ. ಇಲ್ಲಿನ ಹೆಚ್ಚಿನ ಹಾಡುಗಳು ಮೌಖಿಕವಾದವುಗಳು ಆಗಿವೆ. ಜನಪದ ಹಿನ್ನೆಲೆಯ ತಾತ್ವಿಕತೆಯಿಂದಲೇ ಸಂಗ್ರಹಿಸಿದಂತವು. ದೇಶಿ ಮತ್ತು ಜನಪದ ಸಂಸ್ಕೃತಿಯ ತಿಳುವಳಿಕೆಯ ಭಾಗವಾಗಿ ಈ ರಚನಗೆಳನ್ನು ನೋಡುವ ಹಂಬಲ ಪ್ರಸ್ತಾವನೆಯಲ್ಲಿ ಗೋಚರಿಸುತ್ತದೆ. ಕೃತಿಯ ಅನುಬಂಧದಲ್ಲಿ ತತ್ವಪದಕಾರರ ಸಂಕ್ಷಿಪ್ತ ಪರಿಚಯ ಮಾಡಿಕೊಡಲಾಗಿದೆ. ತತ್ವಪದಗಳ ಅಭಿಪ್ರಾಯ ಕುರಿತ ಕೆಲವು ವಿದ್ವಾಂಸರ ಹೇಳಿಕೆಗಳನ್ನು ನೀಡಲಾಗಿದೆ. ಪಾರಿಭಾಷಿಕ ಪದಕೋಶ ಮತ್ತು ಅರ್ಥಕೋಶಗಳು ಈ ಕೃತಿಯ ಮಟ್ಟಿಗೆ ಅಪೂರ್ಣವೆನಿಸುತ್ತವೆ. ಕರ್ನಾಟಕದ ಅನೇಕ ಭಾಗಗಳಿಂದ ಸಂಗ್ರಹಿಸಿದ ಇವು ಭಾಷಾ ವೈವಿಧ್ಯತೆಯಿಂದ ಕೂಡಿದವು ಆಗಿವೆ. ಕೃತಿಯ ಕೊನೆಯಲ್ಲಿನ ಶಬ್ದಾರ್ಥಕೋಶ ಓದುಗರ ಅನುಕೂಲಕ್ಕೆ ಉಪಯುಕ್ತವಾಗಿದೆ.

**೪.೧.೩. ವಿಶ್ವವಿದ್ಯಾಲಯಗಳು**

ಜ್ಞಾನದ ವಿಸ್ತಾರವನ್ನು ಹೆಚ್ಚಿಸುವುದು ಮತ್ತು ಅದನ್ನು ಪ್ರಸಾರಗೊಳಿಸುವುದು ವಿಶ್ವವಿದ್ಯಾಲಯಗಳ ಮಹತ್ವದ ಕಾರ್ಯವಾಗಿದೆ. ಅವು ಪ್ರಸಾರಾಂಗದ ಮೂಲಕ ತಮ್ಮ ಉದ್ದೇಶವನ್ನು ಈಡೇರಿಸಿಕೊಳ್ಳುತ್ತಿವೆ. ದೇಶಿ ನೆಲೆಯ ಶೋಧನೆ-ಚಿಂತನೆಗಳನ್ನು ದಾಖಲಿಸಿ, ಅವನ್ನು ಸಂವಹನಗೊಳಿಸುವ ಮಹತ್ಕಾರ್ಯದ ಭಾಗವಾಗಿ ಕನ್ನಡ ವಿಶ್ವವಿದ್ಯಾಲಯ ಹಂಪಿ ತನ್ನ ಪ್ರಸಾರಾಂಗದ ಮೂಲಕ ಕೃತಿಗಳನ್ನು ಹೊರತರುತ್ತಿದೆ. ಹಾಗೆಯೇ ಕರ್ನಾಟಕ ವಿಶ್ವವಿದ್ಯಾಲಯ ಧಾರವಾಡ, ಗುಲಬರ್ಗಾ ವಿಶ್ವವಿದ್ಯಾಲಯ, ಗುಲಬರ್ಗಾ ಮುಂತಾದವು ಉತ್ತಮವಾದ ಅನೇಕ ಪುಸ್ತಕಗಳನ್ನು ಹೊರತರುತ್ತಿವೆ. ಇಲ್ಲಿ ವಿದ್ಯಾರ್ಥಿ(ಪಠ್ಯಪುಸ್ತಕಗಳು) ಆವೃತ್ತಿಗಳು, ಸಂಪಾದನಾ ಕಾವ್ಯಗಳು, ಸಂಶೋಧನ ಗ್ರಂಥಗಳು, ವಿಮರ್ಶಾ ಸಂಕಲನಗಳನ್ನು ಪ್ರಕಟಿಸಲಾಗುತ್ತಿದೆ.

ಉದಾಹರಣೆಗೆ ವಿದ್ಯಾರ್ಥಿ ಆವೃತ್ತಿಗಳಲ್ಲಿ ವಿಷಯ ಹಾಗೂ ಸಂವಹನಗಳಿಗೆ ಹೆಚ್ಚಿನ ಗಮನ ನೀಡಲಾಗುತ್ತದೆ. ಪರಿಚಯಾತ್ಮಕ ವಿಷಯ-ವಿಚಾರಗಳ ಪ್ರಸ್ತಾಪ. ಮಾಹಿತಿಗಳ ಕ್ರೋಢೀಕರಣ,

ಸರಳವಾದ ವಿವರಣೆ, ಓದುಗರ ಹೊಸ ಬಗೆಯ ಪ್ರವೇಶಕ್ಕೆ ಅವಕಾಶ ಒದಗಿಸಿಕೊಡಲಾಗುತ್ತದೆ. ಈ ದೃಷ್ಟಿಯಿಂದ ವಿದ್ಯಾರ್ಥಿಗಳ ಆಸಕ್ತಿಯನ್ನು ಹೆಚ್ಚಿಸುವುದಾಗಿರುತ್ತದೆ. ಉದ್ದೇಶಿತ ನಿಲುವುಗಳಿಂದ ಕೃತಿಯ ಯಾವುದೋ ಒಂದು ಭಾಗ ಅಥವಾ ಆಯ್ದ ಭಾಗಗಳನ್ನು ಹಾಡುಗಳನ್ನು ಈ ನಿಟ್ಟಿನಲ್ಲಿ ಸಂಗ್ರಹಿಸಿ ಸಂಪಾದನಾ ಕಾರ್ಯವನ್ನು ಮಾಡಲಾಗುತ್ತದೆ. ಓದುಗರ ತಿಳುವಳಿಕೆಗಾಗಿ ಪಠ್ಯದ ಕೊನೆಯಲ್ಲಿ ಪಾರಿಭಾಷಿಕ ಪದಗಳು ಶಬ್ದಾರ್ಥಗಳ ಕೋಶ ಕೊಡುವುದು ಮುಖ್ಯವಾಗಿರುತ್ತದೆ. ಗುಲಬರ್ಗಾ ವಿಶ್ವವಿದ್ಯಾಲಯದಿಂದ ಈಶ್ವರಯ್ಯ ಮಠ ಸಂಪಾದಕತ್ವದಲ್ಲಿ ಹೊರಬಂದ 'ಆಯ್ದ ಸ್ವರವಚನಗಳು' ಕೃತಿಯು ಗುಲಬರ್ಗಾ ವಿಶ್ವವಿದ್ಯಾಲಯದ ಪಠ್ಯಪುಸ್ತಕ ಸಂಕಲನ ಮಾಲೆಯಲ್ಲಿ ಪದವಿ ತರಗತಿಗಳಿಗಾಗಿ ಸಂಕಲಿಸಿದ್ದು, ಕಳೆದ ಹತ್ತು ವರುಷಗಳಿಂದ ಈ ಪಠ್ಯಪುಸ್ತಕಗಳನ್ನು ಸಂಪಾದಿಸಿ ಪ್ರಕಟಿಸಲಾಗುತ್ತದೆ.

ಪ್ರಸ್ತುತ ಕೃತಿಯ ಸಂಪಾದಕರು ಕರ್ನಾಟಕ ಸಾಹಿತ್ಯ ಅಕಾಡೆಮಿ, ಗದಗಿನ ತೋಂಟದಾರ್ಯ ಮಠ ಹಾಗೂ ಸುತ್ತೂರು ಮಠಗಳ ಪ್ರಕಟಣೆಗಳನ್ನು ಆಧಾರವಾಗಿ ಬಳಸಿಕೊಂಡು ಇಲ್ಲಿನ ಹಾಡುಗಳನ್ನು ಸಂಕಲಿಸಿದ್ದಾರೆ. ತತ್ವಪದ, ಭಜನೆಪದ, ಜನಪದ ಸಾಹಿತ್ಯ, ಕೀರ್ತನೆಗಳೆಂದು ವಿಶ್ಲೇಷಿಸಿದ ಹಾಡುಗಳನ್ನು ಪ್ರಸ್ತುತ ಕೃತಿಯ ಸಂಪಾದಕರು ವೀರಶೈವ ಪರಿಭಾಷೆಯ 'ಸ್ವರವಚನ' ಎನ್ನುವ ಹೆಸರಿನಲ್ಲಿ ಪ್ರಕಟಿಸಿದ್ದಾರೆ. ಇದರಲ್ಲಿ ಜೇಡರ ದಾಸಿಮಯ್ಯ, ಸಕಲೇಶ ಮಾದರಸರಿಂದ ಬಾಲಲೀಲಾ ಮಹಾಂತರವರೆಗೆ ಒಟ್ಟು ೨೬ ಅನುಭಾವಿಗಳ ರಚನೆಗಳನ್ನು ಆಯ್ದು ಪ್ರಕಟಿಸಿದ್ದಾರೆ. ಮೊದಲ ೧೫ ಅನುಭಾವಿಗಳ ರಚನೆಗಳಿಗೆ ರಾಗಗಳನ್ನು ಸೂಚಿಸಿದ್ದಾರೆ. ನಂತರ ಬರುವ ರಚನೆಗಳಿಗೆ ರಾಗಗಳನ್ನು ಸೂಚಿಸಿಲ್ಲ. ಪ್ರತಿಯೊಬ್ಬ ಅನುಭಾವಿಯ ಸಂಕ್ಷಿಪ್ತ ಪರಿಚಯ ಮಾಡಿಕೊಡಲಾಗಿದೆ. ಕೊನೆಯಲ್ಲಿ ಪಾರಿಭಾಷಿಕ ಪದಕೋಶ ಇದೆ. ಇದು ವಿವರವಾಗಿ ಇಲ್ಲಿನ ಹಾಡುಗಳ ಶಬ್ದಾರ್ಥಗಳನ್ನು ಕೊಟ್ಟಿಲ್ಲ. ಇದೊಂದು ಮಿತಿಯಾಗಿದೆ. ವಿದ್ಯಾರ್ಥಿಗಳ ದೃಷ್ಟಿಯಿಂದ, ಬೋಧಕರಿಗೆ ಅನುಕೂಲವಾಗುವ ನಿಟ್ಟಿನಿಂದಲೂ ಈ ಕುರಿತು ಯೋಚಿಸಬೇಕಾದ ಅಗತ್ಯವನ್ನು ಕಾಣಬಹುದು.

ಪ್ರಸ್ತುತ ಕೃತಿಯು ದೀರ್ಘ ಪ್ರಸ್ತಾವನೆಯನ್ನು ಒಳಗೊಂಡಿದೆ. 'ವೀರಶೈವ ಅನುಭಾವಿಗಳು ರಚಿಸಿದ ಹಾಡುಗಳಿಗೆ ಮಾತ್ರ ಸ್ವರವಚನವೆಂಬುದು ಸ್ಪಷ್ಟವಾಗಿದೆ. ಇನ್ನಿತರ ಧರ್ಮದವರು ಇಲ್ಲವೇ ಅಪಾಂಥಿಕರು ಬರೆದ ಹಾಡುಗಳನ್ನು ಸ್ವರವಚನವೆಂದು ಕರೆಯುವುದು ಉಚಿತವೆನಿಸುವುದಿಲ್ಲ'[೫೫] ಎನ್ನುವ ತಾತ್ವಿಕ ಹಿನ್ನೆಲೆಯಲ್ಲಿ ಇಲ್ಲಿನ ರಚನೆಗಳನ್ನು ಆಯ್ದುಕೊಳ್ಳಲಾಗಿದೆ. ಆದರೂ ಇಲ್ಲಿನ ಕಡಕೋಳ, ಕೂಡಲೂರು, ಬಾಲಲೀಲಾ ಮಹಾಂತ ಮುಂತಾದವರ ರಚನೆಗಳು ಇವರ ತಾತ್ವಿಕತೆಯನ್ನು ಮೀರಿ ನಿಂತಿವೆ.

ಸಂಪಾದಕರು ಸ್ವರವಚನ ಸಾಹಿತ್ಯಚರಿತ್ರೆಯನ್ನು ನಾಲ್ಕು ಘಟಕಗಳಲ್ಲಿ ಕರ್ತೃ ಪ್ರಾಧಾನ್ಯತೆ, ಕಾಲದ ಪರಿಣಾಮ, ಕೃತಿಗಳ ಸಾಂದರ್ಭಿಕ ವೈಶಿಷ್ಟ್ಯಗಳನ್ನು ಅನುಲಕ್ಷಿಸಿ 'ಸೃಜನ, ಸಂಪಾದನ, ಸುವರ್ಣ

ಮತ್ತು ಸ್ವತಂತ್ರ ಯುಗ'ವೆಂದು ವಿಂಗಡಿಸಿಕೊಂಡಿದ್ದಾರೆ. ಈ ಹಾಡುಗಳು ಸಾಮಾಜಿಕ-ಸಾಂಸ್ಕೃತಿಕ ಅಧ್ಯಯನಕ್ಕೆ ಆಕರವಾಗಿವೆ. ಕಾಲ-ಕರ್ತೃ-ಸಂಖ್ಯೆ ಹೀಗೆ ಎಲ್ಲ ದೃಷ್ಟಿಯಿಂದಲೂ ಕನ್ನಡದ ಇತರ ಸಾಹಿತ್ಯ ಪ್ರಕಾರಗಳಿಗಿಂತ ಸಮೃದ್ಧವಾಗಿವೆ. ಸಂಸ್ಕೃತ, ಪಾರ್ಸಿ, ಇಂಗ್ಲಿಷ್, ಉರ್ದು, ಮರಾಠಿ ಭಾಷೆಗಳ ಒತ್ತಡದಿಂದ ಕನ್ನಡವನ್ನು ಪಾರು ಮಾಡಿದ ರಚನೆಗಳು ಎನ್ನಲಾಗಿದೆ. ಆದರೆ ಬಹುಭಾಷಿಕ, ಬಹುಸಾಂಸ್ಕೃತಿಕ ಸಂದರ್ಭದ ಪರಿಸರದಲ್ಲಿ ರಚನೆಯಾದ ಈ ಹಾಡುಗಳು ಭಾಷೆಯ ದೃಷ್ಟಿಯಿಂದ ಕನ್ನಡ ಸಾಹಿತ್ಯದಲ್ಲಿ ವಿಶಿಷ್ಟ ಸ್ಥಾನವನ್ನು ಪಡೆದಿವೆ, ಭಿನ್ನವಾಗಿವೆ ಎನ್ನುವುದನ್ನು ಸಂಪಾದಕರು ಗಮನಿಸುವುದಿಲ್ಲ. ಭಾರತದ ಸಂದರ್ಭದಲ್ಲಿ ಅವುಗಳ ವಿಶಿಷ್ಟ ಶಕ್ತಿ ಇರುವುದೇ ಬಹುಭಾಷಿಕ, ಬಹುಸಾಂಸ್ಕೃತಿಕ ಹಿನ್ನೆಲೆಯ ಆವರಣವನ್ನು ಪಡೆದಿರುವಲ್ಲಿ.

ಟಿ.ಎಂ.ಭಾಸ್ಕರ ಅವರು ಸಂಪಾದಿಸಿದ 'ಆಯ್ದತತ್ವಪದಗಳು' ಕೃತಿಯು ಗುಲಬರ್ಗಾ ವಿಶ್ವವಿದ್ಯಾಲಯ ಸ್ನಾತಕೋತ್ತರ ವಿದ್ಯಾರ್ಥಿ(ಎಂ.ಎ.ಕನ್ನಡ ನಾಲ್ಕನೇ ಸೆಮಿಸ್ಟರ್)ಗಳಿಗೆ ಪಠ್ಯವಾಗಿದೆ. ಪ್ರಸ್ತುತ ಸಂಕಲನದಲ್ಲಿ ಕಡಕೋಳ ಮಡಿವಾಳಪ್ಪ, ಶಿಶುನಾಳ ಶರೀಫ್, ದ್ಯಾಗಾಯಿ ಗುಂಡಪ್ಪ, ಮೋಟ್ನಳ್ಳಿ ಹಸನಸಾಬ, ಕೊಳ್ಳೂರ ಹಸನಾ, ಕೂಡಲೂರು ಬಸವಲಿಂಗ ಹಾಗೂ ಜಂಬಗಿ ಶಿವಶರಣ ಇವರ ಆಯ್ದ ತತ್ವಪದಗಳನ್ನು ಇಲ್ಲಿ ಸಂಕಲಿಸಲಾಗಿದೆ. ಓದುಗರ ಅನುಕೂಲಕ್ಕಾಗಿ ಗುರುಶಿಷ್ಯ ಸಂಬಂಧ, ಭಕ್ತಿವೈರಾಗ್ಯ, ಆತ್ಮಪರಮಾತ್ಮ, ಅರಿವು-ಆಚಾರ, ಪರಮಾರ್ಥ, ಸಮಾಜ ಸಂಕೀರ್ಣ, ಚಾರಿತ್ರಿಕ ಮಹಾಪುರುಷರು ಎಂಬ ಏಳು ವಿಷಯ ವಿಂಗಡಣೆಗಳಲ್ಲಿ ಎಲ್ಲ ತತ್ವಪದಕಾರರ ರಚನೆಗಳನ್ನು ಸೇರಿಸಿ ಸಂಕಲಿಸಲಾಗಿದೆ. ಪ್ರಸ್ತಾವನೆಯಲ್ಲಿ ವಿದ್ಯಾರ್ಥಿಗಳಿಗೆ ಸುಲಭ ಪರಿಚಯದ ದೃಷ್ಟಿಯಿಂದ ತತ್ವಪದಗಳ ಕುರಿತ ಅರ್ಥ, ಅವುಗಳಲ್ಲಿನ ವಸ್ತು ವೈಶಿಷ್ಟ್ಯತೆ, ಅವರು ಬಳಸಿಕೊಂಡ ಭಾಷೆ, ಪ್ರಾದೇಶಿಕ ವೈವಿಧ್ಯತೆ, ಅರಿವು, ಆಚಾರಶೀಲತೆ, ಜನಸಮುದಾಯಗಳಲ್ಲಿ ಅನುಭಾವಿಗಳು ನೆಲೆನಿಂತ ಪರಿಯನ್ನು ನಾನಾ ಕಾಲಘಟ್ಟದ ಅವರ ರಚನೆಗಳ ಮೂಲಕ ವಿಶ್ಲೇಷಿಸಿದ್ದಾರೆ. ಇದು ಕೃತಿ ಪ್ರವೇಶಕ್ಕೆ ವಿದ್ಯಾರ್ಥಿಗಳಿಗೆ ದಾರಿಯಾದರೂ, ಶಬ್ದಾರ್ಥಸೂಚಿ ಪರಿಪೂರ್ಣವಾಗಿಲ್ಲದಿರುವುದು ಕಂಡುಬರುತ್ತದೆ. ಕವಿಕೃತಿಯ ಬಗೆಗೆ ಟಿಪ್ಪಣಿ, ವಿವರಗಳು ಸಾಲವು. ಕಠಿಣ ಪದಗಳ ಆಯ್ಕೆ ಮಾಡಲಾಗಿದೆ. ಉತ್ತಮ ಅಭಿರುಚಿ ಮೂಡಿಸುವ ಆಯ್ಕೆ ಇರುವುದಿಲ್ಲ ಎಂಬ ಆರೋಪಗಳು ಈ ಮೇಲಿನ ಕೃತಿಗಳಿಗೆ ಇವೆ.

ಒಟ್ಟಿನಲ್ಲಿ ಯಾವುದೇ ಪಠ್ಯಪುಸ್ತಕಗಳನ್ನು ಸಿದ್ಧಪಡಿಸುವಲ್ಲಿ ಬಹಳ ಎಚ್ಚರಿಕೆ ವಹಿಸಬೇಕಾಗಿದೆ. ಸ್ವರವಚನ ಮತ್ತು ತತ್ವಪದಗಳ ಈ ಪರಿಭಾಷೆಯನ್ನು ನಾವು ಸ್ಪಷ್ಟಗೊಳಿಸಿಕೊಳ್ಳಬೇಕಾಗಿದೆ. ಏಕೆಂದರೆ ಅಧ್ಯಯನಗಳಲ್ಲಿ ಈ ಎರಡೂ ಒಂದೇ ಎಂದು ಭಾವಿಸಲಾಗಿದೆ. ಅವುಗಳ ರಾಚನಿಕ ಸ್ವರೂಪದ ದೃಷ್ಟಿಯಿಂದ ಹೀಗೆ ತಿಳಿಯಲಾಗಿದೆ. ಆದರೆ ಆಶಯಗಳ ದೃಷ್ಟಿಯಿಂದ ತತ್ವಪದಗಳು ಭಿನ್ನವಾಗಿವೆ. ಕೆಲವು ಸ್ವರವಚನ ಸಂಕಲನಗಳಲ್ಲಿ ಶರಣರ ರಚನೆಗಳಲ್ಲದೇ ತತ್ವಪದಕಾರರ ರಚನೆಗಳನ್ನು ಸೇರಿಸಲಾಗಿದೆ.

ಹಾಗೆಯೇ ತತ್ವಪದಗಳ ಪ್ರತ್ಯೇಕ ಸಂಕಲನಗಳೂ ಬಂದಿವೆ. ಯಾರು ತತ್ವಪದಕಾರರು, ಯಾರು ಸ್ವರವಚನಕಾರರು ಎಂದು ಪಠ್ಯವನ್ನು ಓದುವ ವಿದ್ಯಾರ್ಥಿಗಳಲ್ಲಿ ಈ ಗೊಂದಲ ಉಂಟಾಗಿದೆ. ಯಾಕೆಂದರೆ ತತ್ವಪದಗಳಿಗಿರುವ ಜನಪ್ರಿಯತೆ, ಸ್ವರವಚನಗಳಿಗಿಲ್ಲ. ಹಾಗಾಗಿ ಸ್ವರವಚನಗಳನ್ನು ತತ್ವಪದಗಳ ಹೆಸರಿನಲ್ಲಿ ಜನಪ್ರಿಯತೆಗಾಗಿ ಸೇರಿಸುವುದೇನಾದರೂ ನಡೆದಿದೆಯೇ? ವೀರಶೈವ ಪರಿಭಾಷೆಯ ಸ್ವರವಚನಗಳನ್ನು ಯಾಕೆ ಈ ತತ್ವಪದಗಳ ಸಂಕಲನಗಳಲ್ಲಿ ಸೇರಿಸಲಾಗುತ್ತದೆ? ಈ ಪ್ರಶ್ನೆಗಳಿಗೆ ಉತ್ತರಗಳನ್ನು ಕಂಡುಕೊಳ್ಳಬೇಕಾಗಿದೆ.

ಎಲ್ಲ ನೆಲೆಗಳಲ್ಲಿ ಸೃಷ್ಟಿಯಾಗುವ ಶೋಧನೆ-ಚಿಂತನೆಗಳನ್ನು ದಾಖಲಿಸಬೇಕೆಂಬ ಉದ್ದೇಶದಿಂದ ಕನ್ನಡ ವಿಶ್ವವಿದ್ಯಾಲಯ ಅನೇಕ ಕೃತಿಗಳನ್ನು ಹೊರತರುತ್ತಿದೆ. ಈ ನಿಟ್ಟಿನಲ್ಲಿ ಪ್ರಕಟವಾದ 'ಸ್ವರವಚನ ತರಂಗ ಸಂಪುಟ-೧, 'ನಾಗಲಿಂಗಸ್ವಾಮಿ ತತ್ವಪದಗಳು' (೨೦೦೦)(ಸಂ:ಎಸ್.ಆರ್.ಚನ್ನವೀರಪ್ಪ) ಮತ್ತು ಶಿಷ್ಟ ಮತ್ತು ಜಾನಪದಗಳ ನಡುವೆ ಸೃಷ್ಟಿಯಾಗಿ ಉಪೇಕ್ಷೆಗೆ ಒಳಗಾದ 'ತತ್ವಪದ ಸಾಹಿತ್ಯ'ವನ್ನು ಜನಪ್ರಿಯ ನೆಲೆಯಲ್ಲಿ ಪ್ರಕಟಿಸಿದ ಬಸವರಾಜ ಸಬರದ ಸಂಪಾದಿಸಿದ 'ಗುಲ್ಬಬರ್ಗಾ ಜಿಲ್ಲೆಯ ಅನುಭಾವಿ ಕವಿಗಳು'(೧೯೯೫), 'ಹೈದ್ರಾಬಾದ್ ಕರ್ನಾಟಕದ ತತ್ವಪದಗಳು'(೨೦೦೦) ಮುಖ್ಯವಾಗಿವೆ.

'ಹೈದ್ರಬಾದ್ ಕರ್ನಾಟಕದ ತತ್ವಪದಗಳು' ಕೃತಿಯು ಗುಲಬರ್ಗಾದ ೨೮ ತತ್ವಪದಕಾರರು, ರಾಯಚೂರಿನ ೨೨ ತತ್ವಪದಕಾರರು, ಕೊಪ್ಪಳದ ೩ ತತ್ವಪದಕಾರರು ಮತ್ತು ಬೀದರಿನ ೧೧ ತತ್ವಪದಕಾರರ ಆಯ್ದ ತತ್ವಪದಗಳ ಒಟ್ಟು ಅರವತ್ತು ನಾಲ್ಕು ತತ್ವಪದಕಾರರ ತತ್ವಪದಗಳಿವೆ. ಇದೊಂದು ಹೈದ್ರಬಾದ್ ಕರ್ನಾಟಕ ಪ್ರದೇಶದ ಪ್ರಾತಿನಿಧಿಕ ಸಂಕಲನವಾಗಿದೆ. ಪ್ರಕಟವಾದ ಕೃತಿಗಳು, ಮೌಖಿಕವಾಗಿರುವ ಹಾಡುಗಳು ಹಾಗೂ ಕ್ಷೇತ್ರಕಾರ್ಯದಲ್ಲಿ ಸಂಗ್ರಹಿಸಿದ ಹಾಡುಗಳನ್ನು ಅನುಲಕ್ಷಿಸಿ ಈ ಕೃತಿ ಸಿದ್ಧಪಡಿಸಲಾಗಿದೆ. ಜನಪ್ರಿಯ ಹಾಡುಗಳನ್ನು ಈ ಸಂಪುಟದಲ್ಲಿ ಸೇರಿಸಿಕೊಳ್ಳಲಾಗಿದೆ. ಹೀಗಾಗಿ ಸಂಪಾದಕರು ಇದೊಂದು ಜನಪ್ರಿಯ ಸಂಪುಟ ಎನ್ನುತ್ತಾರೆ.

ಇಲ್ಲಿ ಜನಪದ ಹಿನ್ನೆಲೆಯ ದೇಸಿ ಸಂಪಾದನಾ ವಿಧಾನವನ್ನು ಅನುಸರಿಸಲಾಗಿದೆ. ಮೌಖಿಕ ಸಂಪಾದನೆಯ ಹಾಡುಗಳನ್ನು ಶುದ್ಧೀಕರಿಸದೇ ಪಾಠ ಪರಿಷ್ಕರಣೆಗೆ ತೊಡಗದೇ ಲಭ್ಯವಿರುವ ಪಠ್ಯಗಳಲ್ಲಿ ಸಂಪಾದಕರಿಗೆ ಸರಿ ಎನಿಸಿದ ಹಾಡುಗಳನ್ನು ಆಯ್ಕೆ ಮಾಡಿಕೊಂಡು, ಅಕ್ಷರಗಳು ಬಿಟ್ಟು ಹೋದ, ಗೊಂದಲ, ಅಸ್ಪಷ್ಟವಾಗಿದ್ದ ಸಂದರ್ಭಗಳಲ್ಲಿ ಮಾತ್ರ ಪರಿಷ್ಕರಿಸಲಾಗಿದೆ. ಆದರೆ ಮೂಲ ಆಶಯಕ್ಕೆ ಧಕ್ಕೆ ಬಾರದಂತೆ ನಿಗಾ ವಹಿಸಲಾಗಿದೆ. ಹಾಡುಗಳ ಸಂಕಲನದಲ್ಲಿ ಭಾವೈಕ್ಯತೆ, ಮತೀಯ ಸೌಹಾರ್ದತೆ, ಜಾತ್ಯತೀತ ಪರಿಕಲ್ಪನೆ, ಅನುಭಾವಕ್ಕೆ ಹೆಚ್ಚಿನ ಒತ್ತು ಕೊಡಲಾಗಿದೆ. ಇದು ಈ ಸಂಗ್ರಹದ ವೈಶಿಷ್ಟ್ಯವಾಗಿದೆ.

ದೀರ್ಘ ಪ್ರಸ್ತಾವನೆಯಲ್ಲಿ ತತ್ವಪದ ಮತ್ತು ಅನುಭಾವದ ಅರ್ಥ, ವಿವರಣೆ, ತತ್ವಪದ ಪರಂಪರೆಯು ೧೨ನೆಯ ಶತಮಾನದ ಶರಣರ ಸ್ವರವಚನಗಳ ಮತ್ತು ದಾಸರ ಕೀರ್ತನೆಗಳ ಹಿನ್ನೆಲೆಯಲ್ಲಿ ಬೆಳೆದುಬಂದಿದೆ ಎನ್ನುತ್ತಾರೆ. ತತ್ವಪದ ಸಾಹಿತ್ಯ ಶಿಷ್ಟವೂ, ಜನಪದವೂ ಆಗಿದೆ ಎಂದು ಅಭಿಪ್ರಾಯಪಡುತ್ತಾರೆ. ಹೈದರಾಬಾದ್ ಕರ್ನಾಟಕದ ಪ್ರಾದೇಶಿಕ ವೈಶಿಷ್ಟ್ಯದಿಂದ ಕೂಡಿದ ತತ್ವಪದಗಳು ಸಾಮಾಜಿಕ, ರಾಜಕೀಯ, ಆರ್ಥಿಕವಾಗಿ ವಿಮುಖವಾದ ಆಲೋಚನೆಗಳನ್ನು ಒಳಗೊಂಡಿದ್ದರೂ ಭಾವೈಕ್ಯತೆ, ಸೌಹಾರ್ದತೆಗಾಗಿ ನಮಗಿಂದು ಈ ರಚನೆಗಳು ಮುಖ್ಯವಾಗುತ್ತವೆ ಎನ್ನುವ ನಿಲುವಿಗೆ ಬಂದಿದ್ದಾರೆ. ಪ್ರತಿಯೊಬ್ಬ ತತ್ವಪದಕಾರನ ಸಂಕ್ಷಿಪ್ತ ಪರಿಚಯದ ನಂತರವೇ ಅವರ ಹಾಡುಗಳು ಈ ಸಂಕಲನದಲ್ಲಿ ಸೇರಿಸಲಾಗಿದೆ. ಅನುಬಂಧದಲ್ಲಿ ತತ್ವಪದಗಳ ಅಕಾರಾದಿ, ಅಂಕಿತಗಳ ಅಕಾರಾದಿ, ಜಿಲ್ಲಾವಾರು ಕೊಡಲಾಗಿದೆ. ಪಾರಿಭಾಷಿಕ ಪದಗಳ ಅರ್ಥ, ಪ್ರಾದೇಶಿಕ ಪದಗಳ ಅರ್ಥ, ಹಾಡಿದವರ ವಿವರಗಳನ್ನು ನೀಡಲಾಗಿದೆ. ಇದು ಅಧ್ಯಯನಕಾರರಿಗೆ, ಓದುಗರಿಗೆ ಉಪಯುಕ್ತ ಮಾಹಿತಿಯನ್ನು ಒದಗಿಸುತ್ತದೆ.

'ನಾಗಲಿಂಗಸ್ವಾಮಿ ತತ್ವಪದಗಳು' (ಚನ್ನವೀರಪ್ಪ) ಕೃತಿಯು ಹಸ್ತಪ್ರತಿಗಳ ನೆರವಿನಿಂದ ಸಂಪಾದಿಸಿದ್ದಾಗಿದೆ. ಇಲ್ಲಿನ ಒಟ್ಟು ೫೮ ಪದಗಳು, ಕಾಯದ ಅಸ್ಥಿರತೆ, ಚತುರ್ವರ್ಣಗಳ ಮೇಲಾದ ಸಂಸಾರದ ನಿಸ್ಸಾರತೆ, ನೀತಿ, ವೈರಾಗ್ಯ, ಮೋಕ್ಷ, ಗುರು-ಶಿಷ್ಯರ ಸಂಬಂಧ ಮುಂತಾದವನ್ನು ಕುರಿತು ಹೇಳುತ್ತಿವೆ.

ಕರ್ನಾಟಕ ವಿಶ್ವವಿದ್ಯಾಲಯದಿಂದ ಪ್ರಕಟವಾದ 'ಚಲವಾದಿ ಚಂದಪ್ಪನ ಅನುಭಾವ ಪದಗಳು' (೧೯೮೮) (ಸಂ:ಶಿವಾನಂದ ಗುಬ್ಬಣ್ಣವರ) ಈ ಹಾಡುಗಳು ಚಂದಪ್ಪನಿಂದಲೇ ಹಾಡಿಸಿ ಸಂಕಲಿಸಿದಂತವು. ಓದುಗರ ಅನುಕೂಲಕ್ಕೆ ದೇವಸ್ತುತಿ, ಶಕ್ತಿಸ್ತುತಿ, ಗುರುಸ್ತುತಿ, ಬೋಧೆ, ನೀತಿ, ಪೌರಾಣಿಕ, ಚಾರಿತ್ರಿಕ, ಬೆಡಗು, ಘಟನಾತ್ಮಕ, ಡೊಳ್ಳಿನ ಹಾಡು, ಮೊಹರಮ್-ರಿವಾಯತ್, ಶೋಬಾನಪದ ಎಂದು ವಿಂಗಡಿಸಲಾಗಿದೆ. ಕವಿಯ ಇತಿವೃತ್ತ ಈ ಹಾಡುಗಳ ಅರಿಯುವಿಕೆಗೆ ನೆರವಾಗುತ್ತದೆ.

ಶ್ರೀ ರಾನಡೆಯವರ 'Pathway to god in Kannada literature' ಕೃತಿಯ ಕನ್ನಡಾನುವಾವ 'ಕನ್ನಡ ಸಂತರ ಪರಮಾರ್ಥ ಪಥ' ಕರ್ನಾಟಕ ವಿಶ್ವವಿದ್ಯಾಲಯ ೧೯೬೦ರಲ್ಲಿ ಪ್ರಕಟಿಸಿದೆ. ಇದನ್ನು ಎಂ.ಎಸ್.ದೇಶಪಾಂಡೆ ಅವರು ಅನುವಾದಿಸಿದ್ದಾರೆ. ಶರಣರ, ದಾಸರ, ಅನುಭಾವ ಸಾಹಿತ್ಯದಿಂದಲೂ, ತತ್ವಪದಗಳಿಂದಲೂ ಎತ್ತಿಕೊಂಡು ಉದಾಹರಿಸಿದ ಅನೇಕ ಪದ್ಯಭಾಗಗಳನ್ನು ಈ ಗ್ರಂಥದುದ್ದಕ್ಕೂ ಕಾಣುತ್ತೇವೆ. ರಾನಡೆಯವರು ಇಲ್ಲಿನ ಅನೇಕ ಹಾಡುಗಳನ್ನು ಹಾಡುಗರ ಬಾಯಿಯಿಂದಲೇ ಕೇಳಿ ಸಂಗ್ರಹಿಸಿರುವುದು ವಿಶೇಷವಾಗಿದೆ. ಇವುಗಳಿಗೆ ಟಿಪ್ಪಣಿಗಳನ್ನು ಬರೆದಿದ್ದರು ಎಂಬುದೂ ತಿಳಿಯುತ್ತದೆ. ಅನುಭಾವದ ದೃಷ್ಟಿಯಿಂದ ಇದೊಂದು ಮಹತ್ವದ ಗ್ರಂಥವಾಗಿದೆ.

ನಿಜಗುಣಾರ್ಯರು, ಚಿದಾನಂದಾವಧೂತರು, ಸರ್ಪಭೂಷಣರು, ನಿಂಬರಗಿ ಮಹಾರಾಜರು, ಶಂಕರಾನಂದರು, ಶಿವಲಿಂಗವ್ವನವರು, ಶರೀಫ ಸಾಹೇಬರನ್ನು ಒಳಗೊಂಡಂತೆ ರಾನಡೆಯವರು ೫೨ ಸಂತ ಕವಿಗಳಿಂದ ಆಯ್ದ ೧೪೫ ಹಾಡುಗಳನ್ನು, ವಚನಗಳನ್ನು ೧೯ ಪ್ರಕರಣಗಳಲ್ಲಿ ವಿಂಗಡಿಸಿ, ಸಂಗ್ರಹಿಸಿದ್ದಾರೆ. ಪ್ರತಿಯೊಂದು ಪದಕ್ಕೂ ಒಂದು ಆಂಗ್ಲ ಶೀರ್ಷಿಕೆಯನ್ನು ಕೊಡಲಾಗಿದೆ. ಅವುಗಳ ಕನ್ನಡ ಅನುವಾದವನ್ನು ಮೇಲ್ಭಾಗದಲ್ಲಿ ಕೊಟ್ಟಿದೆ. ರಾನಡೆಯವರು ಬರೆದಿರುವ ಆಂಗ್ಲ ಭಾಷೆಯ ಟಿಪ್ಪಣಿಗಳನ್ನು ಅನುಬಂಧದಲ್ಲಿ ಕೊಡಲಾಗಿದೆ.

ಒಟ್ಟಿನಲ್ಲಿ ವಿಶ್ವವಿದ್ಯಾಲಯಗಳು ಎಲ್ಲಾ ತರಹದ ಪುಸ್ತಕಗಳನ್ನು ಓದುಗರಿಗೆ ನೀಡುತ್ತಿವೆ. ಆದರೆ ಅಕಾಡೆಮಿಕ್ ಆದ ಶಾಸ್ತ್ರೀಯ ನೆಲೆಯಲ್ಲಿ ಇಲ್ಲಿನ ಸಂಪಾದನೆಗಳು ಇವೆ. ತತ್ವಪದಗಳು ಮೌಖಿಕವಾಗಿಯೂ ಇವೆ. ಈ ರಚನೆಗಳನ್ನು ಸಂಪಾದಿಸುವಾಗ ಸಂಪಾದನೆಯ ಶಾಸ್ತ್ರೀಯ ಶಿಸ್ತನ್ನು ಅವುಗಳ ಮೇಲೆ ಹೇರಲಾಗುತ್ತಿದೆ. ಹೀಗಾಗಿ ಸಂಪಾದನೆಯಲ್ಲಿ ಕೆಲವು ತೊಡಕುಗಳೂ ಕಾಣಿಸಿವೆ. ಈ ಕುರಿತು ಮುಂದೆ ಚರ್ಚಿಸಲಾಗಿದೆ.

**೪.೧.೪. ಜನಪ್ರಿಯ ಪ್ರಕಟಣೆಗಳು**

ಜನಪ್ರಿಯ ಸಂಪಾದನೆಗಳು ಈಗಾಗಲೇ ಅಕಾಡೆಮಿಕ್ ನೆಲೆಯಲ್ಲಿ ಸಂಪಾದಿಸಿ ಒಪ್ಪಿಕೊಂಡಿರುವ ಪಾಠವನ್ನು ಅಂಗೀಕರಿಸಿಯೋ, ಮುದ್ರಿತ ಪಠ್ಯವನ್ನು ಇತರ ಹಸ್ತಪ್ರತಿಗಳೊಂದಿಗೆ ಮತ್ತೆ ಪರಿಷ್ಕರಿಸಿ ಸಂಪಾದಿಸಿದಂತವೋ, ಸಮಗ್ರ ಸಾಹಿತ್ಯವನ್ನು ಒಂದೆಡೆ ನೀಡಲು ಕ್ರೋಡೀಕರಿಸಿದಂತವು ಆಗಿರುತ್ತವೆ. ಪ್ರಕಟಿತ ಇಲ್ಲವೇ ಅಪ್ರಕಟಿತ ಏಕೈಕ ಹಸ್ತಪ್ರತಿಯ ಪಠ್ಯಸಂಪಾದನೆಯನ್ನಷ್ಟೇ ಕೇಂದ್ರೀಕರಿಸಿಕೊಂಡಿರುತ್ತವೆ. ಮೌಖಿಕವಾದ ಹಾಡುಗಳನ್ನು ಹಾಡುಗಾರರಿಂದ ಹಾಡಿಸಿ ಸಂಗ್ರಹಿಸಿದಂತವೂ ಆಗಿರುತ್ತವೆ. ಆದರೆ ಶಾಸ್ತ್ರೀಯ ಸಂಪಾದನೆಯಲ್ಲಿರುವಂತೆ ಪಾಠ ಪರಿಷ್ಕರಣ, ದಾಖಲೀಕರಣ, ಸರಿಯಾದ ಪಾಠಸಂಕಲನ, ವಿಶೇಷ ಪಾಠಗಳ ನಿರ್ವಚನ ಇವಾವು ಜನಪ್ರಿಯ ಸಂಪಾದನೆಯಲ್ಲಿ ಇರುವುದಿಲ್ಲ ಎನ್ನಲಾಗುವುದಿಲ್ಲ. ಜನಪ್ರಿಯ ಸಂಪಾದನೆಯೂ ಸುಲಭ ಸಂಪಾದನೆ ಎನ್ನುವಂತಿಲ್ಲ. ಇಲ್ಲಿನ ಜ್ಞಾನ ಸಂಪತ್ತನ್ನು ಜನಸಾಮಾನ್ಯರಿಗೆ ಅರ್ಥವಾಗುವಂತೆ ಸರಳವಾಗಿ ಜಾಗೃತ ಮನಸ್ಸಿನಿಂದ ಸಂಗ್ರಹಿಸಬೇಕಾಗುತ್ತದೆ. ಭಾಷಾಬಳಕೆ, ವಾಕ್ಯರಚನೆ, ವಿಷಯ ನಿರೂಪಣೆ ಶೈಲಿ ಸಂಕೀರ್ಣವಾಗಿರಬಾರದು. ಜನಸಾಮಾನ್ಯರ ಗ್ರಹಿಕೆಗೆ ನಿಲುಕುವಂತಿರಬೇಕು. ಪ್ರಕಟಿತ ಗ್ರಂಥಗಳ ಮರು ಸಂಪಾದನೆಯ ಪ್ರಕ್ರಿಯೆಯಲ್ಲಿ ದೀರ್ಘವಿವರಣೆ ಹಾಗೂ ವಿಶ್ಲೇಷಣಾತ್ಮಕ ಪ್ರಸ್ತಾವನೆಯ ಅಗತ್ಯ ಅಷ್ಟಾಗಿರುವುದಿಲ್ಲ. ಆದರೆ ಕೃತಿಯ ಉಪೇಕ್ಷಿತ ನೆಲೆಗಳನ್ನು ಪಠ್ಯದ ಅಂತರ್ ಚಲನೆಯನ್ನು, ಸೂಕ್ಷ್ಮ ಒಳನೋಟಗಳನ್ನು ಹೊಂದಿ ಕೃತಿಯ ಆಶಯ ಮತ್ತು ಆವರಣಗಳನ್ನು ನಿರೂಪಿಸುವ ಸ್ಪಷ್ಟ ನಿರೂಪಣೆ ಅಗತ್ಯವಾಗಿರುತ್ತದೆ.

ಈಗಾಗಲೇ ಇರುವ ಪಾಠವನ್ನು ಅಧಿಕೃತ ಎಂದು ಅಂಗೀಕರಿಸುವುದು. ಭಿನ್ನಪಾಠಗಳನ್ನು ಸ್ವವಿವೇಚಿಸಿ ಒಪ್ಪಿತ ಪಾಠವನ್ನಾಗಿ ಸ್ವೀಕರಿಸುವುದು ಈ ಎರಡು ಮಾದರಿಗಳು ಜನಪ್ರಿಯ ಸಂಪಾದನೆಯಲ್ಲಿ ಕಾಣಬಹುದು. ಆದರೆ ತತ್ವಪದಗಳಂತಹ ಜನಪದ/ಮೌಖಿಕ ಹಾಡುಗಳ ಸಂಪಾದನೆ ಕಾರ್ಯ ಶಿಷ್ಟ ಸಂಪಾದನೆಗಿಂತ ಭಿನ್ನವಾಗಿದೆ. ಒಂದು ಪಾಠ ಅನೇಕ ಪಾಠಗಳಾಗಿ ವಿಶಿಷ್ಟತೆಯನ್ನು ಪಡೆದುಕೊಳ್ಳುತ್ತದೆ. ಇಂತಲ್ಲಿ ಪಾಠಗಳ ಪರಿಷ್ಕರಣೆ, ಶುದ್ಧೀಕರಣ, ಮುಖ್ಯವಾಗುವುದಿಲ್ಲ. ಸಂಪಾದಕ ತನಗೆ ಸರಿ ಎನಿಸಿದುದನ್ನು ಆರಿಸಿಕೊಂಡು ಸಂಪಾದಿಸಬೇಕಾಗುತ್ತದೆ. ಇದು ಸಂಪಾದಕರ ವಿವೇಚನೆಗೆ ಬಿಟ್ಟ ವಿಚಾರ. ಉದಾಹರಣೆಗೆ ಬಸವರಾಜ ಸಬರದ ಅವರ 'ಹೈದ್ರಾಬಾದ್ ಕರ್ನಾಟಕದ ತತ್ವಪದಗಳು'(೨೦೦೦) ಜನಪ್ರಿಯ ಸಂಪಾದನೆಗಳ ಸಾಲಿನಲ್ಲಿ ನಿಲ್ಲುವಂತದ್ದು. ಹೀಗೆ ಹಲವಾರು ವಸ್ತು ವಿಷಯಗಳಿಗೆ ಸಂಬಂಧಿಸಿದ ಅನೇಕ ಕೃತಿಗಳು ವಿವಿಧ ಪ್ರಕಾಶನ ಸಂಸ್ಥೆಗಳಿಂದ ಹೊರಬಂದಿವೆ. ಜನ ಸಾಮಾನ್ಯರಿಗೆ ಸಾಂಪ್ರದಾಯಿಕ ಜ್ಞಾನ, ಧಾರ್ಮಿಕ ಮಹತ್ವ, ಮಹಾಪುರುಷರ ಮಹಿಮೆ, ಪವಾಡಗಳನ್ನು ತಿಳಿಸಿಕೊಡುವ ಉದ್ದೇಶ ಇವುಗಳಿಗಿದೆ. ಹೆಚ್ಚಾಗಿ ಮಾರುಕಟ್ಟೆ ದೃಷ್ಟಿಯಿಂದಲೂ ಇವುಗಳನ್ನು ಪ್ರಕಟಿಸಲಾಗುತ್ತಿದೆ. ಇತ್ತೀಚೆಗೆ ವಿಶ್ವವಿದ್ಯಾಲಯಗಳು, ಕನ್ನಡ ಸಾಹಿತ್ಯ ಪರಿಷತ್ತು, ಅಕಾಡೆಮಿಗಳು, ಸಂಸ್ಕೃತಿ ಇಲಾಖೆ, ವೀರಶೈವ ಅಧ್ಯಯನ ಸಂಸ್ಥೆಗಳು ತತ್ವಪದಕಾರರಿಗೆ ಸಂಬಂಧಿಸಿದ ಅನೇಕ ಕೃತಿಗಳನ್ನು ಜನಸಾಮಾನ್ಯರ ದೃಷ್ಟಿಯಿಂದಲೂ, ಅಕಾಡೆಮಿಕ್ ಶಿಸ್ತಿನ ಹಿನ್ನೆಲೆಯಿಂದಲೂ ಪ್ರಕಟಿಸಿವೆ. ಆದರೆ ಜನಪ್ರಿಯ ಪ್ರಕಾಶನಗಳು ಈಗ ಕಡಿಮೆಯಾದಂತೆ ತೋರುತ್ತಿವೆ. ಆದರೂ ಈ ಹಿನ್ನೆಲೆಯಲ್ಲಿ ಕೆಲವನ್ನು ಪರಿಶೀಲಿಸಬಹುದು.

ಜನಪ್ರಿಯ ಪುಸ್ತಕಗಳ, ಕ್ಯಾಲೆಂಡರ್ ಗಳ, ಭಕ್ತಿಗೀತೆಗಳ ಕುರಿತು ಅನೇಕ ಪ್ರಕಾಶನ ಸಂಸ್ಥೆಗಳು ಈ ನಿಟ್ಟಿನಲ್ಲಿ ಕೆಲಸ ಕೈಗೊಂಡಿವೆ. ಇವುಗಳಲ್ಲಿ ಬಹುಮುಖ್ಯವಾದುದು ಗದುಗಿನ ಪಿ.ಸಿ.ಶಾಬಾದಿಮಠ ಬುಕ್ ಡಿಪೋ ಇವರದು. ಕ್ಷೇತ್ರದರ್ಶನ, ಮಹಾಪುರಷರ ಚರಿತ್ರೆ, ಪುರಾಣ, ಜ್ಯೋತಿಷ್ಯಸಾರ, ಮಹಾಮಹಿಮರ ಮಹಿಮೆ, ಒಡಪು, ಪಂಚತಂತ್ರದಂತ ಕಥೆಗಳು, ದೇವಿಯರ ಮಹಾತ್ಮೆ, ವಚನಕಾರರ, ದಾಸರ, ತತ್ವಪದಕಾರರ ಸಾಹಿತ್ಯಕ ಜನಪ್ರಿಯ ಹಾಡುಗಳು ಈ ಮುಂತಾದ ವೈವಿಧ್ಯದಿಂದ ಕೂಡಿದ ಪುಸ್ತಕ ಪ್ರಕಟಣೆಗಳು ಈ ಪ್ರಕಾಶನದಿಂದ ಬರುತ್ತಿವೆ. ಇವುಗಳನ್ನು ಜನಸಾಮಾನ್ಯರಿಗೆ ಕಡಿಮೆ ಬೆಲೆಯಲ್ಲಿ ನೀಡಲಾಗುತ್ತಿದೆ.

ತತ್ವಪದಗಳಿಗೆ ಸಂಬಂಧಿಸಿದಂತೆ ಈ ಪ್ರಕಾಶನವು ಈಗಾಗಲೇ ಸರ್ಪಭೂಷಣರ 'ಕೈವಲ್ಯ ಕಲ್ಪವಲ್ಲರಿ', ಶ್ರೀ ನಿಜಗುಣಶಿವಯೋಗಿಗಳ 'ಕೈವಲ್ಯ ಪದ್ಧತಿ', ಗರಗದ ಶ್ರೀ ಮಡಿವಾಳೇಶ್ವರ ಚರಿತ್ರೆ, ಶ್ರೀ ನಾಗಲಿಂಗ ಸ್ವಾಮಿಗಳ ಚರಿತ್ರೆ ಕೃತಿಗಳನ್ನು ಹೊರತಂದಿದೆ. ಶಿಶುನಾಳ ಶರೀಫರಿಗೆ ಸಂಬಂಧಿಸಿದಂತೆ 'ಕರ್ನಾಟಕ ಕಬೀರ ಶರೀಫ್ ಸಾಹೇಬರ ಚರಿತ್ರೆ, ಹಾಗೂ ತತ್ವಪದಗಳು' ಹೆಸರಿನಲ್ಲಿ ಹತ್ತಕ್ಕೂ ಹೆಚ್ಚು ಕೃತಿಗಳು (ಮಹಾಂತೇಶ ಶಾಸ್ತ್ರೀಗಳು, ಪಾಟೀಲ ಗೊಂಡೂರ) ಬೇರೆ ಬೇರೆ ಸಂಗ್ರಹಕಾರರ ನೆರವಿನಿಂದ ಹೊರತಂದಿದ್ದಾರೆ.

ಈ ಎಲ್ಲ ಕೃತಿಗಳಲ್ಲಿ ಮೊದಲಿಗೆ ಶರೀಫರ ಜೀವನ, ಆತನು ಬೆಳೆದು ಬಂದು ಮಾಡಿದ ಆಧ್ಯಾತ್ಮಿಕ ಸಾಧನೆ ಕುರಿತಾಗಿ, ಆತನ ಜೀವನ ಘಟನೆಗಳನ್ನಾಧರಿಸಿ ಹೇಗೆ ಬೆಳೆದನು ಎಂಬುದನ್ನು ಮತ್ತು ಆತನ ಸಂಪೂರ್ಣ ವ್ಯಕ್ತಿತ್ವವನ್ನು ಕುರಿತಾಗಿ ವಿವರಿಸಲಾಗಿದೆ. ನಂತರ ಶರೀಫರ ತತ್ವಪದಗಳು ರಾಗ-ತಾಳಗಳ ಸೂಚನೆ ಹಿನ್ನೆಲೆಯಲ್ಲಿ ಶರೀಫರ ಜನಪ್ರಿಯವಾದ ಅನೇಕ ಹಾಡುಗಳು ಈ ಎಲ್ಲ ಸಂಕಲನಗಳಲ್ಲಿ ಮತ್ತೆ ಮತ್ತೆ ಸಂಗ್ರಹವಾಗಿವೆ. ಓದುಗರು ಈ ಹಾಡುಗಳನ್ನು ಅರ್ಥ ಮಾಡಿಕೊಳ್ಳಲು ಆಯಾ ಹಾಡುಗಳಿಗೆ ಸಂಬಂಧಿಸಿದಂತೆ ಕೆಲವು ಕೃತಿಗಳ ಹಾಡುಗಳಲ್ಲಿ ಭಾವಸೂಚಕ ಟಿಪ್ಪಣಿಯನ್ನು ಕೊಡಲಾಗಿದೆ.

ಹೀಗೆಯೇ 'ವಾಗ್ವಿಲಾಸ ಬುಕ್ ಡಿಪೋ, ಹುಬ್ಬಳ್ಳಿ(ಎ.ಆರ್.ಶಿವನಾಗಪ್ಪ ಆ್ಯಂಡ್ ಸನ್ಸ್) ಅವರು ಅನೇಕ ತರದ ಪುಸ್ತಕ ಪ್ರಕಟಣೆಗಳನ್ನು ಮಾಡುತ್ತಿದ್ದಾರೆ. 'ಕೈವಲ್ಯ, ಕೈವಲ್ಯ ಕಲ್ಪವಲ್ಲರಿ, ಕೈವಲ್ಯ ನವನೀತಿ, ಪರಮಾರ್ಥಗೀತೆ, ಅನುಭವ ಸಾರ, ಶಿಶುನಾಳರ ತತ್ವಪದಗಳು ಭಾಗ-೧ ಮತ್ತು ಭಾಗ-೨ ಮುಂತಾದ ಕೃತಿಗಳನ್ನು ಹೊರತಂದಿದ್ದಾರೆ. ಇವರ ಪ್ರಕಟಣೆಗಳಲ್ಲಿ ಸರಳವಾದ ಹಾಡುಗಳನ್ನು ಸಂಗ್ರಹಿಸಲಾಗಿದೆ. ರಾಗ-ತಾಳಗಳ ಸೂಚನೆ ಹಿನ್ನೆಲೆಯಲ್ಲಿ ಭಜನೆ ಹಾಡುವವರಿಗೆ ಅನುಕೂಲದ ದೃಷ್ಟಿಯಿಂದ ಸಂಗ್ರಹಸಿದಂತಹ ಹಾಡುಗಳು ಆಗಿವೆ.

ಸದ್ಯೋಜಾತಮೂರ್ತಿ ಅವರ 'ಶಿಶುನಾಳರ ಗೀತೆಗಳು'(೧೯೮೭) ೧೦೬ ಹಾಡುಗಳ ಸಂಕಲನವಾಗಿದೆ. ಇದು ಮಂಡ್ಯ, ಮೈಸೂರಿನ ಭಾಗದಲ್ಲಿ ಶರೀಫರ ತತ್ವಪದಗಳನ್ನು ಜನಪ್ರಿಯಗೊಳಿಸಿದ, ಪರಿಚಯಿಸಿದ ಕೃತಿಯಾಗಿದೆ. ಹೀಗೆಯೇ ಎನ್.ಎಸ್.ಲಕ್ಷ್ಮೀನಾರಾಯಣ ಭಟ್ಟರ 'ಶಿಶುನಾಳ ಶರೀಫ್ ಸಾಹೇಬರ ಗೀತೆಗಳು' ೮೨ ಹಾಡುಗಳನ್ನು ಒಳಗೊಂಡ ಈ ಸಂಕಲನ ಸಮಂಜಸವಾದ ಪೀಠಿಕೆಯೊಂದಿಗೆ ೧೯೮೧ರಲ್ಲಿ ಪ್ರಕಟಿಸಿದರು. ಅದರಲ್ಲಿ ಓದುಗರಿಗೆ ಹಾಡುಗಳ ಭಾವ, ಘಟನೆಗಳನ್ನು ಟಿಪ್ಪಣಿಯಲ್ಲಿ ನೀಡಲಾಗಿದೆ. ಇದು ಆರು ಮರುಮುದ್ರಣಗಳನ್ನು ಕಂಡ ಜನಪ್ರಿಯ ಅವೃತ್ತಿಯಾಗಿದೆ. ಪ್ರತಿ ಮುದ್ರಣದಲ್ಲಿ ಹಾಡುಗಳನ್ನು ಪರಿಷ್ಕರಿಸದೆ, ಮೂರು ಮತ್ತು ಆರನೇ ಮುದ್ರಣದಲ್ಲಿ ಹಾಡುಗಳನ್ನು ಮರುಪರಿಷ್ಕರಿಸಿ ಪ್ರಕಟಿಸಲಾಗಿದೆ. ಇದರಿಂದ ಉತ್ತರ ಕರ್ನಾಟಕದಲ್ಲಷ್ಟೇ ಇದ್ದ ಶರೀಫರು ಕರ್ನಾಟಕದ ಎಲ್ಲರ ಮನೆ ಮಾತಾದರು ಎನ್ನುತ್ತಾರೆ ಭಟ್ಟರು.

ವಿವಿಧ ರೀತಿಯ ಗಂಭೀರ ಸ್ವರೂಪದ ಪುಸ್ತಕಗಳನ್ನು ಹೊರತಂದ ಸಮಾಜ ಪುಸ್ತಕಾಲಯ ಧಾರವಾಡ ಇವರು ಆರ್.ಎಸ್.ಸುಂಕದ ಅವರು ಸಂಪಾದಿಸಿದ 'ಶಿಶುನಾಳರ ಅನುಭಾವ ಗೀತಮಂಜರಿ' (೧೯೮೫) ಎಂಬ ಜನಪ್ರಿಯ ಹಾಡುಗಳ ಸಂಕಲನವನ್ನು ಪ್ರಕಟಿಸಿದ್ದಾರೆ.

ಮಲ್ಲಿಕಾರ್ಜುನ ಸಿಂಧಗಿ ಅವರ ಸಿದ್ಧರೂಢಾ ಪ್ರಕಾಶನ ಹುಬ್ಬಳ್ಳಿ ಅವರು 'ಶ್ರೀ ಶಿಶುನಾಳ ಶರೀಫ್‌ರ ತತ್ವಪದಗಳು' ಭಾಗ-೧ ಮತ್ತು ಭಾಗ ೨ (೧೯೮೩-೧೯೯೨) ಕೃತಿಯನ್ನು ಪ್ರಕಟಿಸಿದ್ದಾರೆ.

ಓದುಗರ ಅನುಕೂಲಕ್ಕೆ ಹಾಡುಗಳು ಸೃಷ್ಟಿಗೊಂಡ ಸಂದರ್ಭ ಮತ್ತು ಭಾವ ಸೂಚಿಯನ್ನು ಪ್ರತಿ ಹಾಡಿಗೆ ವ್ಯಾಖ್ಯಾನ ಮಾಡಿರುವುದು ಈ ಸಂಕಲನಗಳ ವೈಶಿಷ್ಟ್ಯವಾಗಿದೆ. ಹಾರೋಗೇರಿಯ 'ಆಲಬ್ಬೈರಿ' ಕವಿಯ 'ಭಜನೆಯ(ತತ್ವ) ಪದಗಳು'(೨೦೦೭) ಕೃತಿಯನ್ನು ಆರ್.ಬಿ.ಚಿಲಮಿ ಅವರು ಸಂಪಾದಿಸಿ ಪ್ರಕಟಿಸಿದ್ದಾರೆ. ಮೌಖಿಕವಾಗಿದ್ದ ಈ ಪದಗಳು ಪ್ರಕಟನೆ ಮೂಲಕ ಬೆಳಕು ಕಂಡಿವೆ.

ಈ ಮೇಲೆ ನೋಡಿದ ಜನಪ್ರಿಯ ಸಂಕಲನಗಳಲ್ಲಿ ಹೆಚ್ಚಾಗಿ ಶರೀಫರ ತತ್ವಪದಗಳನ್ನು ಪ್ರಕಟಿಸಿರುವುದು ಕಾಣುತ್ತೇವೆ. ಇಲ್ಲಿನ ಪ್ರತಿಯೊಂದು ಸಂಗ್ರಹಗಳು ಆರಂಭದಲ್ಲಿ ಶರೀಫರ ಜೀವನ ಚರಿತ್ರೆ, ಆತನ ಸಾಧನೆಯನ್ನು ತಿಳಿಸಿಕೊಡುತ್ತವೆ. ಭಟ್ಟರು, ಸಿಂಧಗಿ ಮತ್ತು ಶಾಬಾದಿಮಠ ಅವರ ಸಂಗ್ರಹಗಳಲ್ಲಿ ಓದುಗರಿಗೆ ಹಾಡಿನ ರಚನಾತ್ಮಕ ಸಂದರ್ಭ ಸೂಚಿಗಳನ್ನು, ಭಾವಸೂಚಿ, ವ್ಯಾಖ್ಯಾನಗಳನ್ನು ನೀಡಲಾಗಿದೆ. ಈ ಮೂಲಕ ಹಾಡುಗಳ ನಿಜದ ನೆಲೆಯನ್ನು ಅರ್ಥೈಸುವ ಉದ್ದೇಶ ಹೊಂದಿವೆ. ಆದರೆ ಹಾಡುಗಳಿಗೆ ಭಟ್ಟರು ನೀಡುವ ವಿವರಣೆ ಮತ್ತು ಸಿಂಧಗಿ ಅವರು ನೀಡುವ ವಿವರಣೆಗಳಲ್ಲಿ ವ್ಯತ್ಯಾಸ ಕಂಡುಬರುತ್ತದೆ. ಹಾಗಾಗಿ ಹಾಡುಗಳನ್ನು ಓದುಗರು ಅರ್ಥ ಮಾಡಿಕೊಳ್ಳುವಲ್ಲಿ ಕೆಲವು ಗೊಂದಲಗಳು ಇದರಿಂದ ಉಂಟಾಗಿವೆ. ಆದರೂ ಜನಪ್ರಿಯ ನೆಲೆಯಲ್ಲಿ ಗ್ರಂಥಪ್ರಕಟಣೆಗಳ ಮೂಲಕ ಅಜ್ಞಾತವಾಗಿದ್ದ ತತ್ವಪದಕಾರರು ಅಧಿಕ ಸಂಖ್ಯೆಯ ಓದುಗರನ್ನು ತಲುಪಿದರು. ಆದರೆ ಶರೀಫನಷ್ಟು ಜನಪ್ರಿಯತೆ ಇತರ ತತ್ವಪದಕಾರರಿಗಿಲ್ಲ. ಶರೀಫರ ಅಷ್ಟು ಸಂಕಲನಗಳು, ಮರು ಆವೃತ್ತಿಗಳು ಅವನ ಜನಪ್ರಿಯತೆಗೆ ಸಾಕ್ಷಿಯಾಗಿವೆ. ಇವನ ಹಾಡುಗಳು ಯಾಕೆ ಮತ್ತೆ ಮತ್ತೆ ಪ್ರಕಟವಾಗುತ್ತಿವೆ? ಯಾಕೆ ಇತರ ತತ್ವಪದಕಾರರ ಹಾಡುಗಳ ಸಂಗ್ರಹಗಳು ಇಷ್ಟೊಂದು ಮರುಮುದ್ರಣಗೊಂಡಿಲ್ಲ ಅಥವಾ ಜನಪ್ರಿಯವಾಗಿಲ್ಲ? ಶರೀಫರೇಕೆ ಹೆಚ್ಚು ಪ್ರಚಾರ ಪಡೆದರು? ಅವರ ಹಾಡುಗಳ ನಾದ, ಲಯ, ಜೀವಂತಿಕೆಯಿಂದಲೇ ಅಥವಾ ಸರಳತೆಯಿಂದಲೇ, ಇತರೆ ಕಾರಣಗಳಿವೆಯೇ? ಶರೀಫರಿಗೆ ಕೊಟ್ಟ ಮಹತ್ವ ನಾವು ಇತರ ತತ್ವಪದಕಾರರಿಗೇಕೆ ಕೊಡಲಿಲ್ಲ? ಶರೀಫರ ಹಾಡುಗಳಷ್ಟೇ, ಸರ್ಪಭೂಷಣರು, ಕಡಕೋಳ ಮಡಿವಾಳಪ್ಪ ಮುಂತಾದವರ ಹಾಡುಗಳು ಕೂಡ ನಾದ ಲಯಯುಕ್ತವಾಗಿವೆ, ಸರಳವಾಗಿವೆ. ಈ ಹಿನ್ನೆಲೆಯಲ್ಲಿಯೂ ಯೋಚಿಸಬೇಕಾಗಿದೆ.

### ಸಂಪಾದನೆಗಳ ಸ್ವರೂಪ

ಈ ಮೇಲೆ ಚರ್ಚಿಸಲಾದ ಕೃತಿಗಳ ಹಿನ್ನೆಲೆಯಲ್ಲಿ ಅವುಗಳ ಸ್ವರೂಪವನ್ನು ಈ ಕೆಳಗಿನಂತೆ ಪಟ್ಟಿ ಮಾಡಲಾಗಿದೆ.

೧. ಏಕವ್ಯಕ್ತಿ ರಚಿಸಿದ ಹಾಡುಗಳ ಸಂಪಾದನೆಯ ಪ್ರಸ್ತಾವನೆಯಲ್ಲಿ ಸಾಮಾನ್ಯವಾಗಿ ಇವರ ಜೀವನ, ಸಾಧನೆ, ಸಾಹಿತ್ಯ ವಸ್ತು ಕುರಿತ ಚರ್ಚೆ ಇರುತ್ತದೆ.

೨. ಅನೇಕ ವ್ಯಕ್ತಿಗಳ ಆಯ್ದ ರಚನೆಗಳಲ್ಲಿ ಸಂಪುಟದ ಉದ್ದೇಶ, ವಿಶಿಷ್ಟತೆ, ಹಾಗೂ ಪ್ರಸ್ತಾವನೆಯಲ್ಲಿ ಆಯ್ದ ವ್ಯಕ್ತಿಗಳ ಸಂಕ್ಷಿಪ್ತ ಪರಿಚಯ, ಹಾಡುಗಳ ಸಾಹಿತ್ಯಕ ವಸ್ತು ವಿಶಿಷ್ಟತೆಯನ್ನು ಚರ್ಚಿಸಲಾಗಿದೆ.

೩. ಬಿಡಿಬಿಡಿಯಾಗಿ ಸಿಗುವ ಅನೇಕ ಹಾಡುಗಳನ್ನು ಸಂಪುಟಗಳಲ್ಲಿ ಸಂಕಲಿಸಲಾಗಿದೆ. ರಚನೆಕಾರರ ಹೆಸರಿನಿಂದ ಇವು ಸಂಕಲಿತವಾಗಿಲ್ಲ. ಪದ್ಯದ ಕೊನೆಯಲ್ಲಿ ಬರುವ ಇಷ್ಟ ದೈವದ ಅಂಕಿತದಿಂದ ಇವುಗಳನ್ನು ಗುರುತಿಸಬಹುದಾಗಿದೆ. ಬದಲಿಗೆ ಸ್ವಾಮಿನೋ, ಏಳಯ್ಯ ಬೆಳಗಾಯಿತು, ಧೀರನೇ ಶಿವಯೋಗಿಯೋ, ನಯನಿನ್ನೊಳಗೆ ನೆಲೆಗೊಳಿಸು ಈ ವಿಭಾಗಗಳ ಹಿನ್ನೆಲೆಯಲ್ಲಿ ಸಂಕಲನಗೊಂಡಿವೆ. ಪ್ರಸ್ತಾವನೆಯಲ್ಲಿ ಸಂಪುಟದ ಉದ್ದೇಶ, ಸಾಹಿತ್ಯ, ಕುರಿತ ವಿಶಿಷ್ಟತೆ ಚರ್ಚಿಸಲಾಗಿದೆ.

೪. ಜನಪ್ರಿಯ ನೆಲೆಯ ಸಂಪಾದನೆಗಳಲ್ಲಿ ಅಕಾಡೆಮಿಕ್ ಆದ ತಾತ್ವಿಕ ಹಿನ್ನೆಲೆಯ ಸಂಗ್ರಹಗಳು ಕಂಡುಬರುವುದಿಲ್ಲ. ಸಾಮಾನ್ಯವಾಗಿ ಆಯಾ ಕರ್ತೃಗಳ ಜೀವನ, ಪರಿಚಯ, ಆಧ್ಯಾತ್ಮಿಕ ಸಾಧನೆ, ಹಾಡುಗಳ ವಸ್ತು ವಿಷಯ ಕುರಿತ ವಿವರಣೆ ಇರುತ್ತವೆ. ಇವಕ್ಕೆ ಯಾವುದೇ ತಾತ್ವಿಕ ಉದ್ದೇಶ ಇರುವುದಿಲ್ಲ. ಸಿಕ್ಕ ಎಲ್ಲ ರಚನೆಗಳನ್ನು ಸೇರಿಸಿ ಪ್ರಕಟಿಸಿರುತ್ತಾರೆ. ಕೆಲವಕ್ಕೆ ಇವು ಯಾವುದೂ ಇರುವುದಿಲ್ಲ. ಕೆಲವು ಹಾಡುಗಳ ಸಂಗ್ರಹವಷ್ಟೇ ಇರುತ್ತವೆ. ಉದಾಹರಣೆಗೆ ಗದಗಿನ ಶಾಬಾದಿಮಠ ಪ್ರಕಾಶನ, ವಾಗ್ವಿಲಾಸ ಬುಕ್ ಡಿಪೋ ಮೊದಲಾದವು.

೫. ಪ್ರಾದೇಶಿಕ ನೆಲೆಯ/ಜನಪ್ರಿಯ ಸಂಪುಟಗಳು ಕೆಲವು ಅಕಾಡೆಮಿಕ್ ಆದ ಹಿನ್ನೆಲೆಯಲ್ಲಿ ಸಂಗ್ರಹಿಸಿದಂತವು ಇವೆ. ಉದಾಹರಣೆಗೆ ಹೈದರಾಬಾದ್ ಕರ್ನಾಟಕದ ತತ್ವಪದಗಳು. ರಾಯಚೂರು ಜಿಲ್ಲೆಯ ಅನುಭಾವಿಗಳು. ಇಲ್ಲಿ ಆಯಾ ಕವಿಯ ಹಾಡುಗಳನ್ನು ಜಿಲ್ಲಾವಾರು ಸಂಗ್ರಹಿಸಿ, ಆಯಾ ಜಿಲ್ಲೆಯ ವೈಶಿಷ್ಟ್ಯತೆ, ಪ್ರದೇಶದ ವೈಶಿಷ್ಟ್ಯತೆ, ಸಾಹಿತ್ಯದ ಒಟ್ಟು ತಾತ್ವಿಕ ವಿಶ್ಲೇಷಣೆ ಅದರ ಪ್ರಾಮುಖ್ಯತೆಯನ್ನು ಕುರಿತಂತೆ ಚರ್ಚಿಸಲಾಗಿದೆ.

೬. ಹಾಡುಗಳಿಗೆ ರಾಗ-ತಾಳಗಳನ್ನು ಸೂಚಿಸಿರುವುದು ಕೆಲವು ಕೃತಿಗಳಲ್ಲಿ ಕಂಡುಬರುತ್ತವೆ. ಕೆಲವು ಕೃತಿಗಳಲ್ಲಿ ಇದು ಕಾಣುವುದಿಲ್ಲ. ಮೊದಲಿಗೆ ಗುರುವನ್ನು ಸ್ಮರಿಸಿ ಹೇಳುವ ಗುರುಸ್ತುತಿ, ಕೊನೆಗೆ ಮಂಗಳಾರತಿ ಪದ ಬಹುತೇಕ ಸಂಗ್ರಹಗಳಲ್ಲಿ ಕಂಡುಬರುತ್ತವೆ. ಕೃತಿ ಮಧ್ಯಭಾಗದಲ್ಲಿ ಸಾಮಾಜಿಕವಾಗಿ, ಧಾರ್ಮಿಕವಾಗಿ ಬೇರೆ-ಬೇರೆ ವಿಷಯಗಳು ಒಳಗೊಂಡ ಪದಗಳು ಇರುತ್ತವೆ. ಕೆಲವು ಹಾಡುಗಳ ಸಂಗ್ರಹಗಳಲ್ಲಿ ಮೊದಲಿಗೆ ಗುರುಸ್ತುತಿ ಕೊನೆಗೆ ಮಂಗಳಾರತಿ ಪದಗಳು ಇರುವುದು ಕಂಡುಬರುವುದಿಲ್ಲ. ಉದಾಹರಣೆಗೆ ಕರ್ನಾಟಕ ಸಾಹಿತ್ಯ ಅಕಾಡೆಮಿ ಪ್ರಕಟಿಸಿದ ಕೆಲವು ಕೃತಿಗಳು.

೭. ಹಾಡಿನ ಮೊದಲ ಸಾಲನ್ನು ಬಹುತೇಕ ಪದಗಳಿಗೆ ಶೀರ್ಷಿಕೆಯಾಗಿ ಗುರುತಿಸಿ ಸಂಗ್ರಹಿಸಲಾಗಿದೆ. ಕ್ವಚಿತ್ತಾಗಿ ಪದ್ಯದ ಎರಡನೇ, ನಾಲ್ಕನೇ ಮತ್ತು ಮಧ್ಯದ ಕೊನೆ ಸಾಲನ್ನು ಪದ್ಯದ ಶೀರ್ಷಿಕೆಗೆ ಬಳಸಿರುವುದು ಕಂಡುಬರುತ್ತದೆ. ಉದಾಹರಣೆಗೆ ರಾಮಪುರದ ಬಕ್ಕಪ್ಪಯ್ಯನ ಹಾಡುಗಳು(ಸ್ವರವಚನ-ತ್ರಿವಿಧಿ), 'ಸಾಧಕರಿಗಿದು ಬಲು ಸಡಗರವೂ' ಎಂಬ ಕೂಡಲೂರರ ಪದ್ಯ ಮುಂತಾದವು.

೮. ಸಂಕಲಿಸಿದ ಹಾಡುಗಳಿಗೆ/ಪದ್ಯಕ್ಕೆ ಶೀರ್ಷಿಕೆಯಿಲ್ಲದೇ ಸಂಗ್ರಹಿಸಿದಂತವೂ ಇವೆ. ಇಲ್ಲಿ ಪದ್ಯಗಳಿಗೆ ಕ್ರಮವಹಿಸಿ/ಅನುಕ್ರಮದಲ್ಲಿ ಅಂಕಿಗಳನ್ನು ಕೊಟ್ಟು ಸಂಗ್ರಹಿಸಲಾಗಿದೆ. ಉದಾಹರಣೆಗೆ ತತ್ವಪದಗಳು ಪ್ರಾತಿನಿಧಿಕ ಸಂಕಲನ, ಅಲಬ್ಬೈರವಿ ಕವಿ ಹಾಡುಗಳು ಮುಂತಾದವು.

೯. ಛಂದಸ್ಸಿನ ಹಿನ್ನೆಲೆಯಲ್ಲಿಯೂ ಕೆಲವು ಸಂಗ್ರಹಗಳು ಇವೆ. ಉದಾಹರಣೆಗೆ ಷಟ್ಪದಿಯಲ್ಲಿ 'ಮುಪ್ಪಿನ ಷಡಕ್ಷರಿಗಳ ಕೈವಲ್ಯಪದ' ಕೃತಿ.

೧೦. ಅಧ್ಯಯನದ ಅನುಕೂಲದ ದೃಷ್ಟಿಯಿಂದ, ಓದುಗರ ದೃಷ್ಟಿಯಿಂದ ಸಂಗ್ರಹದ ಕೃತಿಗಳಲ್ಲಿ ಮೊದಲಿಗೆ ಪ್ರಾರ್ಥನೆ, ಗುರು ಭಕ್ತಿ ಇರುತ್ತದೆ. ನಂತರ ಶರಣಸತಿ ಲಿಂಗಪತಿ ಭಾವ, ಅನುಭಾವ, ಬೆಡಗು-ತತ್ವವಿಲಾಸ, ಆತ್ಮಬೋಧೆ, ಸಾಮಾಜಿಕ, ವಿಡಂಬನೆ, ಘಟನಾತ್ಮಕ ವಿವರಣೆ, ಬೋಧೆ, ನೀತಿ ಎಂಬ ವಸ್ತು ಶೀರ್ಷಿಕೆಯ ಹಿನ್ನೆಲೆಯಲ್ಲಿ ವಿಂಗಡಿಸಿ ಸಂಪಾದಿಸಲಾಗಿರುತ್ತದೆ. ಉದಾಹರಣೆಗೆ ಪರಿಷತ್ತು ಪ್ರಕಟಿಸಿದ ಶರೀಫರ ಗೀತೆಗಳ ಕೃತಿ, ಆಕಾಡೆಮಿಯ ಕೆಲವು ಮುತ್ತಿನಹಾರ ಮಾಲಿಕೆಯ ಕೃತಿಗಳು ಮುಂತಾದವು.

೧೧. ಹಸ್ತಪ್ರತಿ ಮತ್ತು ಪ್ರಕಟಿತ ಪುಸ್ತಕಗಳಿಂದಲೂ ಸಂಪಾದಿಸಿದ ಕೃತಿಗಳು ಹಾಗೂ ಕ್ಷೇತ್ರಕಾರ್ಯ ಮಾಡಿ ಹಾಡುವ ಗಾಯಕರಿಂದ ಸಂಪಾದಿಸಿದ ಹಾಡುಗಳ ಸಂಕಲನಗಳು ಇವೆ.

೧೨. ಶಾಸ್ತ್ರೀಯ ಸಂಪಾದನೆಗಳಲ್ಲಿ/ಆಕಾಡೆಮಿಕ್ ಸಂಪಾದನೆಯ ಕೆಲವು ಸಂಪಾದನೆಗಳಲ್ಲಿ ಅನುಬಂಧದಲ್ಲಿ ಹಾಡು ಹಾಡಿದವರ ವಿವರ ಮೂಲ ಒದಗಿಸಿದವರ ವಿವರ, ಹಾಡಿನ ಅಕಾರಾದಿ, ರಚನೆಕಾರರ ಅಕಾರಾದಿ, ಸಂಕ್ಷಿಪ್ತ ಪರಿಚಯ, ಪಾರಿಭಾಷಿಕ ಪದಕೋಶ, ಗ್ರಾಮ್ಯಪದಕೋಶ, ವಿಶಿಷ್ಟ ಪದಕೋಶ, ಅಂಕಿತಗಳ ಅಕಾರಾದಿಯನ್ನು ಒದಗಿಸಿರುತ್ತವೆ. ಇವು ಓದುಗರಿಗೆ, ಅಧ್ಯಯನಕಾರರಿಗೆ ಉಪಯುಕ್ತ ಮಾಹಿತಿಗಳಾಗಿವೆ. ಈ ತರದ ಕೆಲವು ಕೃತಿಗಳ ಸಂಪಾದನೆಗಳಲ್ಲಿ ಮೇಲೆ ತಿಳಿಸಿದ ವಿಷಯಗಳ ಬಗ್ಗೆ ಅಪೂರ್ಣ ಮಾಹಿತಿ ಇರುವುದು ಕಾಣಬಹುದು.

೧೩. ಅಕಾಡೆಮಿಕ್ ಶಿಸ್ತಿನ ಹಿನ್ನೆಲೆಯಲ್ಲಿ ಪ್ರಕಟಿಸಿದ ಬಹುತೇಕ ಕೃತಿಗಳ ಪ್ರಸ್ತಾವನೆಯಲ್ಲಿ ಸಂಪಾದನೆ ಕ್ರಮ, ಹಾಡುಗಳ ವಸ್ತುವಿಶೇಷ, ಕವಿಯ ಪರಿಚಯ, ತಾತ್ವಿಕ ಉದ್ದೇಶ ಕುರಿತ ವಿವರಣೆ ಇರುತ್ತದೆ. ಕೆಲವು ಕೃತಿಗಳಲ್ಲಿ ಗಂಭೀರ ಸ್ವರೂಪದ ವಿಶ್ಲೇಷಣೆ ಇರುವುದು ಕಾಣಬಹುದು.

೧೪. ಜನಪ್ರಿಯ ನೆಲೆಯ ಕೆಲವು ಕೃತಿಗಳಲ್ಲಿ ಓದುಗರ ಅನುಕೂಲಕ್ಕೆ ಹಾಡಿನ ಭಾವಸೂಚಿ, ಘಟನಾತ್ಮಕ ವಿವರಣೆ, ಆಯಾ ಹಾಡಿನ ವ್ಯಾಖ್ಯಾನ ಕುರಿತ ಸಂಗ್ರಹಗಳು ಇವೆ. ಉದಾಹರಣೆಗೆ 'ಶಿಶುನಾಳ ಶರೀಫರ ಗೀತೆಗಳು' ಈ ಕುರಿತು ವಿಶ್ಲೇಷಿಸಿದ ಭಟ್ಟರು ಮತ್ತು ಸಿಂಧಗಿ ಅವರು ಪ್ರಮುಖರು.

ಸಂಗ್ರಹ/ಸಂಪಾದನೆಗಳ ಫಲಿತಗಳು

ಮೇಲೆ ಚರ್ಚಿಸಲಾದ ಸಂಪಾದನೆಗಳ ಹಿನ್ನೆಲೆಯಲ್ಲಿ ಅವುಗಳ ಫಲಿತಗಳನ್ನು ಪಟ್ಟಿ ಮಾಡಲಾಗಿದೆ.

೧. ಇಲ್ಲಿ ಚರ್ಚಿಸಲಾದ ಕೃತಿಗಳ ಹಿನ್ನೆಲೆಯಲ್ಲಿ ನೋಡಿದರೆ ಅಪಾರ ಪ್ರಮಾಣದ ಸ್ವರವಚನ/ತತ್ವಪದ ಸಂಕಲನಗಳು ಬಂದಿವೆ. ಇನ್ನೂ ಅನೇಕ ತತ್ವಪದಗಳು ಜನಸಮುದಾಯಗಳ ನಾಲಿಗೆ ಮೇಲಿವೆ. ತತ್ವಪದಕಾರರು ರಚಿಸಿದ ಇನ್ನಿತರ ರಚನೆಗಳು, ಸಂಕಲಿಸಬೇಕಾಗಿದೆ. ಈಗಾಗಲೇ ವಿವಿಧ ರೀತಿಯ ಹಾಡುಗಳು ಪ್ರಕಟವಾಗಿವೆ.

೨. ವೀರಶೈವ ಅಧ್ಯಯನ ಸಂಸ್ಥೆಗಳು ಅನೇಕ 'ಸ್ವರವಚನಗಳ' ಸಂಕಲನಗಳನ್ನು ಬೆಳಕಿಗೆ ತಂದಿದ್ದಾರೆ. ಇದರಿಂದಾಗಿ ಅವು ಸಮಗ್ರವಾಗಿಯೂ ಒಂದೆಡೆ ಪ್ರಕಟಗೊಂಡು ಜನಸಾಮಾನ್ಯರಿಗೂ ನಿಲುಕುವಂತಾಗಿದೆ. ಇದು ಮಹತ್ವದ ಕೆಲಸವಾಗಿದೆ. ರಚನೆಗಳನ್ನು ವಸ್ತು ಹಿನ್ನೆಲೆಯಾಗಿ ನೋಡುವ, ಪರಿಭಾಷೆಗೆ ಪ್ರಾಮುಖ್ಯತೆ ಕೊಟ್ಟು ಸಂಪಾದಿಸಲಾಗಿದೆ. ಬೇರೆ ಬೇರೆ ಪ್ರಕಾಶನಗಳು ನಿರ್ಲಕ್ಷ್ಯಕ್ಕೆ ಒಳಗಾದ ವ್ಯಕ್ತಿಗಳ ರಚನೆಗಳನ್ನು ಸ್ವರವಚನಗಳು, ತತ್ವಪದಗಳು, ಅನುಭಾವಪದಗಳು, ಭಜನೆ ಪದಗಳು, ಕೈವಲ್ಯಪದ ಮುಂತಾದವುಗಳನ್ನು ಪ್ರಕಟಿಸಲಾಗಿದೆ. ಈ ನಿಟ್ಟಿನಲ್ಲಿ ಅಕಾಡೆಮಿ ಪ್ರಕಟಣೆಗಳು ಮುಖ್ಯವಾದವು.

೩. ವೀರಶೈವದ ತತ್ವ, ಪರಿಭಾಷೆಯಲ್ಲಿಯೇ ತತ್ವಪದಗಳನ್ನು ಸ್ವರವಚನಗಳೆಂದು ಗ್ರಹಿಸಿ ಸಂಕಲಿಸಿದುದು ಕಂಡುಬರುತ್ತದೆ. ಆದರೆ ಮೋಟ್ನಳ್ಳಿ ಹಸನಸಾಬರ ರಚನೆಗಳನ್ನು ಮಾತ್ರ 'ತತ್ವಪದಗಳ' ಹೆಸರಿನಲ್ಲಿ ಸಂಗ್ರಹಿಸಿ ಪ್ರಕಟಿಸಿರುವುದನ್ನು ಕಾಣುತ್ತೇವೆ. ಇವುಗಳಿಗೆ ಸ್ವರವಚನಗಳೆಂದು ಯಾಕೆ ಕರೆದಿಲ್ಲ? ಹಸನಸಾಬ ವೀರಶೈವನಲ್ಲದ ಕಾರಣ ಹೀಗೆ ಕರೆದಂತೆ ತೋರುತ್ತದೆ. ಅಂದರೆ ಧಾರ್ಮಿಕ ದೃಷ್ಟಿಕೋನ ಈ ಸಂಕಲನಗಳ ಹಿಂದೆ ಇರುವುದು ಎದ್ದು ಕಾಣುತ್ತದೆ.

೪. ಕೃತಿಕಾರನ ಪ್ರಾಮುಖ್ಯತೆಯಿಂದ ಆತನ ರಚನೆಗಳು ಹಿಂದೆ ಸರಿದಿವೆ. ಹೆಚ್ಚಿನದಾಗಿ ಕವಿಯ ಹೆಸರಿನಲ್ಲಿಯೇ ಪ್ರಕಟವಾಗಿವೆ.

೫. ಜಾತ್ಯತೀತ ಮತ್ತು ಜನಸಾಮಾನ್ಯರ ದೃಷ್ಟಿಯಿಂದ ಸಾಹಿತ್ಯ ಪರಿಷತ್ತು, ಅಕಾಡೆಮಿಗಳು, ವಿಶ್ವವಿದ್ಯಾಲಯಗಳು ಪ್ರಕಟಪಡಿಸಿರುವುದು ಕಂಡುಬರುತ್ತದೆ. ಕೆಲವು ವಿಶ್ವವಿದ್ಯಾಲಯಗಳು ಪದವಿ ತರಗತಿಗೆ ಪಠ್ಯವಾಗಿ ತತ್ವಪದಗಳನ್ನು ಇಡಲಾಗಿದೆ.

೬. ಜನಪ್ರಿಯ ಪ್ರಕಟಣೆಯ ಕೆಲವು ಪ್ರಕಾಶನಗಳು ತತ್ವಪದಗಳನ್ನು ಸಾಮಾನ್ಯರ ನಾಲಿಗೆ ಮೇಲೆ ನೆಲೆ ನಿಲ್ಲಿಸಿರುವುದು ವಿಶೇಷವಾಗಿದೆ. ಅವು ಪ್ರಕಟಿಸಿದ ಅನೇಕ ಸಂಗ್ರಹಗಳಿಂದ ಇದನ್ನು ಕಾಣಬಹುದು.

೭. ಅನೇಕ ವೀರಶೈವ ಮಠಗಳು ಅಧ್ಯಯನ ಸಂಸ್ಥೆಯಿಂದ ಹಸ್ತಪ್ರತಿಗಳ ನೆರವಿನಿಂದ ಹೆಚ್ಚು ಸ್ವರವಚನ ಸಂಕಲನ ಕೃತಿಗಳನ್ನು ಶಾಸ್ತ್ರೀಯವಾಗಿ ಸಂಪಾದಿಸಿ ಪ್ರಕಟಿಸಿದ್ದಾರೆ. ಇದರಿಂದ ಕವಿಚರಿತೆಕಾರರ ಗಮನಕ್ಕೆ ಬಾರದೆ ಇರುವ ಅನೇಕ ತತ್ವಪದಕಾರರು, ಅವರ ಕೃತಿಗಳು ಬೆಳಕಿಗೆ ಬಂದಿವೆ.

೮. ಉತ್ತರ ಕರ್ನಾಟಕ ಮತ್ತು ಹೈದ್ರಾಬಾದ್ ಕರ್ನಾಟಕ ಭಾಗದಿಂದ ಸ್ವರವಚನ ಸಂಕಲನಗಳು ಅಧಿಕವಾಗಿವೆ.

೯. ವಿಶ್ವವಿದ್ಯಾಲಯ, ಪರಿಷತ್ತು, ಅಕಾಡೆಮಿಯಿಂದ ಸಂಪಾದಿಸಿ ಪ್ರಕಟಿತವಾದ ಕೃತಿಗಳಲ್ಲಿ ಗ್ರಂಥ ಸಂಪಾದನಾಶಾಸ್ತ್ರದ ವಿಧಿವತ್ತಾದ ಕ್ರಮಗಳನ್ನು ಅನುಸರಿಸಿ ಪಾಠ, ಉನ್ನತ ವಿಮರ್ಶೆ ಮಾಹಿತಿಯುಕ್ತವಾಗಿ ಅನುಬಂಧ, ರಾಗ-ತಾಳ ಮುಂತಾದ ರೀತಿಯಲ್ಲಿ ಪ್ರಕಟಿಸಿರುವುದು ವಿಶೇಷವಾಗಿದೆ.

೧೦. ಹೊಸ ಪ್ರೇರಣೆಗಳನ್ನು ಬಳಸಿಕೊಂಡ ಕೃತಿ ವಿಮರ್ಶೆ ಪ್ರವೃತ್ತಿ ಕೆಲವು ಸಂಪಾದನೆಗಳಲ್ಲಿ ಕಂಡಿವೆ. ತತ್ವಪದಗಳ ಭಾಷೆ, ವಸ್ತು, ಅವರು ಎದುರಿಸಿದ ಸಂದರ್ಭ ಮುಂತಾದ ನೆಲೆಯಲ್ಲಿ ಕೆಲವು ಅಂಶಗಳನ್ನು ಪ್ರಸ್ತಾಪಿಸಿರುವುದು ಕಾಣುತ್ತದೆ.

೧೧. ತತ್ವಪದಗಳನ್ನು ಸಂಪಾದಿಸುವ ವಿಧಾನದಲ್ಲಿ ಸರಳತೆಯನ್ನು ಅಳವಡಿಸಿಕೊಂಡಂತೆ ಕಂಡುಬರುತ್ತದೆ. ಅಂದರೆ ನಿಜವೆನ್ನಬಹುದಾದ ಪಾಠವನ್ನು ನಿಷ್ಕರ್ಷಿಸಿ, ಹಸ್ತಪ್ರತಿಯಲ್ಲಿದ್ದ (ಅಶುದ್ಧ ಪಾಠ) ಪಾಠವನ್ನು ಅಡಿಯಲ್ಲಿ ಉಲ್ಲೇಖಿಸಿರುವುದು ಕಂಡುಬರುತ್ತದೆ. ಇದರಿಂದ ಭಾಷಾ ಸ್ವರೂಪ, ಒಪ್ಪಿತ ಪಾಠದ ಶೋಧ ಮೊದಲಾದ ವಿಷಯಗಳ ಕುರಿತು ಕೆಲವು ಸಂಪುಟಗಳಲ್ಲಿ ಕಾಣಬಹುದು.

೧೨. ಈ ಹಿಂದಿನ ಪರಿಷ್ಕರಣಗಳಲ್ಲಾದ ದೋಷಗಳನ್ನು ಸರಿಪಡಿಸಿಕೊಂಡು ಮತ್ತೆ ಕೆಲವು ಪರಿಷ್ಕೃತ ಕೃತಿಗಳು ಬೆಳಕಿಗೆ ಬಂದಿವೆ. ಇದರಿಂದಾಗಿ ಕನ್ನಡ ಸಾಹಿತ್ಯಕ್ಕೆ, ಪರಂಪರೆಗೆ ಅಪಾರವಾದ 'ತತ್ವಪದ ಸಾಹಿತ್ಯ'ದ ಗಣಿ ಸೇರಿಕೊಂಡಿದೆ.

ಆದರೆ ಒಟ್ಟಾರೆ ಆಧುನಿಕ ಜಗತ್ತಿನಲ್ಲಿ ಪರಂಪರಾಗತವಾದಂತ ಪ್ರಾಚೀನ/ಮಧ್ಯಕಾಲೀನ ಸಾಹಿತ್ಯ ಕೃತಿಗಳ ಅವಶ್ಯಕತೆ ಇದೆಯೇ ಎಂಬ ಪ್ರಶ್ನೆ ಉದ್ಭವವಾಗಿದೆ. ಆದ್ದರಿಂದಲೇ ಈ ತತ್ವಪದಗಳ ಅಥವಾ ಕಾವ್ಯಗಳ ವ್ಯವಸ್ಥಿತವಾದ ಅಭ್ಯಾಸ, ಸಂಗ್ರಹ ಉಪೇಕ್ಷೆಗೆ ಒಳಗಾಗಿದೆ. ಬಹಳಷ್ಟು ವಿದ್ಯಾರ್ಥಿಗಳು ಈ ಕಾವ್ಯಗಳನ್ನು ಓದುವುದು ನಿಷ್ಪ್ರಯೋಜಕವೆಂದು ಭಾವಿಸಿದಂತಿದೆ. ಆದ್ದರಿಂದ ಶಾಲಾ ಕಾಲೇಜುಗಳಲ್ಲಿ ತತ್ವಪದಗಳ ಆಯ್ದ ಭಾಗಗಳನ್ನು ಬೋಧಿಸಲು ಸಹ ಹಿಂದೇಟು ಹಾಕಲಾಗುತ್ತಿದೆ. ಹೊಸ ಶಿಕ್ಷಣದ ಪದ್ಧತಿಯಿಂದ ವಿದ್ಯಾರ್ಥಿಗಳು ಪರಂಪರೆಯಿಂದ ದತ್ತವಾಗುವ ಜ್ಞಾನದಿಂದ ವಂಚಿತರಾಗುತ್ತಿದ್ದಾರೆ ಎನಿಸುತ್ತದೆ. ವಿಮರ್ಶೆ ಎಂದರೆ ಹೊಸಗನ್ನಡ ವಿಮರ್ಶೆಯೆಂದು ತಿಳಿಯುವವರೇ ಹೆಚ್ಚು. ಮಧ್ಯಕಾಲೀನ ಸಾಹಿತ್ಯ ಮತ್ತು ಹೊಸಗನ್ನಡ ಸಾಹಿತ್ಯಕ್ಕೆ ಈ ತತ್ವಪದಗಳು ಕೊಂಡಿಯಾಕಾರದ ಪ್ರೇರಣೆ ನೀಡಿವೆ.

ಇದನ್ನು ಓದುಗರಿಗೆ ಮನದಟ್ಟು ಮಾಡಬೇಕಾಗಿದೆ. ಕನ್ನಡ ಸಾಹಿತ್ಯದ ಅನೇಕ ಸಾಧ್ಯತೆಗಳನ್ನು ವಿಸ್ತರಿಸಲು ಶಕ್ತವಾದದ್ದು ತತ್ವಪದಗಳ ಗುಣ ಎಂದು ತಿಳಿಸಬೇಕಾಗಿದೆ. ಈ ತತ್ವಪದಗಳ ಅರಿವಿಲ್ಲದ, ಪರಿಚಯವಿಲ್ಲದ ಆಧುನಿಕ ಸಾಹಿತ್ಯದ ತಿಳುವಳಿಕೆ ಅಪೂರ್ಣವಾದುದು. ಆದರೆ ಇತ್ತೀಚೆಗೆ ಇವುಗಳ ಸಂಪಾದನೆ, ಅಧ್ಯಯನದ ಕಡೆಗೆ ವಾಲುತ್ತಿರುವುದು, ಇವುಗಳ ಸಂಶೋಧನೆಗೆ ಮೂಲ ಸಾಮಗ್ರಿ ಒದಗಿಸುವ ಜ್ಞಾನ ಪ್ರವಾಹವೆಂಬಂತೆ ತೋರುತ್ತಿದೆ. ಇದು ಅಶಾದಾಯಕವಾದುದು. ಆದರೆ ಯಾವುದೇ ಬಂಧ ನಿರ್ಬಂಧಗಳಿಲ್ಲದೇ ಮುಕ್ತವಾಗಿರುವ ಬಯಲು ಸ್ವರೂಪದ ಈ ತತ್ವಪದಗಳನ್ನು ಇಂದು ಅನೇಕ ಬಗೆಯ ಬಂಧಗಳಲ್ಲಿ ಬಂಧಿಸಲಾಗಿದೆ. ಮಠಗಳು ವೀರಶೈವ ಸಾಹಿತ್ಯದ ಮುಂದುವರಿಕೆಯ ಹೆಗ್ಗಳಿಕೆ ಎಂಬಂತೆ ತತ್ವಪದಗಳನ್ನು ಸ್ವರವಚನಗಳ ಹೆಸರಿನಲ್ಲಿ ಪ್ರಕಟಿಸಿರುವುದು ಕಂಡುಬರುತ್ತದೆ. ೧೫ನೇ ಶತಮಾನದಲ್ಲಿ ವಿಜಯನಗರ ಕಾಲದಲ್ಲಿ ಶರಣರ ವಚನಗಳನ್ನು ಸಾಂಸ್ಥಿಕಗೊಳಿಸುವ ಕಾರ್ಯಕ್ಕೆ ಮುಂದಾಗಿವೆ. ಅವುಗಳನ್ನು ಒಂದು ನಿರ್ದಿಷ್ಟ ಪರಿಭಾಷೆಗೆ ಮಿತಿಗೊಳಿಸಲಾಗಿದೆ. ಅವುಗಳನ್ನು ಒಂದು ತರ್ಕಕ್ಕೆ, ತಾತ್ವಿಕತೆಗೆ, ಮೀಮಾಂಸೆಗೆ ಒಳಪಡಿಸುವ ಕಾರ್ಯವೂ ನಡೆದಿದೆ. ಹೆಚ್ಚು ಜನಪ್ರಿಯವಾಗಿರುವ ಜನರು ಆಡುವ ಈ ತತ್ವಪದಗಳು ಭಜನೆ ಪದಗಳೆಲ್ಲ ಸ್ವರವಚನಗಳೆನಿಸಿಕೊಂಡಿವೆ. ಈ ಬಗೆಯ ಪ್ರಯತ್ನಕ್ಕೆ ವೀರಶೈವ ಮಠಗಳು, ವ್ಯಕ್ತಿಗಳು, ಸಂಸ್ಥೆಗಳು, ಪ್ರಕಾಶನಗಳು ಕಾರಣವಾಗಿವೆ. ವೀರಶೈವ ಹಿನ್ನೆಲೆಯಿಂದ ಸಂಗ್ರಹಿಸಿದ ಸಂಗ್ರಹಕಾರರು ತತ್ವಪದಗಳನ್ನು ಸ್ವರವಚನ ಎನ್ನುವ ಹೆಸರಿನಲ್ಲಿ ಪ್ರಕಟಿಸಿದರು. ಹಾಗಾಗಿ ಇವುಗಳ ರಚನೆಕಾರರನ್ನು ಸ್ವರವಚನಕಾರರು, ಶಿವಯೋಗಿಗಳು ಎಂದು ಕರೆಯಲಾಗಿದೆ. ಸ್ವರವಚನಗಳ ಹೆಸರಿನಲ್ಲಿ ಸಂಗ್ರಹಿಸಿದ ಸಂಗ್ರಹಕಾರರಿಗೆ 'ಸಂಗೀತ' ಮುಖ್ಯವಾಗಿದೆ. ಹೀಗಾಗಿ ಎಲ್.ಬಸವರಾಜು ಅವರು ಇವುಗಳನ್ನು 'ಶಿವದಾಸರ ಗೀತೆಗಳು' ಎಂದಿದ್ದಾರೆ. ಶೈವದ ಹಿನ್ನೆಲೆಯಲ್ಲಿಯೂ ಇವುಗಳನ್ನು ಹೀಗೆ ಕರೆದಂತೆ ಕಾಣುತ್ತದೆ. ಭಕ್ತಿಯೇ ಮುಖ್ಯವಾಗಿಸಿಕೊಂಡ ಸಂಗ್ರಹಕಾರರಿಗೆ 'ಕೈವಲ್ಯಪದ'ವಾಗಿವೆ. ಕೈವಲ್ಯ ಎಂಬ ಮಾತಿನ ಹಿಂದೆ 'ಕೇವಲ' ಎಂಬುದರ ದನಿಯಿದೆ. ಕೇವಲ ಎಂಬುದಕ್ಕೆ ವಿಚಿತ್ರ, ಅಸಾಮಾನ್ಯ, ಏಕಾಂಗಿ ಈ ಮೊದಲಾದ ಅರ್ಥಗಳ ಜೊತೆಗೆ ಪೂರ್ಣ, ಶುದ್ಧ, ಅಖಂಡ ಈ ಅರ್ಥಗಳು ಇವೆ. ಆಧ್ಯಾತ್ಮಿಕ ಸಂದರ್ಭದಲ್ಲಿ ಈ ಎರಡನೇ ಅರ್ಥಗಳೇ ಮುಖ್ಯ. ಕೈವಲ್ಯ ಸಾಹಿತ್ಯದಲ್ಲಿ ಹಾಡಿನ ರೂಪದಲ್ಲಿ ಅಭಿವ್ಯಕ್ತಗೊಂಡ ಅನುಭವ ಮಾತ್ರ ಸೇರುತ್ತದೆ. ಈ ಅರ್ಥದಲ್ಲಿಯೇ ನಿಜಗುಣ ಶಿವಯೋಗಿಗಳು 'ಕೈವಲ್ಯಪದ್ಧತಿ' ಎಂದು ತಮ್ಮ ಹಾಡುಗಳನ್ನು ಕರೆದರು ಎನ್ನುತ್ತಾರೆ ಎಚ್.ತಿಪ್ಪೇರುದ್ರಸ್ವಾಮಿಗಳು. ಇಲ್ಲಿ ಮೋಕ್ಷವೇ ಮುಖ್ಯವಾಗಿ ತತ್ವಕ್ಕೆ ಪ್ರಾಮುಖ್ಯತೆ ಕೊಟ್ಟಿರುವ ಸಂಕಲನಕಾರರಿಗೆ ತತ್ವಪದಗಳಾಗಿವೆ. ಹಾಗಾಗಿ ಇವುಗಳ ರಚನೆಕಾರರನ್ನು ತತ್ವಪದಕಾರರು ಎನ್ನಲಾಗುತ್ತಿದೆ. ಆಧ್ಯಾತ್ಮಿಕ ವಾದಿಗಳಿಗೆ 'ಅನುಭಾವ ಪದ'ಗಳಾಗಿವೆ. ಜಾನಪದರಿಗೆ, ಹಳ್ಳಿಗರಿಗೆ ಭಜನೆ ಪದಗಳಾಗಿವೆ. ಹೀಗೆ ವಿವಿಧ ದೃಷ್ಟಿಕೋನಗಳಿಂದ ಹೆಸರುಗಳಿಂದ ಈ ಸಾಹಿತ್ಯವನ್ನು ಸಂಕಲನ

ಮಾಡಲಾಗಿದೆ. ತತ್ವಪದಗಳನ್ನು ಹೆಚ್ಚಾಗಿ ಸ್ವರವಚನಗಳ ಹೆಸರಿನಲ್ಲಿಯೇ ಪ್ರಕಟಿಸಲಾಗಿದೆ. ಇವುಗಳನ್ನು ಹೀಗೆ ಪ್ರಕಟಿಸಲು ಕಾರಣ ಧಾರ್ಮಿಕ, ಭಕ್ತಿ, ಅಧ್ಯಾತ್ಮವೇ ಮುಖ್ಯವಾಗಿದೆ. ತತ್ವಪದ ಸಾಹಿತ್ಯ ಆಧ್ಯಾತ್ಮಿಕಕ್ಕೆ ಸಂಬಂಧಿಸಿರುವುದರಿಂದ ಇದು ಸಾಮಾನ್ಯವಾಗಿ ಧರ್ಮದ ಚೌಕಟ್ಟಿನಲ್ಲಿ ಹಾಗೂ ಅದರ ನೆರಳಿನಲ್ಲಿ ಬೆಳೆದು ಬಂದಿರುವುದನ್ನು ಕಾಣಬಹುದು. ಇದರಿಂದ ಬಿಡಿಸಿಕೊಂಡು ಅಧ್ಯಯನಗಳು, ಸಂಗ್ರಹಗಳು ಬರಬೇಕಾಗಿದೆ.

**ತತ್ವಪದ ಸಾಹಿತ್ಯ ಸಂಪಾದನೆಯ ತೊಡಕುಗಳು**

ಸಾಹಿತ್ಯ ಸಂಪಾದನೆ ಮತ್ತು ಅಧ್ಯಯನಕ್ಕೆ ಶತಮಾನಕ್ಕೂ ಹೆಚ್ಚು ಚರಿತ್ರೆಯಿದೆ. ಅನೇಕ ಸಂಗ್ರಹ ಮತ್ತು ಸಂಪಾದನೆಗಳಿಗೆ ನಿರ್ದಿಷ್ಟ ತಾತ್ವಿಕ ವಿಧಾನಗಳು ಬಳಕೆಯಲ್ಲಿವೆ. ಆದರೆ ಅವು ನಮ್ಮದೇ ಸಾಹಿತ್ಯ ಮತ್ತು ಸಂಸ್ಕೃತಿ ಸಿದ್ಧಾಂತಗಳಿಗೆ ಹೊಂದಿಕೆಯಾಗುತ್ತಿಲ್ಲ. ಯಾಕೆಂದರೆ ಅವು ಪಾಶ್ಚಾತ್ಯ ವಿದ್ವಾಂಸರು ಸೃಷ್ಟಿಸಿದ ಅಧ್ಯಯನ ಮಾದರಿಗಳು. ಶಿಷ್ಟ ಮತ್ತು ಶಾಸ್ತ್ರೀಯ ನೆಲೆಯಲ್ಲಿವೆ. ಮೌಖಿಕವಾಗಿರುವ ರಚನೆಗಳ ಸಂಪಾದನೆಗೆ ಇವುಗಳನ್ನು ಅನ್ವಯಿಸಿಕೊಂಡ ಕಾರಣ ಸಂಪಾದನೆಯಲ್ಲಿ ಅನೇಕ ಬಿಕ್ಕಟ್ಟುಗಳು ಸೃಷ್ಟಿಯಾಗಿವೆ. ತತ್ವಪದ ರಚನೆಗಳೂ ಇಂಥ ಸಂಪಾದನೆಯ ಬಿಕ್ಕಟ್ಟಿಗೆ ಒಳಗಾಗಿವೆ.

ತತ್ವಪದ ಭಾಗಗಳನ್ನು ಒಳಗೊಂಡಿರುವ ರಚನೆಗಳು ಕೆಲವು ಕರ್ತೃತ್ವದ ಸಮಸ್ಯೆಗಳನ್ನು/ ತೊಡಕುಗಳನ್ನು ಎದುರಿಸುತ್ತವೆ. ಮಧ್ಯಕಾಲೀನ ಸಾಹಿತ್ಯದ ತತ್ವಪದಗಳಂತಹ ರಚನೆಗಳ ಕರ್ತೃತ್ವದ ಕಲ್ಪನೆ ನಮಗಿಂದು ತೊಡಕಿನದಾಗಿದೆ. ಬರವಣಿಗೆಯೇ ಅಧಿಕೃತ, ಒಂದು ಪಠ್ಯಕ್ಕೆ ಒಬ್ಬ ಮಾತ್ರ ಕರ್ತೃವಿರಬೇಕು ಎಂಬ ಬಲವಾದ ನಂಬಿಕೆ ನಮಗೆ ಬೆಳೆದಿದ್ದು ಪಾಶ್ಚಾತ್ಯ ಶಿಕ್ಷಣದ ಕ್ರಮದಿಂದ. ಯಾವ ತತ್ವಪದ ಯಾರದ್ದು, ಯಾರು ಬರೆದದ್ದು, ಹಾಡಿದ್ದು ಎಂಬುದರ ಬಗೆಗೆ ಅನೇಕ ಚರ್ಚೆಗಳು ನಡೆದಿವೆ. ಜನಪದ ಸಾಹಿತ್ಯದ ಕಾಪಿರೈಟ್ ಯಾರಿಗೆ ಕೊಡಬೇಕೆಂಬ ಸಮಸ್ಯೆ ಜನಪದ ಮೌಖಿಕ ಮಹಾಕಾವ್ಯಗಳ ಸಂಪಾದನೆಯಲ್ಲಿಯೂ ಕಾಣಿಸಿಕೊಂಡಿದೆ. ವೆಂಕಟೇಶ ಇಂದ್ವಾಡಿ ಅವರು ಸಂಪಾದನೆಯ ತೊಡಕುಗಳ ಕುರಿತು 'ಜನಪದ ಸಾಹಿತ್ಯ ಸಂಪಾದನೆಯ ಸಂಶೋಧನಾತ್ಮಕ ತೊಡಕುಗಳು' ಎಂಬ ಲೇಖನದಲ್ಲಿ ಪ್ರಸ್ತಾಪಿಸುತ್ತಾರೆ. ಅವು ಕನಕದಾಸರ ಮತ್ತು ಪುರಂದರದಾಸರ ಕುರಿತ ರಚನೆಗಳ ಕರ್ತೃತ್ವದಲ್ಲಿಯೂ ಕಾಣಿಸಿಕೊಂಡಿದೆ. ತತ್ವಪದಕಾರರಾದ ಶರೀಫ್ ಮತ್ತು ಕಡಕೋಳ ಮಡಿವಾಳಪ್ಪನವರಂತಹ ಹಾಡುಗಳ ಕರ್ತೃತ್ವ ಇತ್ಯಾದಿ ಉದಾಹರಣೆಗಳನ್ನು ಈ ಕೆಳಗೆ ನೋಡಬಹುದು.

"ನನ್ನೊಳಗ ನಾ ತಿಳಕೊಂಡೆ" ಈ ಹಾಡು ಶಿವಾನಂದಗುಬ್ಬಣ್ಣವರ ಸಂಪಾದಿಸಿದ ಶರೀಫರ "ಬರಕೋ ಪದ ಬರಕೋ"(೧೯೮೧, ಪು.೪೧) ಕೃತಿ ಸಂಗ್ರಹದಲ್ಲಿಯೂ ಹಾಗೆಯೇ ಆರ್.ಎಸ್.ಸುಂಕದ ಅವರು ಸಂಪಾದಿಸಿದ 'ಶಿಶುನಾಳರ ಅನುಭಾವ ಗೀತಮಂಜರಿ'(೧೯೯೩, ಪು.೧೦೭)ಯಲ್ಲಿಯೂ,

ವಿ.ಎಸ್.ಪಾಟೀಲ ಗುಂಡೂರ ಸಂಪಾದಿಸಿದ 'ಕನ್ನಡದ ಕಬೀರ ಶಿಶುನಾಳ ಶರೀಫ್ ಸಾಹೇಬರ ಪದಗಳು'(ಪು.೩೮), ಮಲ್ಲಿಕಾರ್ಜುನ ಸಿಂಧಗಿ ಅವರು ಸಂಪಾದಿಸಿದ "ಶ್ರೀಶಿಶುನಾಳಶರೀಫ್ ತತ್ವಪದಗಳು"(೧೯೯೨, ಪು.೩೬), ಎನ್.ಎಸ್.ಲಕ್ಷ್ಮೀನಾರಾಯಣಭಟ್ಟರು ಸಂಪಾದಿಸಿದ "ಶಿಶುನಾಳ ಶರೀಫ್ ಸಾಹೇಬರ ಗೀತೆಗಳು"(೨೦೦೦, ಪು.೪೨) ಕೃತಿಗಳಲ್ಲಿಯೂ ಇದೆ. ಆದರೆ ಬಸವರಾಜ ಸಬರದ ಅವರು ಸಂಪಾದಿಸಿದ "ಹೈದ್ರಾಬಾದ್ ಕರ್ನಾಟಕದ ತತ್ವಪದಗಳು"(೨೦೦೦, ಪು.೧೬) ಕೃತಿಯಲ್ಲಿ "ನನ್ನೊಳಗೆ ನಾ ತಿಳಕೊಂಡೆ" ಈ ಪದ ಕಡಕೋಳ ಮಡಿವಾಳಪ್ಪನ ಹಾಡಾಗಿಯೂ ಸಂಕಲಿತಲಾಗಿದೆ.

"ಕೋಡಗನ ಕೋಳಿ ನುಂಗಿತ್ತ ನೋಡವ್ವ ತಂಗಿ" ಎನ್ನುವ ತತ್ವಪದ ಈಗಾಗಲೇ ಶಿಶುನಾಳ ಶರೀಫ್‌ನಿಂದ ರಚಿತವಾದುದೆಂದು ಜನಪ್ರಿಯವಾಗಿದೆ. ಆದರೆ ಈ ಹಾಡು "ಕೋಳಿ ನುಂಗಿತ್ತಾ ಕೇಳಕ್ಕಯ್ಯ" ಎಂದು ಕಡಕೋಳ ಮಡಿವಾಳಪ್ಪನ ತತ್ವಪದಗಳ ಕೃತಿಯಲ್ಲಿ ಪ್ರಕಟವಾಗಿದೆ. "ಅಂಬಿಗಾ ನಾ ನಿನ್ನ ನಂಬಿದೆ" ಅನ್ನುವ ಪದ/ಹಾಡು ಕನಿಷ್ಟಪಕ್ಷ ಆರು ಜನ ತತ್ವಪದಕಾರರ ರಚನೆಯಾಗಿ ದೊರೆಯುತ್ತದೆ. "ಹೌದಪ್ಪ ಹೌದು ನೀನೇ ದೇವರು" ಅನ್ನುವ ಹಾಡು ಶರೀಫರ ಮತ್ತು ಮಡಿವಾಳಪ್ಪ ಇಬ್ಬರ ಸಂಕಲನದಲ್ಲೂ ದೊರೆಯುತ್ತದೆ. ಹಾಗೆಯೇ "ಡಿಂಭದೊಳಗೆ ಒಂದು ಪ್ರಾಣ" ಈ ಹಾಡು 'ಮುಪ್ಪಿನ ಷಡಕ್ಷರಿಗಳ ಕೈವಲ್ಯಪದ'(೧೯೮೭, ಪು.೮೫) ಕೃತಿಯಲ್ಲಿದೆ. ಆದರೆ ದಾಸರ ಕೀರ್ತನೆಗಳ ಸಿ.ಡಿ ಯಲ್ಲಿ ಕನಕದಾಸರ 'ಕಾಗಿನೆಲೆ ಆದಿಕೇಶವ' ಅಂಕಿತದಲ್ಲಿ ಹಾಡಲಾಗಿದೆ.

"ಜಾರತನವ ನಾ ಮಾಡಿದೆ ನಮ್ಮ ಜಂಗಮನೊಡಗೂಡಿ" ಮತ್ತು "ಹಾಟ್ಯಾ ಹಾಟ್ಯಾನುಬೇಡ" ಎನ್ನುವ ಹಾಡುಗಳು ಬಿದನೂರ ಗಂಗಮ್ಮನ ಹಾಡುಗಳೆಂದು ವಾಡಿಕೆಯಿದೆ. ಆದರೆ ಹಂದಿಗನೂರ ವೈದ್ಯರಾಜ ಶ್ರೀ ಬಿರಾದಾರ ಅವರು ಸಂಗ್ರಹಿಸಿದ 'ಭಜನ ಸುಧಾ ಭಾಗ-೧, ಪದ ೨೩'ರ "ಹಾಟ್ಯಾನುಬ್ಯಾಡ" ಎಂಬ ಪದದ ಕೊನೆಯಲ್ಲಿ "ಧರೆಯೊಳು ಬಿದನೂರ ಗುರುಮಹಾಂತೇಶ ಆದರೊಳಗೆ ಹುಟ್ಯಾನ ತಂಗಿ" ಎಂದು ಮಡಿವಾಳಪ್ಪನವರ ಅಂಕಿತ ಇದೆ. ಹಾಗೆಯೇ ಮಲ್ಲಿಕಾರ್ಜುನ ಲಠ್ಠೆ ಅವರು ಸಂಪಾದಿಸಿದ 'ಕಡಕೋಳ ಮಡಿವಾಳೇಶ್ವರ ವಿರಚಿತ ಸ್ವರವಚನಗಳು' ಕೃತಿಯಲ್ಲಿಯೂ ಇದು ಸೇರಿದೆ.

"ಮಾಡಬಾರದು ಪಾರನ ಸಂಗ" ಎಂಬ ಹಾಡು ರಾಮಪುರದ ಬಕ್ಕಪ್ಪನ ತತ್ವಪದಗಳಲ್ಲಿ ಹಾಗೂ ಕೂಡಲೂರು ಬಸವಲಿಂಗ ಶರಣನ ಕೃತಿಯಲ್ಲಿ ಸೇರಿದೆ. "ಗಂಡಗಂಜಿ ಬದುಕ ಮಾಡಮ್ಮ" ಈ ಪದವನ್ನು ಕೂಡಲೂರು ಬಸವಲಿಂಗ ಶರಣ ರಚಿಸಿದ್ದಾನೆ ಎನ್ನುತ್ತಾರೆ. ಆದರೆ ಈ ಪದವನ್ನು ಗಬ್ಬೂರ ಮಾರ್ತಂಡಪ್ಪನದೆಂದು ಭಜನೆ ಮೇಳದವರು ಮಾರ್ತಂಡಪ್ಪನ ಅಂಕಿತದಲ್ಲಿ ಹಾಡುವುದನ್ನು ವಿದ್ವಾಂಸರು ಗುರುತಿಸಿದ್ದಾರೆ. ಈ ಮೇಲಿನ ಇದೇ ತತ್ವಪದವು ನಿಂಬೋಳಿ ತಿಪ್ಪಣ್ಣನ ತತ್ವಪದಗಳು ಎಂಬ ಕೃತಿಯಲ್ಲಿ ಸೇರಿಕೊಂಡಿದೆ. ಹೆಚ್ಚು ಜನಪ್ರಿಯವಾಗಿರುವ ಇಂತಹ ತತ್ವಪದಗಳನ್ನು ಜನರು ತಮಗಿಷ್ಟ ಬಂದವರ

ಅಂಕಿತದ ಮೂಲಕ ಹಾಡಿಬಿಡುತ್ತಾರೆ. ಈ ತತ್ವಪದ ಯಾರದು ಎಂಬುದು ಅವರಿಗೆ ಮುಖ್ಯವಾಗುವುದಿಲ್ಲ. ಕೆಲವು ಸಾರಿ ಸ್ಥಳೀಯ ದೈವದ ಹೆಸರನ್ನು ಸೇರಿಸಿಯೂ ಹಾಡುತ್ತಾರೆ. ಉದ್ದೇಶ ಪೂರ್ವಕವಾಗಿ ಹೀಗೆ ಮಾಡುವುದಿಲ್ಲ. ಆದರೂ ಒಂದೇ ತತ್ವಪದ ಎರಡು, ಮೂರು, ನಾಲ್ಕು ಜನರ ಹೆಸರಿನಲ್ಲಿ ಸೇರಿದೆ. ಹಾಡುಗಳ ಮೂಲ ರೂಪವೂ ಪ್ರದೇಶಕ್ಕೆ ತಕ್ಕಂತೆ, ಸಂದರ್ಭಕ್ಕೆ ತಕ್ಕಂತೆ ಬದಲಾಗುತ್ತಿರುತ್ತದೆ. ಅಲ್ಪ-ಸ್ವಲ್ಪ ಪದ-ಪಾಠಾಂತರಗಳು ಆಗಿವೆ. ಹೀಗಾಗಿ ವಾದ-ವಿವಾದಗಳು ಶುರುವಾಗಿವೆ.

ತತ್ವಪದಗಳನ್ನು ಇಂಥವರವೇ ಎಂದು ಅಧಿಕೃತಗೊಳಿಸುವಲ್ಲಿ ಬಿ.ಮಹಾದೇವಪ್ಪ, ವೀರಭದ್ರಸಿಂಪಿ ಇವರು ಸ್ಪಷ್ಟಪಡಿಸಿದ ಆಧಾರದ ಮೇಲೆ ಬಸವರಾಜ ಸಬರದ ಅವರು ಕೂಡ ಮಡಿವಾಳಪ್ಪ ಮತ್ತು ಶರೀಫರ ಹಾಡುಗಳ ಕರ್ತೃತ್ವವನ್ನು ಸ್ಪಷ್ಟಪಡಿಸಲು ಪ್ರಯತ್ನಿಸಿದ್ದಾರೆ. ಅವರು ಮಡಿವಾಳಪ್ಪ ಶರೀಫನಿಗಿಂತ ೫೪ ವರ್ಷ ಮೊದಲು ಜನಿಸಿದವ, ಹಿರಿಯ ತತ್ವಪದಕಾರ ಎಂದು "ಕೋಡಗನ ಕೋಳಿ ನುಂಗಿತ್ತ ನೋಡವ್ವ ತಂಗಿ" ಈ ಹಾಡು ಮಡಿವಾಳಪ್ಪನ ಅನೇಕ ಸಂಗ್ರಹಗಳಲ್ಲಿ ಸೇರಿದ ಕಾರಣ ಹಾಗೂ ಲಠ್ಠೆಯವರು ಸಂಪಾದಿಸಿದ 'ಕಡಕೋಳ ಮಡಿವಾಳೇಶ್ವರ ವಿರಚಿತ ಸ್ವರವಚನಗಳು' ಕೃತಿಯಲ್ಲಿಯೂ ಮುದ್ರಿತವಾಗಿರುವುದರಿಂದ ಆಯ್ಕೆ ಮಾಡಲಾಗಿದೆ ಎನ್ನುತ್ತಾರೆ.

ಹಾಗೆ ನೋಡಿದರೆ ಕಡಕೋಳ ಮಡಿವಾಳಪ್ಪನಿಗಿಂತ ಹೆಚ್ಚು ಶರೀಫರ ಕೃತಿಗಳಲ್ಲಿಯೇ ಈ ಹಾಡು ಸಂಗ್ರಹಗೊಂಡಿದೆ. ಅಷ್ಟಕ್ಕೂ ಅಲ್ಲಿರುವುದು (ಕಡಕೋಳ ಮಡಿವಾಳಪ್ಪನದು) ಈ ಮೇಲಿನ ಹಾಡಿನ ಹೋಲಿಕೆ ಎಂಬಂತೆ ಇರುವ ಹಾಡು. ಅದು 'ಕ್ವಾಡಗನ ಕೋಳಿ ನುಂಗಿತ್ತ ಕೇಳಕ್ಕಯ್ಯ' ಎನ್ನುವುದು. ಶರೀಫರ ಹಾಡೆಂದು ಅನೇಕ ಸಂಕಲನದಲ್ಲಿ ಪ್ರಕಟವಾದ "ಎಲ್ಲರಂಥವನಲ್ಲ ನನಗಂಡ' ಈ ಹೋಲಿಕೆಯ ಹಾಡು ನಾಗಲಿಂಗ ಸ್ವಾಮಿಗಳ ತತ್ವಪದ ಸಂಕಲನದಲ್ಲೂ(ಪು.೧೨) ಪ್ರಕಟಗೊಂಡಿದೆ. ನಮಗೆ ಈ ರೀತಿಯಾಗಿ ತತ್ವಪದಗಳಲ್ಲಿ ಒಂದೇ ಥರದ ಸಾಮ್ಯವುಳ್ಳ ಅನೇಕ ರಚನೆಗಳು ದೊರೆಯುತ್ತವೆ. ಪಲ್ಲವಿಯಲ್ಲಿ ಒಂದೇ ಮಾದರಿಯಾಗಿ ತೋರುವ ಇವು ಮುಂದೆ ಚರಣಗಳಲ್ಲಿ ಬೇರೆಯಾಗಿರುವುದು. ಪಾಠಾಂತರಗೊಂಡಿರುವುದು ಕಾಣಬಹುದು. ಇಂಥ ಸಾಮ್ಯವುಳ್ಳ ರಚನೆಗಳನ್ನು ಮಾದರಿಯಾಗಿ ಓ.ಎಲ್.ನಾಗಭೂಷಣಸ್ವಾಮಿ ಮತ್ತು ಇತರರು ಸಂಪಾದಿಸಿದ 'ತತ್ವಪದಗಳು' ಪ್ರಾತಿನಿಧಿಕ ಸಂಕಲನ ಕೃತಿಯ ಅನುಬಂಧ-೨ರಲ್ಲಿ (ಪು.೪೬೯) ಅಂಥ ೧೦ ಹಾಡುಗಳನ್ನು ನೋಡಬಹುದು. ಇವು ಅಧ್ಯಯನಕ್ಕೆ ಕುತೂಹಲವೂ ಆಗಿವೆ. ಹೀಗಾಗಿ ಕರ್ತೃಗಳ ಕಾಲದ ಅಂತರದಿಂದ ಈ ಹಾಡು ಇಂಥವರದೇ ಎಂದು ಗುರುತಿಸುವ ಒತ್ತಾಯಪೂರ್ವಕ ಬೌದ್ಧಿಕ ಶಿಸ್ತು 'ನಮ್ಮ ಇಂದಿನ ಸಾಮಾಜಿಕ, ರಾಜಕೀಯ, ಆಸಕ್ತಿಗಳಿಂದ ಪ್ರೇರಿತವಾದದ್ದು ಅನ್ನುವುದೇ ನಿಜ. ಹಾಡಿನ ಕರ್ತೃತ್ವವನ್ನು ನಿಗದಿ ಮಾಡುವ ಹಠ ವಿದ್ವಾಂಸರದ್ದೇ ಹೊರತು, ತತ್ವಪದಗಳ ಆಚರಣೆಯಲ್ಲಿ ಭಾಗವಹಿಸುವ ಜನರದ್ದಲ್ಲ. ತತ್ವಪದಗಳನ್ನು ತಮ್ಮ ಬದುಕಿನ ಭಾಗವಾಗಿ ಒಪ್ಪಿರುವವರು ಕರ್ತೃತ್ವದ ಪ್ರಶ್ನೆಗಿಂತ ಆ ಪದ ಹೇಳುವ ಸಂಗತಿಗೆ ಬೆಲೆ

ಕೊಡುವವರಾಗಿರುತ್ತಾರೆ. ಒಂದು ತತ್ವಪದ ಹಲವು ಅನುಭಾವಿಗಳದ್ದು ಎಂದು ಪ್ರಚಲಿತವಾಗಿದೆ ಎಂದು ಒಪ್ಪಿಕೊಳ್ಳುವುದು ಮಾತ್ರ ಸರಿಯಾದ ನಿಲುವು. ಹೀಗೆ ಪುನರುಕ್ತವಾಗುವ ರಚನೆ ಬಹುಶಃ ಅದು ವ್ಯಕ್ತಪಡಿಸುವ ಸಂಗತಿಯ ಪ್ರಾಮುಖ್ಯವನ್ನು ಸೂಚಿಸುವಂತಹದಾಗಿರಬಹುದು. ಹಳೆಯ ಪ್ರಮುಖ ಪಠ್ಯವನ್ನು ನೆನಪಿನಲ್ಲಿಟ್ಟುಕೊಳ್ಳುವ ಉಪಾಯವಾಗಿರಬಹುದು. ಪಠ್ಯವೊಂದು ಕಾಲ-ದೇಶಗಳಲ್ಲಿ ವಿಸ್ತಾರಗೊಳ್ಳುವ ನಿದರ್ಶನವಾಗಿರಬಹುದು. ಮೂಲಪಠ್ಯವನ್ನು ಮೂಲಕರ್ತೃವನ್ನು ಹುಡುಕುವ ಹಠ ವ್ಯರ್ಥ ಪ್ರಸಂಗವಷ್ಟೇ''[೬] ಎಂದು ಓ.ಎಲ್.ನಾಗಭೂಷಣಸ್ವಾಮಿ ಅವರು ಸರಿಯಾಗಿ ಅಭಿಪ್ರಾಯಪಟ್ಟಿದ್ದಾರೆ.

ಮೌಖಿಕವಾದ ತತ್ವಪದಗಳಿಗೆ ಜನಪದ ಮತ್ತು ಭಜನೆಯ ದಾಟಿಯಲ್ಲಿ ಹಾಡುವ ಹಾಡುಗಳನ್ನು ಸಂಪಾದನೆ ಮಾಡುವ ಸಂಪಾದಕರು ಅವುಗಳಿಗೆ ವಿವಿಧ ರೀತಿಯ ರಾಗ-ತಾಳಗಳನ್ನು ಸೂಚಿಸಿದ್ದಾರೆ. ಆದರೆ ಅವು ಜನಪದರ ಸಂಗೀತಕ್ಕೆ, ಅವರ ಸಹಜ ಲಯಕ್ಕೆ ಹತ್ತಿರವಾಗಿಲ್ಲ. ಹಿಂದೂಸ್ಥಾನಿ ಶಾಸ್ತ್ರೀಯ ಸಂಗೀತದ ರಾಗ ತಾಳಗಳನ್ನೂ ಸೂಚಿಸಿದ್ದಾರೆ. ಒಂದೇ ಹಾಡಿಗೆ ಅನೇಕ ರೀತಿಯ ರಾಗಗಳನ್ನು ಸೇರಿಸಿ ಹಾಡುತ್ತಿದ್ದಾರೆ. ಸುಗಮಸಂಗೀತದಲ್ಲಿಯೂ ತತ್ವಪದಗಳನ್ನು ಹಾಡಲಾಗುತ್ತಿದೆ. ತತ್ವಪದಗಳನ್ನು ಅಶ್ವತ್ ಅವರು ಸಿನಿಮಾಸಂಗೀತದ ಮೂಲಕವೂ ಜನಪ್ರಿಯಗೊಳಿಸಿದ್ದಾರೆ. ಅವರು ಶರೀಫರ ಅನೇಕ ಹಾಡುಗಳನ್ನು ಹಾಡಿದ್ದಾರೆ. ಶರೀಫರ ''ಯಾಕೆ ಬಡಿದಾಡ್ತಿ ತಮ್ಮ ಮಾಯೆ ನೆಚ್ಚಿ'' ಎನ್ನುವ ಹಾಡು ವೆಸ್ಟರ್ನ್ ಮ್ಯೂಜಿಕ್ ಮೂಲಕವೂ ಹಾಡಲಾಯಿತು. ಹೀಗೆ ಹಾಡುವುದು ಆರಂಭವಾದ ಮೇಲೆ ಅವುಗಳ ಸಹಜ ಧಾಟಿಗೆ ಚಲುವಿಗೆ ಧಕ್ಕೆ ಬಂದಿತು. ಮೌಖಿಕವಾಗಿರುವ ತತ್ವಪದಗಳನ್ನು ಸಂಗ್ರಹಿಸುತ್ತಿರುವ ಸಂಪಾದಕರೂ ಇವುಗಳ ಸಹಜಸ್ಥಿತಿಯನ್ನು ಲಕ್ಷಿಸದೇ ತಿದ್ದುತ್ತಾ, ಪರಿಷ್ಕರಿಸುತ್ತಾ ಸಂಪಾದಿಸಲಾಯಿತು. ಹೀಗೆ ತತ್ವಪದಗಳನ್ನು ಪರಿಷ್ಕರಿಸುವಂತ ಅವುಗಳಿಗೆ ಬೇಕಾಗದ ಸಂಪಾದನೆಯ ಬೌದ್ಧಿಕ ಶಿಸ್ತನ್ನು ಹೇರಿರುವುದು ಕಂಡುಬರುತ್ತದೆ. ಹೀಗಾಗಿ ಅವುಗಳ ಸಹಜ ಲಯ, ನುಡಿಗಟ್ಟುಗಳಲ್ಲಿಯೇ ಉಳಿಸಬೇಕಾಗಿದೆ, ಸಂಗ್ರಹಿಸಬೇಕಾಗಿದೆ ಎಂಬ ತುರ್ತೊಂದು ಇದೆ. ಆದರೂ ಆಧುನಿಕ ಯುಗದಲ್ಲಿ ಈ ಬಿಕ್ಕಟ್ಟುಗಳನ್ನು ಪರಿಹರಿಸಿಕೊಳ್ಳುವ ಯತ್ನಗಳೂ ನಡೆಯಬೇಕಾಗಿದೆ. ಅನೇಕ ರೂಪಾಂತರಗಳಲ್ಲಿ ಈ ರಚನೆಗಳು ತನ್ನ ಚಲನೆಯನ್ನು ಕಾಯ್ದುಕೊಳ್ಳುವ ಬಗೆಯನ್ನು ಗುರುತಿಸಬೇಕಾಗಿದೆ, ವಿಶ್ಲೇಷಿಸಿಕೊಳ್ಳಬೇಕಾಗಿದೆ.

### ೪.೨. ಸಂಪಾದನೆಯ ಪ್ರಸ್ತಾವನೆಗಳು

ತತ್ವಪದ ಸಾಹಿತ್ಯ ಸಂಪಾದನೆಗಳಲ್ಲಿ 'ಪ್ರಾದೇಶಿಕ ಸಂಪಾದನೆ, ಪ್ರಾತಿನಿಧಿಕ ಸಂಪಾದನೆ, ವ್ಯಕ್ತಿ (ತತ್ವಪದಕಾರರ ಹೆಸರಿನಲ್ಲಿ) ಸಂಪಾದನೆ, ಹಲವು ಕವಿಗಳ ಆಯ್ದ ತತ್ವಪದಗಳ ಸಂಪಾದನೆ, ಬಿಡಿ ರಚನೆಗಳ ಸಂಪುಟಗಳು ಈ ಮುಂತಾದವುಗಳು ಬಂದಿವೆ. ಈ ಸಂಪಾದನೆಗಳು ಕ್ಷೇತ್ರಕಾರ್ಯದ ಮೂಲಕ ಹಾಡುವ ಗಾಯಕರಿಂದ ಸಂಪಾದಿಸಿದಂತವುಗಳು ಅಥವಾ ಮೌಖಿಕ ಹಾಡುಗಳ ಸಂಗ್ರಹಗಳು,

ಹಸ್ತಪ್ರತಿಗಳ ನೆರವಿನಿಂದ ಸಂಪಾದಿಸಿದಂತವು ಮತ್ತು ಈಗಾಗಲೇ ಇರುವ ಗ್ರಂಥಗಳಿಂದ ಆಯ್ದು ಸಂಪಾದಿಸಿದವು ಆಗಿವೆ.

ತತ್ವಪದ ಸಾಹಿತ್ಯ ಅಧ್ಯಯನಕ್ಕೆ ಸಂಬಂಧಿಸಿದಂತೆ ಹೇಳುವುದಾದರೆ, ಸಂಪಾದನೆಗಳ ಮೂಲಕ ಆಕರಗಳನ್ನು ಕಂಡುಕೊಳ್ಳುವ ವ್ಯವಸ್ಥಿತ ಕಾರ್ಯಗಳು ನಡೆದಿವೆ. ಇವು ಹಲವು ಬಗೆಯಾಗಿದ್ದು ವೈಯಕ್ತಿಕವಾಗಿಯೂ ಸಾಂಸ್ಥಿಕವಾಗಿಯೂ ನಡೆದಿವೆ. ತತ್ವಪದಗಳು ಈ ಹಿಂದೆ ಪರಿಶೀಲಿಸಿದಂತೆ ಮುಖ್ಯವಾಗಿ ಹಸ್ತಪ್ರತಿಗಳನ್ನೊಳಗೊಂಡಿರುವಂತವು ಹಾಗೂ ಮೌಖಿಕವಾಗಿರುವಂತವು ಆಗಿವೆ.

ಹಸ್ತಪ್ರತಿಗಳ ನೆಲೆಯಲ್ಲಿನ ಸಂಪಾದನೆಯಲ್ಲಿ ಮುಖ್ಯವಾಗಿ ಕವಿಯ ಪಠ್ಯದ ಮೂಲವನ್ನು ನಿರ್ಧರಿಸಲು ಮುಂದಾಗಿವೆ. ಪಾಠ ಪರಿಶುದ್ಧತೆಯನ್ನು ಕಾಯ್ದುಕೊಳ್ಳುವುದು ಸಂಪಾದನೆಯ ಸಂಪಾದಕರ ಮುಖ್ಯ ಆಶಯವಾಗಿದೆ. ಸಾಹಿತ್ಯವು ಬರವಣಿಗೆಯ ರೂಪ ಪಡೆಯದ ಲಿಪಿ ಅಭಾವದ ಕಾಲದಿಂದಲೂ ಪಾಠದ ಪರಿಶುದ್ಧತೆಯನ್ನು ಕಾಯ್ದುಕೊಳ್ಳುವ ಹಲವು ವಿಧಾನಗಳನ್ನು ಪ್ರಾಚೀನರು ಅನುಸರಿಸುತ್ತಿದ್ದರೆಂದು ತಿಳಿಯುತ್ತದೆ. ಮೌಖಿಕವಾಗಿಯೂ ಇದ್ದು, ಮೂಲಪಾಠ ಸ್ವಲ್ಪವೂ ವ್ಯತ್ಯಾಸವಾಗದಂತೆ ವೇದಪಾಠಗಳು ಉಳಿದುಬಂದಿರುವವು ಎಂದೂ ಹೇಳಲಾಗುತ್ತದೆ. ಇದರಿಂದ ಬರವಣಿಗೆಯು ಇಲ್ಲದ ಕಾಲದಲ್ಲೂ ಮೂಲಪಾಠ ವ್ಯತ್ಯಾಸ ಉಂಟಾಗಿಲ್ಲ ಎಂಬುದು ಗೋಚರಿಸುತ್ತದೆ. ಆದರೆ ಗ್ರಂಥಸ್ಥವಾಗುವ ಸಂದರ್ಭದಲ್ಲಿ ಮೂಲಪಾಠಗಳು ವ್ಯತ್ಯಾಸವಾಗುವ ಸಂಭವ ಇದ್ದೇ ಇದೆ. ಸಾಹಿತ್ಯ ಪ್ರತಿಯಿಂದ ಪ್ರತಿಗೆ ಮಾರ್ಪಾಡಾಗುವ ಸಂದರ್ಭದಲ್ಲಿ ವ್ಯತ್ಯಾಸಗಳುಂಟಾಗಿ ಪಾಠಗಳು ತ್ರುಟಿತ ಅಥವಾ ಬಿಟ್ಟು ಹೋಗಿರುವುದೆಂಬ ಸಂಗತಿ ತಿಳಿದಿರುವಂತದೇ ಆಗಿದೆ. ಏನೇ ಇರಲಿ ಹಸ್ತಪ್ರತಿಗಳನ್ನು ಕಲೆಹಾಕಿ ಪರಿಷ್ಕರಿಸಿ ಗ್ರಂಥಗಳನ್ನು ಹೊರತರಲಾರಂಭಿಸಿದ ಸಂಪಾದನೆಯ ಈ ಪ್ರಕ್ರಿಯೆ ಹೆಚ್ಚು ಹೆಚ್ಚು ವೈಜ್ಞಾನಿಕವೂ, ಶಾಸ್ತ್ರೀಯವೂ ಆಯಿತು. ಈ ಗ್ರಂಥಸಂಪಾದನೆ ಮುಖ್ಯವಾಗಿ ಕೃತಿಯೊಂದರ ವಿವರವಾದ ಅಧ್ಯಯನವೇ ಆಗಿರುತ್ತದೆ. ಲಭ್ಯವಾದ ವಿವಿಧ ಹಸ್ತಪ್ರತಿಗಳನ್ನು ಗಮನಿಸಿ ಕವಿಯ ಮೂಲ ಪಾಠವನ್ನು ನಿಷ್ಕರ್ಷಿಸುವುದು ಮತ್ತು ಗ್ರಂಥವನ್ನು ಬಹುಸೂಕ್ಷ್ಮವಾಗಿ ವಿವಿಧ ಆಯಾಮಗಳಿಂದ ಅವಲೋಕಿಸುವುದು ನಡೆಯುತ್ತದೆ.

ಆದರೆ ಪಾಠಶುದ್ಧತೆಯ ಜೊತೆಗೆ ಓದಲು ತಕ್ಕ ರೂಪದಲ್ಲಿ ಪಾಠವನ್ನು ಸಜ್ಜುಗೊಳಿಸುವತ್ತ ಮುಖ್ಯ ಗಮನವಿತ್ತೆಂದು ತಿಳಿದುಬರುತ್ತದೆ. ಹಾಡುಗಳನ್ನು ಅವುಗಳ ಪಾದ ಸಂಖ್ಯೆಗನುಗುಣವಾಗಿ ಒಡೆದು ಕಾಣಿಸುವ ಬಗೆ ಕಾಣುತ್ತೇವೆ. ಹಾಡುಗಳಿಗೆ ಅವುಗಳ ಮೊದಲಿನ ಸಾಲು, ಎರಡನೇ ಸಾಲು, ನುಡಿಯ ನಾಲ್ಕನೆ ಸಾಲು ಮತ್ತು ಕೊನೆಯ ಸಾಲನ್ನು ಪದ್ಯದ ಶೀರ್ಷಿಕೆಗೆ ಬಳಸುವುದು. ಹಾಗೆಯೇ ಯಾವುದೇ ಶೀರ್ಷಿಕೆಯಿಲ್ಲದೇ ಹಾಡುಗಳನ್ನು ಸಂಗ್ರಹಿಸಿರುವುದು ಕಾಣುತ್ತೇವೆ. ರಾಗ-ತಾಳಗಳ ಸೂಚನೆಯೂ ಇದೆ, ಘಟನೆಗಳ ಆಧಾರದಲ್ಲಿ ಹಾಡುಗಳನ್ನು ಕ್ರಮವರಿತು ವಸ್ತುಗನುಗುಣವಾಗಿಯೂ ಸಂಗ್ರಹಿಸಲಾಗಿದೆ.

ಹೀಗೆ ಭಿನ್ನ ರೂಪದಲ್ಲಿ ಕೃತಿಯನ್ನು ರೂಪಿಸಿ ಮುದ್ರಿಸುವ ಪ್ರಯತ್ನದ ಹಿಂದೆ ನಿರ್ದಿಷ್ಟವಾದ ಆಸಕ್ತಿಗಳು, ಉದ್ದೇಶಗಳು ಕಂಡುಬರುತ್ತವೆ.

ಹೀಗೆ ಮುದ್ರಿತವಾದ ಹಾಡುಗಳಲ್ಲಿ ಕೊರತೆಗಳನ್ನು ಕಂಡ ವಿದ್ವಾಂಸರು ಮತ್ತೆ ಮತ್ತೆ ಕವಿಯ ಮೂಲಪಾಠದ ಮರುಶೋಧನೆಗೆ ಹೆಚ್ಚಿನ ಹಾಡುಗಳ ಸಂಗ್ರಹಣೆಗೆ ಪ್ರಯತ್ನ ನಡೆಸಿದರು. ಕೆಲವೊಮ್ಮೆ ಇಡೀ ಕೃತಿಯ ಹಾಡುಗಳ ಮರುಸಂಪಾದನೆಗಳೂ ನಡೆದಿವೆ. ಕೃತಿಗಳ ಈ 'ಮರುಸಂಪಾದನೆ' ಪ್ರಕ್ರಿಯೆಯು ಪುನರಾವರ್ತಿತ ಕ್ರಿಯೆ ಎಂದು ತಿಳಿಯುವ ಬದಲು ಇದು ಒಂದು ಅಧ್ಯಯನದ ಮಗ್ಗುಲೆಂದು ತಿಳಿಯಲಾಯಿತು. ಈ ಸಂಪಾದನೆಯಲ್ಲಿನ ಪ್ರಸ್ತಾವನೆಯ ಮಾತುಗಳು ಅಧ್ಯಯನಕ್ಕೆ ನಾಂದಿಯಾದವು.

ನಿಜಗುಣ ಶಿವಯೋಗಿಗಳ 'ಕೈವಲ್ಯ ಪದ್ಧತಿ'ಯ ಹಾಡುಗಳನ್ನು ೧೯೬೬ರಲ್ಲಿ ಪಂಡಿತ ನಾಗಭೂಷಣ ಶಾಸ್ತ್ರಿಗಳು ಸಂಪಾದಿಸಿ ಪ್ರಕಟಿಸಿದ್ದರು. ನಂತರದಲ್ಲಿ ಸಿ.ಬಸವಣ್ಣನವರು ಈ ಮುದ್ರಿತ ಪ್ರತಿ ಮತ್ತು ಇತರ ಐದು ಹಸ್ತಪ್ರತಿಗಳ ನೆರವಿನಿಂದ 'ಕೈವಲ್ಯ ಪದ್ಧತಿ' ಕೃತಿಯನ್ನು ೧೯೮೮ರಲ್ಲಿ ಮತ್ತೊಮ್ಮೆ ಪರಿಷ್ಕರಿಸಿ ಪ್ರಕಟಿಸಿರುವುದನ್ನು ಕಾಣಬಹುದು. ಇದೇ ರೀತಿಯಾಗಿ ಸರ್ಪಭೂಷಣರ 'ಕೈವಲ್ಯ ಕಲ್ಪವಲ್ಲರಿ', ಮುಪ್ಪಿನ ಷಡಕ್ಷರಿಗಳ 'ಕೈವಲ್ಯಪದಗಳು', ನೀರಲಕೆರೆ ಬಸವಲಿಂಗರ 'ಜ್ಞಾನಗೀತೆ', ವಡಕಿತಾತಪ್ಪಯ್ಯನ 'ಅಮೃತ ಶಿಖಾಮಣಿ', ರಸ್ತಾಪುರ ಭೀಮಕವಿಯ 'ಕೈವಲ್ಯಕಲ್ಪದ್ರುವ', ಸಿದ್ಧರಾಮ ಶಿವಯೋಗಿಯ 'ಸದ್ಬೋಧಾಮೃತ' ಮುಂತಾದವು ಬೇರೆ ಬೇರೆ ಕಾಲಾವಧಿಯಲ್ಲಿ ಮತ್ತೆ ಸಂಪಾದನೆಗೊಂಡು ಕೆಲವೊಮ್ಮೆ ಹೆಚ್ಚಿನ ಹಾಡುಗಳ ಸೇರಿಕೆಯೊಂದಿಗೆ ಪರಿಷ್ಕೃತ ಪಾಠವನ್ನು ಪಡೆದುಕೊಂಡದ್ದನ್ನು ಗಮನಿಸಬಹುದು. ಇಂಥ ಅಧ್ಯಯನದಲ್ಲಿ ಸಂಪಾದಕರು ಗ್ರಂಥಗಳನ್ನು ಪರಿಷ್ಕರಿಸಿ ಹೆಚ್ಚಿನ ಹಾಡುಗಳನ್ನು ಸೇರಿಸಿ ತಾವು ಪುನರ್ ಸಂಪಾದಿಸಿದ್ದೇಕೆ ಎಂಬುದಕ್ಕೆ ಪ್ರಸ್ತಾವನೆಯಲ್ಲಿ ಕಾರಣಗಳನ್ನು ನೀಡಿದ್ದಾರೆ. ಉದಾಹರಣೆಗೆ ಮುಪ್ಪಿನ ಷಡಕ್ಷರಿಗಳ 'ಕೈವಲ್ಯಪದ'ವನ್ನು ಸಂಪಾದಿಸಿದ ಶ್ರೀಶಿವರಾತ್ರೀಶ್ವರ ಸ್ವಾಮಿಗಳು 'ಮುಪ್ಪಿನ ಷಡಕ್ಷರಿಗಳ ಹಾಡುಗಳು ನಮ್ಮ ಲಿಂಗೈಕ್ಯ ಜಗದ್ಗುರುಗಳವರಿಗೆ ಅತ್ಯಂತ ಪ್ರಿಯವಾದವು... ಅದರ ಪ್ರತಿಗಳು ಅಲಭ್ಯವೆಂದು ತಿಳಿದಾಗ ಅದನ್ನು ಪ್ರಕಟಿಸಲು ಸಂಕಲ್ಪಿಸಿದರು. ಆ ಗ್ರಂಥವನ್ನು ಹರ್ಡೇಕರ ಮಂಜಪ್ಪನವರು ಬಹಳ ಪರಿಶ್ರಮದಿಂದ ಮೊದಲ ಬಾರಿಗೆ ಸಂಗ್ರಹಿಸಿದ್ದರು. ಇದನ್ನು ಕನ್ನಡ ಸಾಹಿತ್ಯ ಪರಿಷತ್ತು ಮತ್ತು ಮುರುಘಾ ಮಠ ಧಾರವಾಡ ಇವರು ಪುನರ್ ಮುದ್ರಣ ಮಾಡಿದ್ದರು. ಈಗ ಈ ಪ್ರತಿಗಳು ಮುಗಿದಿವೆ. ಆದರೆ ಈ ಗ್ರಂಥದ ಸಂಸ್ಕರಣಕ್ಕೆ ಮೂಲ ಆಕರ ಯಾವುದು ಎಂಬುದರ ಬಗೆಗೆ ಯಾವ ವಿವರಣೆಯನ್ನು ನೀಡಿಲ್ಲ. ಆದ್ದರಿಂದ ಈ ಗ್ರಂಥ ಸಂಪಾದನೆಗೆ ಎಂಟು ಹಸ್ತಪ್ರತಿಗಳನ್ನು ಬಳಸಿಕೊಳ್ಳಲಾಗಿದೆ. ಈ ಹಸ್ತಪ್ರತಿಗಳಲ್ಲಿ ಶಕಟರೇಫೆಯು ಬಳಕೆಯಾಗಿಲ್ಲ. ರಾಗ-ನಿರ್ದೇಶನವಿಲ್ಲ, ಸ್ವರವಚನಗಳು ಎಂದು ಇವೆ. ಮೇಲ್ಕಂಡ ಪ್ರತಿಗಳ ನೆರವಿನಿಂದ ಈ ಕೃತಿಯನ್ನು ಸಾಧ್ಯವಾದಷ್ಟು

ಪರಿಷ್ಕರಿಸಲಾಗಿದೆ"[೭] ಎನ್ನುವ ಮಾತುಗಳು ಸಂಪಾದನ ಕಾರ್ಯದಲ್ಲಿನ ತೊಡಕುಗಳನ್ನು ಸೂಚಿಸುತ್ತವೆ. ಹಾಗೆಯೇ 'ನೀರಲಕೆರೆ ಬಸವಲಿಂಗ ಶಿವಯೋಗಿಗಳ ಸ್ವರವಚನಗಳು' ಕೃತಿಯ ಸಂಪಾದಕರಾದ ಬಸವಲಿಂಗಸೊಪ್ಪಿಮಠ ಅವರು "ಹಸ್ತಪ್ರತಿಯೊಂದನ್ನು ಹಿಡಿದು ಇದ್ದುದಿದ್ದಂತೆ ಅಚ್ಚಿಸಲಾದ 'ಜ್ಞಾನಗೀತೆಯ' ಆಧಾರ ಪಡೆದು ಮೂಲಕ್ಕೆ ಧಕ್ಕೆಯಾಗದಂತೆ ಪರಿಷ್ಕರಿಸಿ ಇಲ್ಲಿ ಪ್ರಕಟಿಸಿದ್ದೇನೆ. ಸಂಪಾದಕನ ಪಾಠಕ್ಕೆ ಪ್ರತ್ಯೇಕ ಒತ್ತು ಕೊಡದೆ, ಭಾವ-ಭಾಷೆಯ ಸಂಬಂಧ, ಲಯ, ಛಂದಸ್ಸು, ಗೇಯತೆ ಇವುಗಳನ್ನು ಲಕ್ಷಿಸಿ ಪಾಠದ ಮೂಲದ ಕಡೆಗೆ ಪ್ರಾಮಾಣಿಕವಾಗಿ ಶ್ರಮಿಸಿದ್ದೇನೆ"[೮] ಎನ್ನುತ್ತಾ 'ಜ್ಞಾನಗೀತೆ' ಎಂದು ಗ್ರಂಥಕ್ಕೆ ಹೆಸರಿಟ್ಟ ಬಗ್ಗೆ ಅವರು ಅನುಮಾನ ವ್ಯಕ್ತಪಡಿಸುತ್ತಾರೆ. 'ಕೈವಲ್ಯ ಕಲ್ಪವಲ್ಲರಿ' ಕೃತಿಯ ಸಂಪಾದಕರಾದ ಶಿ.ಶಿ. ಬಸವನಾಳರು 'ಕೈವಲ್ಯಕಲ್ಪವಲ್ಲರಿ'ಯ ಹಲವು ಮುದ್ರಿತ ಪ್ರತಿಗಳು ಅಲ್ಲಲ್ಲಿ ಆಗಾಗ ಮುದ್ರಿತವಾಗಿ ಪ್ರಸಾರವಾಗಿವೆ. ಕೆಲ ಮುದ್ರಿತ ಪ್ರತಿಗಳಿಗೆ ಟೀಕೆಯೂ ಇದೆ. ಆದರೆ ಇವು ವಿಷಯದ ಕಡೆಗೆ ಲಕ್ಷ್ಯವಿಟ್ಟು ಮುದ್ರಿತವಾದುವಾಗಿವೆ. ಪದ-ಪಾದಗಳನ್ನು ವಿಂಗಡಿಸದೆ ಅಕ್ಷರ ಸಾಹಿತ್ಯವನ್ನು ತಿದ್ದದೇ ಹಾಗೇ ಮುದ್ರಿತವಾದುದರಿಂದ ಈ ಗ್ರಂಥದ ಸಾಹಿತ್ಯ ಲಕ್ಷಣಗಳು ತೋರ್ಪಡಿಸಲು ದುಸ್ಸಾಧ್ಯವಾಗಿದೆ. ಆದುದರಿಂದ ಪ್ರಸ್ತುತ ಮುದ್ರಣವನ್ನು ಆದಷ್ಟು ಶೂದ್ಧವಾಗಿರುವಂತೆ ಓದಲು ಅನುಕೂಲವಾಗುವಂತೆ ಸಂಗ್ರಹಿಸಲಾಗಿದೆ"[೯] ಎಂಬ ಕಾರಣವನ್ನು ನೀಡುತ್ತಾರೆ. ಅದೇ ರೀತಿ 'ಹಾಗಲ್ವಾಡಿ ಮುದ್ದೀರಸ್ವಾಮಿಯ ಸ್ವರವಚನಗಳನ್ನು' ಸಂಪಾದಿಸಿದ ವೀರಣ್ಣ ರಾಜೂರ ಅವರು 'ಹಸ್ತಪ್ರತಿಗಳನ್ನು ಪರಿಶೀಲಿಸಿದೆ, ೮೧ ಸ್ವರವಚನಗಳ ಸಂಗ್ರಹ ಅದರಲ್ಲಿತ್ತು. ಈಗಾಗಲೇ ದೊರೆತ ೫೫ ಸ್ವರವಚನಗಳಿಂದ ಭಿನ್ನವಾದ ೫೨ ಹೊಸ ಸ್ವರವಚನಗಳು ಅದರಲ್ಲಿ ಕಂಡುಬಂದವು. ಬಿಡಿಯಾಗಿ ದೊರೆತ ಸ್ವರವಚನಗಳಿಂದ ಇಡಿಯಾಗಿ ಸೇರಿದ ಸ್ವರವಚನಗಳಿಗೆ ಪಾಠಾಂತರ ಗುರುತಿಸಿ ಪರಿಷ್ಕರಿಸಿ ಪ್ರಕಟಿಸಿದ"[೧೦] ಕಾರಣ ನೀಡುತ್ತಾರೆ.

ಈ ತರದ ಪ್ರಯತ್ನಗಳು ಸಂಪಾದನೆ ಎಂಬ ಅಧ್ಯಯನ ಶಿಸ್ತನ್ನು ಹೆಚ್ಚು ಖಚಿತಗೊಳಿಸುವ ಉದ್ದೇಶವನ್ನು ಹೊಂದಿದಂತೆ ಕಾಣುತ್ತವೆ. ಇವು ನಮ್ಮ ಸಂಸ್ಕೃತಿಯಲ್ಲಾದ ಬದಲಾವಣೆಗೆ ಕಾರಣವಾಗಿವೆಯೇ? ಯಾಕೆಂದರೆ ಮೌಖಿಕ ಸಂಪ್ರದಾಯದ ಮುಖ್ಯ ಲಕ್ಷಣಗಳಾದ ನೆನಪು ಮತ್ತು ಸಂದರ್ಭನಿಷ್ಠ ಸಂಗತಿಗಳಿಗೆ ಬದಲಾಗಿ ಕಾಲ, ದೇಶ, ವಿಶೇಷಗಳಿಂದ ವ್ಯತ್ಯಾಸಗೊಳ್ಳದ ಲಿಖಿತ ದಾಖಲೆಗೆ ಹೆಚ್ಚಿನ ಪ್ರಾಶಸ್ತ್ಯ ದೊರಕಿದೆ. ವಸಾಹತು ಶಿಕ್ಷಣ ಪದ್ಧತಿಯು ಬೆಳೆಸಿದ ಅಕ್ಷರ ಚಿಂತನೆಯ ಫಲವಾಗಿ ಇವೆಲ್ಲವು ಮೌಖಿಕವಾದದ್ದನ್ನು ಲಿಖಿತ ರೂಪದಲ್ಲಿ ರಕ್ಷಿಸುವ/ಸಂಪಾದಿಸುವ ಬಹುದೊಡ್ಡ ಪ್ರಯತ್ನ ಮಾಡಿದವು. ಆದರೆ "ಪ್ರಾಚೀನ ಕಾವ್ಯಮಾರ್ಗಗಳು ಸಂವಹನಕ್ಕಾಗಿ ಕಾಲಾತೀತ ಮಾದರಿಯನ್ನು ಅನುಸರಿಸುತ್ತಿದ್ದವು. ಅಲ್ಲಿನ ಪುರಾಣ ಕಲ್ಪನೆ, ಪವಾಡಗಳು, ಅತಿಮಾನುಷತೆ, ಇತ್ಯಾದಿಗಳೆಲ್ಲ ಶ್ರೋತೃಗಳ ಮನಸ್ಸಿನಲ್ಲಿ ಪ್ರಭಾವ ಬೀರುವುದಷ್ಟೇ ಅಲ್ಲದೆ, ಅವುಗಳದೇ ಆದ ಒಂದು ತಾತ್ವಿಕ ಚೌಕಟ್ಟು

ಇತ್ತು. ಶ್ರೋತೃವರ್ಗಕ್ಕೆ ಒಂದು ಕಾವ್ಯವನ್ನು ಅರ್ಥೈಸಿಕೊಳ್ಳುವುದಕ್ಕೆ ಇದಾವುದೂ ತೊಡಕಿನ ಸಂಗತಿಯಾಗಿರಲಿಲ್ಲ. ಹಾಗೆಯೇ ಕವಿಯೊಬ್ಬನು ತನ್ನ ಕಾವ್ಯ ಕಟ್ಟಡಕ್ಕೆ ಪುರಾಣ, ಪವಾಡ, ದಂತಕತೆ, ಕಲ್ಪನೆಗಳನ್ನು ತರುವುದು ಆ ಕಾಲದ ರೂಢಿಗತ ಸಂಗತಿಗಳು. ಆದರೆ ಹೊಸಗನ್ನಡ ಕಾಲದ ವಿದ್ವಾಂಸರು ಪಾಶ್ಚಾತ್ಯರ ರ್‍ಯಾಷನಲ್ ಚಿಂತನಕ್ರಮವನ್ನು ಅನುಸರಿಸಿದ್ದರಿಂದ ಮತ್ತು ಕಾಲದ ಗಣನೆಯನ್ನೇ ಮುಂದಾಗಿಸಿಕೊಂಡದ್ದರಿಂದ ಪುರಾಣ, ಪವಾಡ ಸಂಗತಿಗಳ ಕಡೆಗೆ ನಿರ್ಲಕ್ಷ್ಯ ತೋರಿ ಚರಿತ್ರೆಗಷ್ಟೇ ಪ್ರಾಮುಖ್ಯತೆ ಕೊಟ್ಟಿದ್ದಾರೆ."[೧೧] ಈ ದಿಸೆಯ ಪ್ರಯತ್ನಗಳು ನಮ್ಮಲ್ಲಿ ಇನ್ನೂ ನಡೆಯುತ್ತಿವೆ. ಆದರೆ ತತ್ವಪದಗಳು ಮೌಖಿಕವಾಗಿಯೂ ಚಾಲ್ತಿಯಲ್ಲಿ ಇರುವಂತವು. ಇವು ಬಾಯಿಂದ ಬಾಯಿಗೆ ಹರಿದು ಬರುವಾಗ ವ್ಯತ್ಯಾಸಗಳಾಗಿ ಬಂದಿರುವುದು ಖಚಿತವಾಗಿದೆ. ಇಂಥ ಸಂದರ್ಭದಲ್ಲಿ ಸಂಪಾದಕನು ಶುದ್ಧಪಾಠ ಹುಡುಕುವ ಶಾಸ್ತ್ರೀಯತೆಗೆ ಅರ್ಥ ಬಾರದೆ ಹೋಗುತ್ತದೆ. ಹಾಗಾಗಿ ಮೌಖಿಕ ಹಾಡುಗಳ ಸಂಪಾದನೆಯ ಕಾರ್ಯ ಅನೇಕ ಪಾಠಗಳನ್ನು ಪರಿಶೀಲಿಸಿ ಒಂದು ಶುದ್ಧಪಾಠವನ್ನು ನಿರ್ಧರಿಸಿ ಕೊಡುವ ಶಾಸ್ತ್ರೀಯ ಸಂಪಾದನೆಗಿಂತ ಭಿನ್ನವಾದುದು. ಇಲ್ಲಿ ಒಂದೇ ಪಾಠ ಅನೇಕ ಪಾಠಗಳೂ ಆಗುತ್ತವೆ. ಒಂದೇ ಹಾಡುಗಳಲ್ಲಿ ವ್ಯತ್ಯಾಸಗಳೂ ಕಾಣಿಸುತ್ತವೆ. ಮೂಲ ಪಠ್ಯ ಎನ್ನುವ ಕಲ್ಪನೆಯೇ ಆಧುನಿಕ ಕಾಲದಲ್ಲಿ ತೊಡಕಿನ ಸಂಗತಿಯಾಗಿದೆ. ಆದರೆ ಆ ಹಾಡುಗಳ ಮೂಲ ಸತ್ವ, ಆಶಯ ಮಾತ್ರ ಬದಲಾಗದೆ ಉಳಿದು ಬಂದಿವೆ. ಬರಹ-ಮೌಖಿಕ ಎನ್ನುವ ಗಡಿರೇಖೆಗಳನ್ನು ಮೀರಿ ಚಲಿಸುತ್ತಿವೆ.

ಈ ಹಿನ್ನೆಲೆಯಲ್ಲಿ ಸಂಪಾದನೆಗಳ ಪ್ರಸ್ತಾವನೆಯಲ್ಲಿ ಚರ್ಚಿತವಾದ ಅಂಶಗಳು ಯಾವುವು? ಯಾವ ತಾತ್ವಿಕ ನೆಲೆಯಲ್ಲಿ ಸಂಗ್ರಹಿಸಿ ಚರ್ಚಿಸಲಾಗಿದೆ ಎಂಬುದನ್ನು ಪ್ರಾತಿನಿಧಿಕ ಸಂಪಾದನೆಗಳ ಪ್ರಸ್ತಾವನೆಯ ಹಿನ್ನೆಲೆಯಲ್ಲಿ ವಿಶ್ಲೇಷಿಸಲಾಗಿದೆ.

ಕವಿಕೇಂದ್ರಿತ (ತತ್ವಪದಕಾರರ ಹೆಸರಿನಲ್ಲಿರುವ) ಹಾಡುಗಳ ಸಂಕಲನಗಳು ಹಸ್ತಪ್ರತಿಯಲ್ಲಿನ ಅಥವಾ ಮೌಖಿಕವಾಗಿ ಸಿಗುವ ಹಾಡುಗಳನ್ನು ಮುದ್ರಿತ ರೂಪಕ್ಕೆ ತರುತ್ತಿದ್ದಂತೆಯೇ ಆ ಕೃತಿ ಹಾಗೂ ಕೃತಿಕಾರರ ಬಗೆಗೆ ಮಾಹಿತಿಯನ್ನು ಕ್ರೋಡೀಕರಿಸುವ ಪ್ರಯತ್ನಗಳೂ ಪ್ರಾರಂಭವಾದವು. ಈ ನೆಲೆಯಲ್ಲಿ ಕವಿಯ ಜೀವನ ವಿವರ, ಕಾಲ, ದೇಶ, ಕೃತಿಯ/ಹಾಡುಗಳ ಸ್ವರೂಪ ಈ ಸಂಗತಿಗಳನ್ನು ವಿವಿಧ ಮೂಲಗಳಿಂದ ಕಂಡುಕೊಳ್ಳುವ, ಮೌಲ್ಯ ನಿರ್ಣಯಿಸುವ ಕಾರ್ಯಗಳು ಮೊದಲು ನಡೆದಿವೆ. ಯಾವುದೇ ಪ್ರಾಚೀನ ಸಾಹಿತ್ಯದ ಸರಿಯಾದ ತಿಳುವಳಿಕೆಗೆ ಕಾಲ-ದೇಶ-ಮತಗಳ ಚರ್ಚೆ ತೀರ ಅಗತ್ಯವೆಂದು ಭಾವಿಸಿವೆ. ಒಬ್ಬ ಕವಿಯ ಕಾಲ ಗೊತ್ತಿಲ್ಲದೆ ಅವನ ಬಗ್ಗೆ ಯಾವುದೇ ಸಾರ್ಥಕ ಚರ್ಚೆ, ಸರಿಯಾದ ವಿಮರ್ಶೆ ಸಾಧ್ಯವಿಲ್ಲ ಎಂಬ ನೆಲೆಯಲ್ಲಿ ಮುಂದಾಗಿವೆ. ಕವಿಯ ಸ್ವಕೀಯ ಸಂಗತಿಗಳು, ಅವನ ಕಾಲದ ಹಿನ್ನೆಲೆ, ಇವು ಕವಿಯನ್ನು ನಿರ್ದಿಷ್ಟ ಪರಿಸರದಲ್ಲಿಟ್ಟು ನೋಡಲು ಸಹಾಯಕವೆಂದೂ ನಂಬಿವೆ.

ಕವಿಗಳ (ತತ್ವಪದಕಾರರ) ಕಾಲ-ದೇಶ ನಿರ್ಧಾರದ ಚರ್ಚೆಗಳು ಕೆಲವೊಮ್ಮೆ ಬಿರುಸಿನಿಂದ ನಡೆದಂತೆ ಕಾಣುತ್ತದೆ. 'ಕರ್ನಾಟಕ ಕವಿಚರಿತೆ' ದ್ವಿತೀಯ ಸಂಪುಟ(೨೦೦೫)ದಲ್ಲಿ ನಿಜಗುಣ ಶಿವಯೋಗಿಗಳ (ಪು.೯೨) ಮತ್ತು ಇಮ್ಮಡಿ ಮುರಿಗೆಸ್ವಾಮಿಗಳ (ಪು.೨೬೩) ಕುರಿತು ಹಾಗೆಯೇ 'ಕರ್ನಾಟಕಕ ವಿಚರಿತೆ' ತೃತೀಯ ಸಂಪುಟ(೨೦೦೫)ದಲ್ಲಿ ಮುಪ್ಪಿನ ಷಡಕ್ಷರಿಗಳ (ಪು.೮೧), ಚಿದಾನಂದಾವಧೂತರ (ಪು.೭೪), ಗೋಪಾಲಾರ್ಯ ಶಿಷ್ಯರ(ಪು.೮೪), ಘನಮಠದಾರ್ಯರ (ಪು.೧೮೩), ಬಾಲಲೀಲಾ ಮಹಾಂತ ಶಿವಯೋಗಿಗಳ (ಪು.೧೭೭), ಕಡಕೋಳ ಮಡಿವಾಳಪ್ಪನ (ಪು.೧೭೮) ಶಂಕರಾನಂದಯೋಗಿಯ (ಪು.೧೫೮), ಶಿಶುನಾಳ ಶರೀಫರ (ಪು.೧೯೪), ಕುರಿತು ಚರ್ಚೆ ನಡೆದಿದೆ. ಹಾಗೆಯೇ ಸರ್ಪಭೂಷಣರ, ಹಾಗಲ್ವಾಡಿ ಮುದ್ವೀರಸ್ವಾಮಿಗಳ, ಕೂಡಲೂರು ಬಸವಲಿಂಗಪ್ಪ ಮುಂತಾದವರ ಹಾಡುಗಳ ಸಂಗ್ರಹಿತ ಕೃತಿಗಳಲ್ಲಿಯೂ ಈ ಚರ್ಚೆ ನಡೆದಿರುವುದು ಕಾಣುತ್ತೇವೆ. ಇಂತಹ ಚರ್ಚೆಗಳಲ್ಲಿ ಕೆಲವೊಮ್ಮೆ ನಿರ್ಧಾರಗಳು ಸರಿಯಾದವು ಎಂಬಂತೆ ಕಂಡುಬಂದರೂ ಕೆಲವು ಸಂಗತಿಗಳಲ್ಲಿ ಅನಿಶ್ಚಿತತೆ ಮುಂದುವರೆದಿದೆ. ಕಾಲ ನಿರ್ಧಾರದ ಸಂದರ್ಭದಲ್ಲಿ ನಮ್ಮ ವಿದ್ವಾಂಸರು ಲಭ್ಯವಿರುವ ಲಿಖಿತ ಹಾಗೂ ಮೌಖಿಕ ದಾಖಲೆಗಳ ಪ್ರಯೋಜನವನ್ನು ಪಡೆದಿದ್ದಾರೆ. ಹಾಡುಗಳಲ್ಲಿನ ಮಾಹಿತಿಗಳನ್ನು ಪರಸ್ಪರ ಪರಿಶೀಲಿಸಿ ಹೊಂದಿಸಿಕೊಳ್ಳುವ ಮೂಲಕವೂ ಪ್ರಯತ್ನಿಸಿದ್ದಾರೆ. ಆದರೆ ಬಹುತೇಕ ತತ್ವಪದಕಾರರ ಕಾಲವನ್ನು ನಿಖರವಾಗಿ ಗುರುತಿಸಲು ಸಾಧ್ಯವಾಗಿಯೇ ಇಲ್ಲ. ಹೀಗಾಗಿ ಅನುಬಂಧದಲ್ಲಿ ತತ್ವಪದಕಾರರ ಸಂಕ್ಷಿಪ್ತ ಪರಿಚಯದ ವಿವರಗಳನ್ನು ಕೊಡುವ ಸಂದರ್ಭದಲ್ಲಿ ಓ.ಎಲ್.ನಾಗಭೂಷಣಸ್ವಾಮಿ ಅವರು 'ಎಲ್ಲರ ಕಾಲವನ್ನೂ ಕೇವಲ ಅಂದಾಜು ಮಾತ್ರ ಎಂದು ತಿಳಿಯಬೇಕೆಂದು'[೧೨] ಕೋರಿಕೊಳ್ಳುತ್ತಾರೆ. ಅನುಭಾವಿಗಳ ಜೀವನ ವಿವರಗಳು ಊಹಿಸಿ ಬರೆದಂತವು ಆಗಿವೆ. ಅಧಿಕೃತವಾದ ಮಾಹಿತಿ ಇಲ್ಲವಾಗಿವೆ. ಯಾಕೆಂದರೆ ತಮ್ಮನ್ನು ಕುರಿತು ಅನುಭಾವಿಗಳು ಏನನ್ನೂ ಹೇಳಿಕೊಂಡಿಲ್ಲ. ಅದು ಅವರ ವ್ಯಕ್ತಿತ್ವದ ಭಾಗವೇ ಆಗಿದೆ. ಆದರೆ ತಮ್ಮ ಗುರು ಪರಂಪರೆಯ ಕುರಿತು ಹೇಳಿಕೊಂಡಿದ್ದಾರೆ. ಇದರಿಂದಾಗಿ ಖಚಿತ ಕಾಲ ನಿರ್ಣಯ ತೊಡಕಿನದಾಗಿದೆ.

ಈ ಕಾಲ ನಿರ್ಣಯದ ಬಗೆಗಿನ ಆಸಕ್ತಿ ಕೇವಲ ಸಂಗತಿಗಳ ನಿರ್ಧಾರಕ್ಕೆ ಮಾತ್ರ ಸೀಮಿತವಲ್ಲ. ಬದಲಾಗಿ ಅವರ ಹಾಡುಗಳ/ಕೃತಿಗಳ ಪ್ರಭಾವಗಳನ್ನು ಕುರಿತು ಅಧ್ಯಯನ ನಡೆಸಲು ಖಚಿತ ಕಾಲ ನಿರ್ಧಾರ ಅವಶ್ಯವೆಂಬ ನೆಲೆಯಲ್ಲಿ ಈ ಪ್ರಯತ್ನಗಳು ಸಾಗಿವೆ. ಕವಿಯ ಕಾಲ, ದೇಶ, ಸಮಾಜ ಇವು ಯಾವುವೂ ನಮಗೆ ಸರಿಯಾಗಿ ದೊರೆಯದೆ ಇದ್ದರೆ ಹೆಚ್ಚಿನ ಆಳ ವ್ಯಾಖ್ಯಾನಗಳಿಗೆ, ಆ ಕೃತಿಯನ್ನು 'ಹಾಡಿನಲ್ಲಿ ಅದು ಹುಟ್ಟಿದ ಕಾಲ, ಪರಿಸರದಲ್ಲಿ ಇಟ್ಟು ನೋಡಲು ಅವಕಾಶವಾಗದೆ ಹೋಗುತ್ತದೆ ಎಂದು ನಂಬುತ್ತವೆ. ಈ ಅರಿವು ನಮಗೆ ಸಿಗದೇ ಹೋದರೆ ಕೃತಿಯ ಬಗ್ಗೆ ರಚನೆಕಾರರ ಬಗ್ಗೆ ಅರ್ಥಪೂರ್ಣ ಸಂವಾದ ಸಾಧ್ಯವಾಗದೇ ಇರುವ ಆತಂಕವೂ ಇದೆ. ಅಲ್ಲದೆ ಹಾಡುಗಳ/ಕೃತಿರಚನೆಯ ಕಾಲದ, ಸಾಂಸ್ಕೃತಿಕ ಸಂದರ್ಭದ, ಸ್ವರೂಪದ ಚರ್ಚೆಗೆ ಖಚಿತ ಕಾಲನಿರ್ಣಯ ಮುಖ್ಯವೆಂಬಂತೆಯೂ ಭಾವಿಸಿವೆ.

ಹೀಗಾಗಿ ಕವಿಯ ವೈಯಕ್ತಿಕ ಜೀವನದ ಮಾಹಿತಿಗಳನ್ನು ಸಂಗ್ರಹಿಸುವ ಆಸಕ್ತಿಗಳು ಕಂಡುಬಂದಿವೆ. ಆದರೆ ಈ ಮಾಹಿತಿಗಳು ಕುತೂಹಲದ ಅಂಶಗಳಾಗಿ ಉಳಿದಿವೆ. ಇವುಗಳ ಮೂಲಕ ಅಧ್ಯಯನಕ್ಕೆ ಹೊಸ ನೆಲೆಗಳು ದೊರಕಿರುವ ಪ್ರಸಂಗವು ಕಡಿಮೆ. ಕವಿಯು ಬೆಳೆದು ಬಂದ ಧಾರ್ಮಿಕ, ಆಧ್ಯಾತ್ಮಿಕ, ಇನ್ನಿತರ ಪಂಥಗಳ ಪ್ರಭಾವ, ಪ್ರೇರಣೆಯ ಆಸಕ್ತಿಗಳು ಹೆಚ್ಚಾಗಿ ಚರ್ಚೆಗಳಲ್ಲಿ ಕಂಡುಬರುತ್ತವೆ.

ತತ್ವಪದಕಾರರನ್ನು ವಚನಕಾರರ ನಡೆ, ನುಡಿ, ಚಿಂತನೆಗಳ ನೆಲೆಯಲ್ಲಿ ನಡೆದವರು ಎಂದು ಚರ್ಚಿಸಲಾಗಿದೆ. ಶರಣರ ಮುಂದುವರೆದ ರಚನೆಗಳೇ ಈ ತತ್ವಪದಗಳು ಎಂದು ಬಿಂಬಿಸಲಾಗಿದೆ. ಹಾಗೆಯೇ ಸ್ವರವಚನಗಳೆಂದೂ ಕರೆಯಲಾಗುತ್ತಿದೆ. ವೀರಣ್ಣ ರಾಜೂರ, ವಿ.ಜಿ.ಪೂಜಾರ, ಈಶ್ವರಯ್ಯ ಮಠ, ಶ್ರೀಶಿವರಾತ್ರೀಶ್ವರ ಸ್ವಾಮಿಗಳು ಮುಂತಾದವರು ವೀರಶೈವ ತಾತ್ವಿಕ ನೆಲೆಯಲ್ಲಿಯೇ ಇವುಗಳನ್ನು ನೋಡಿದ್ದಾರೆ. ಕರ್ತೃ ಪ್ರಾಧಾನ್ಯತೆ, ಕಾಲದ ಪರಿಣಾಮ, ಕೃತಿಗಳ ಸಂದರ್ಭದ ರಾಚನಿಕ ಸ್ವರೂಪ ಮತ್ತು ಆಶಯಗಳನ್ನು ಅನುಲಕ್ಷಿಸಿ ಸ್ವರವಚನಗಳಿಗೆ ಒಂದು ಚರಿತ್ರೆಯನ್ನು ಕಟ್ಟುವ ಕೆಲಸ ನಡೆದಿದೆ. ಆದರೆ ತತ್ವಪದಗಳು ಶರಣರ ಸ್ವರವಚನಗಳಿಗಿಂತ, ದಾಸರ ಕೀರ್ತನೆಗಳಿಗಿಂತ ಆಶಯದಲ್ಲಿ ಭಿನ್ನವಾದವು ಎಂಬುದನ್ನು ಗಮನಿಸುವುದಿಲ್ಲ. ಶರಣರದು ಶಿವಪರವಾದ ಸ್ತುತಿಯಾದರೆ ದಾಸರದು ವಿಷ್ಣುಪರವಾದ ಸ್ತುತಿ. ಶರಣರ ಸ್ವರವಚನಗಳ ರಚನೆಗಳಲ್ಲಿರುವ ಅಧ್ಯಾತ್ಮ ಜನಸಾಮಾನ್ಯರಿಗೆ ನಿಲುಕಲಿಲ್ಲ. ಹೀಗಾಗಿ ವಚನಗಳು ಜನಪ್ರಿಯವಾದವು. ಸ್ವರವಚನಗಳು ಹಿಂದೆ ಸರಿದವು. ಹಾಡುಗಳಿಗೆ ಇವರು ಬಳಸಿದ ಭಾಷೆ ಕ್ಲಿಷ್ಟವಾದದು. ವಚನಗಳ ಭಾಷೆಯಂತೆ ಸರಳವಾದುದಲ್ಲ. ಆದರೆ ತತ್ವಪದಗಳ ಭಾಷೆ ಆಡುನುಡಿಯಾಗಿಗೆ. ಜನಸಮುದಾಯದ ಸಹಜ ನುಡಿಯಾಗಿದೆ. ಕನ್ನಡ, ಉರ್ದು, ಮರಾಠಿ, ತೆಲುಗು ಭಾಷೆಯಿಂದ ಕೂಡಿದ ಸಮಿಶ್ರ(ಸಂಕರ) ಭಾಷೆ ತತ್ವಪದಗಳದಾಗಿದೆ. ವಚನಕಾರರಿಗೆ 'ಅರಿವೆ ಗುರು'ವಾದರೆ, ತತ್ವಪದಕಾರರು 'ಗುರುವೇ ಅರಿವು' ಎಂದು ತಿಳಿದವರು. ಅದಕ್ಕೆ ಅವರು 'ಗುರುವಿನ ಗುಲಾಮನಾಗದೆ ದೊರೆಯದಣ್ಣ ಮುಕುತಿ' ಎಂದು ಮನದುಂಬಿ ಹಾಡಿದ್ದಾರೆ, ಸಾರಿದ್ದಾರೆ. ವಚನಕಾರರು ಕಾಯಕಕ್ಕೆ ಮಹತ್ವ ಕೊಟ್ಟರು. ತತ್ವಪದಕಾರರಾದರೋ ಏಕಾಂಗಿಯಾಗಿ ಹಾಳು ಗುಡಿ-ಗವಿ ಪೊಟರೆಗಳಲ್ಲಿ ದುಡಿಯದೇ ಧ್ಯಾನಸ್ಥ ಜೀವನ ಸವೆಸಿದರು.

ವಚನಕಾರರಲ್ಲಿ ಹೆಣ್ಣಿಗೆ ಮಹತ್ವದ ಸ್ಥಾನವಿದೆ. ಆದರೆ ತತ್ವಪದಕಾರರು ಹೆಣ್ಣು ಮಾಯೆ ಎಂದು ಜರಿದರು. ತತ್ವಪದಕಾರರದು ಸಾಂಸ್ಥಿಕತೆಯ ವಿರುದ್ಧ ಬಂಡಾಯದ ಹೋರಾಟವಾದರೆ ವಚನಕಾರರು ಸಂಘಟನಾತ್ಮಕ ಚಳುವಳಿಯ ಮೂಲಕ ಸಾಮಾಜಿಕ ಹೋರಾಟಕ್ಕೆ ಮನ್ನಣೆ ನೀಡಿದರು. ಆದರೆ ತತ್ವಪದಕಾರರು ಆತ್ಮಾನಂದವೇ ಮುಖ್ಯವೆಂದು, ಸಮಾಜದ ಜಂಜಡಗಳಿಂದ ದೂರವಿದ್ದವರು. ಕೆಲವೊಮ್ಮೆ ಸಮಾಜವನ್ನು ಸಮದೂರದಲ್ಲಿ ನಿಂತು ವಿಡಂಬಿಸಿದವರು ಇದ್ದಾರೆ. ವಚನಕಾರರಿಗೆ ದೈವ ಮುಖ್ಯವಾದರೆ, ತತ್ವಪದಕಾರರಿಗೆ ಗುರು ಮುಖ್ಯವಾದರು.

ಎಚ್.ಎಸ್.ಶಿವಪ್ರಕಾಶರ ಮಾತಿನಲ್ಲಿ ಈ ಭಿನ್ನತೆಯನ್ನು ಮುಂದುವರೆಸುವುದಾದರೆ 'ಹನ್ನೆರಡನೇ ಶತಮಾನದ ಶರಣರು ಶೈವಧರ್ಮದ ಕೆಲವು ಪರಿಕರಗಳನ್ನು ಉಳಿಸಿಕೊಂಡು ಇನ್ನೂ ಕೆಲವನ್ನು ನವೀಕರಿಸಿಕೊಂಡು ಉಳಿದೆಲ್ಲ ಸಂಸ್ಕೃತಿ ನಂಬಿಕೆಗಳ ಆಚರಣೆಗಳನ್ನು ನಿರಾಕರಿಸಿದರು. ಯಾಗ, ದಾನ, ಬಲಿ, ದೇವಾಲಯ, ಗ್ರಾಮದೇವತೆ ಮುಂತಾದ ಕೆಳಸಂಸ್ಕೃತಿಗಳ ಬಹುದೇವತೋಪಾಸನಾ ಪ್ರವೃತ್ತಿಗಳು ಈ ಎಲ್ಲವುಗಳ ಮೇಲೆ ವಚನಕಾರರು ಉರಿವ ನಾಲಗೆಯನ್ನು ಹರಿಬಿಟ್ಟಿದ್ದಾರೆ. ಆ ನಂತರದ ದಾಸಪಂಥದವರೂ ಹರಿಭಕ್ತರಾದರೂ ಹರಿಹರೈಕ್ಯ ಭಾವವನ್ನು ನಿರಾಕರಿಸದೆ ಮೇಲು ಸಂಸ್ಕೃತಿಯ ಕುರುಹುಗಳಾದ ದೇವಾಲಯ, ದಾನ, ಧರ್ಮ, ಯಜ್ಞ, ಯಾಗ ಇವೆಲ್ಲವನ್ನು ಸ್ವೀಕರಿಸಿದರು. ಆದರೆ ಅವರ ನಿರಾಕರಣೆ ಇದ್ದದ್ದು ಕನಕದಾಸರ ಮಾತಿನಲ್ಲಿ ಹೇಳಬೇಕೆಂದರೆ 'ಬಣಗು ದೈವ'ಗಳ ಬಗ್ಗೆ. ಹೀಗೆ ದಾಸಪಂಥದವರು ಬಹುಮಟ್ಟಿಗೆ ಕೆಳಸಂಸ್ಕೃತಿಗಳನ್ನು ನಿರಾಕರಿಸಿದರು. ಶರಣಚಳುವಳಿ ಮತ್ತು ದಾಸಪಂಥಗಳೆರಡೂ ಮೂಲಭೂತವಾಗಿ ಏಕದೇವೋಪಾಸನೆಯ ಮಾದರಿಗಳು. ಆದರೆ ತತ್ವಪದಕಾರರು ಮೇಲು-ಕೆಳ ಸಂಸ್ಕೃತಿಗಳ ಸಂಕೇತಗಳ ವಿಚಾರದಲ್ಲಿ ಸ್ವೀಕಾರ ಭಾವವನ್ನು ತಾಳಿ ಆ ಎಲ್ಲ ಬಾಹ್ಯ ಆಚರಣೆಗಳ ವೈವಿಧ್ಯದಲ್ಲಿ ಅಂತರಂಗದ ಅನುಭವದ ಏಕತೆಯನ್ನು ಹುಡುಕುತ್ತಾರೆ''[೧೩] ಎಂಬ, ಭಿನ್ನತೆಗಳನ್ನು ಕವಿ ಕೃತಿಗಳ ಪ್ರಸ್ತಾವನೆಯ ಚರ್ಚೆಯಲ್ಲಿ ಗಮನಿಸಿಯೇ ಇಲ್ಲ.

ಅನುಭಾವಿಗಳ ಲೀಲೆ, ಪವಾಡ, ಮಹಿಮೆ ಅವರ ದಯೆಯಿಂದ ನಿವಾರಣೆ ಆದ ಕಾಯಿಲೆ, ಇಷ್ಟ ಕಾಮನೆಗಳ ನೆರವೇರಿಕೆ ಕುರಿತ ವಿವರಗಳೂ ಚರ್ಚಿತವಾಗಿವೆ. ವಸ್ತುವಿನ ದೃಷ್ಟಿಯಿಂದ ಹಾಡುಗಳಲ್ಲಿ ಎಲ್ಲ ಆಸೆ, ಕಾಮನೆಗಳನ್ನು ಧಿಕ್ಕರಿಸಿದ ವಿವರಣೆಯೂ, ದೇವನಲ್ಲಿ ಭಕ್ತಿ, ಜ್ಞಾನ, ವೈರಾಗ್ಯಗಳನ್ನು ಮನದುಂಬಿ ಬೇಡಿಕೊಂಡ ಪರಿಯನ್ನು ವಿವರಿಸಲಾಗಿದೆ. ಪ್ರಾಪಂಚಿಕದ ನಶ್ವರತೆಯನ್ನು ಕುರಿತು ಚರ್ಚಿಸಲಾಗಿದೆ. ಜೀವನು ಶಿವಯೋಗ ಸಾಧಿಸುವುದೇ ಎಲ್ಲ ಸಾಧನೆಗಳ ಪರಮ ಗುರಿ ಎಂದು ವಿವರಿಸಲಾಗಿದೆ. ಭಕ್ತಿಯ ಉನ್ಮಾದದಲ್ಲಿ ವಿಜೃಂಭಿಸಿದ ನುಡಿಗಳೂ ಇವೆ. ಬಹುತೇಕ ಸಂಕಲನಗಳು ವೀರಶೈವದ ತಾತ್ವಿಕ ಹಿನ್ನೆಲೆಯಲ್ಲಿ ಬಂದಿವೆ. ಒಟ್ಟಾರೆ ಈ ತರದ ಚರ್ಚೆಗಳು ಕವಿಯ ಮತಧರ್ಮದ ಬಗೆಗಿನ ಆಸಕ್ತಿಯ ವಿಶ್ಲೇಷಣೆಗಳಾಗಿವೆ. ಇವು ಒಂದು ನಿರ್ದಿಷ್ಟ ದಿಕ್ಕಿಗೆ ಸೆಳೆಯುತ್ತವೆ.

ಈ ನೆಲೆಯ ಸಂಕಲನಗಳ ವಿವರಣೆಯಲ್ಲಿ ವಸ್ತುವಿನ ಆಯ್ಕೆ ಮತ್ತು ಸ್ಥೂಲ ಜೀವನದೃಷ್ಟಿ, ಆಯಾ ಕೃತಿಕಾರರ ಧಾರ್ಮಿಕ ಹಿನ್ನೆಲೆ ಮತ್ತು ನಂಬಿಕೆಗಳ ಮೂಲಕವೇ ನಿರ್ಧಾರಗೊಳ್ಳುತ್ತದೆ ಎಂಬ ತಾತ್ವಿಕ ತಳಹದಿಯನ್ನು ಅವಲಂಬಿಸಿವೆ. ಆದರೆ ರಾನಡೆಯವರು ಅನುಭಾವಿಗಳನ್ನು ಧಾರ್ಮಿಕ ಹಿನ್ನೆಲೆಯಲ್ಲಿ (ಶೈವರು, ವೈಷ್ಣವರು) ವಿಂಗಡಿಸುವುದನ್ನು ಒಪ್ಪುವುದಿಲ್ಲ. ಬದಲಿಗೆ ಅನುಭಾವದ ಬೆಳವಣಿಗೆಗೆ ಅವರಿತ್ತ ಕಾಣಿಕೆ ಏನು ಎಂಬ ಚಿಂತನೆ ಅವರ ಸಮಸ್ಯೆ. ಈ ದೃಷ್ಟಿಯಿಂದ ಅವರು ಕನ್ನಡ ಅನುಭಾವಿಗಳನ್ನು ಜಗತ್ತಿನ ಬೇರೆ ಬೇರೆ ಅನುಭಾವಿಗಳಿಗೂ ಹೋಲಿಸುತ್ತಾರೆ.

ಹಲವು ಕವಿಗಳ (ತತ್ವಪದಕಾರರ) ಆಯ್ದ ಹಾಡುಗಳ ಪ್ರಸ್ತಾವನೆಯಲ್ಲಿ ಈ ಮೇಲೆ ಚರ್ಚಿಸಿದ ವಿಷಯಗಳೇ ಕಂಡುಬರುತ್ತವೆ. ಆದರೆ ಕೆಲವೊಮ್ಮೆ ಭಿನ್ನವಾದ ಅಂಶಗಳು ಗೋಚರಿಸಿವೆ. ಜಿ.ವಿ.ಆನಂದಮೂರ್ತಿ ಅವರು ಸಂಪಾದಿಸಿದ 'ತ್ವಪದಕಾರರು' ಕೃತಿಯು ಆಯ್ದ ಹಾಡುಗಳ ಸಂಕಲನವಾಗಿದೆ. ಮುಖ್ಯವಾಗಿ ತತ್ವಪದಗಳು ಕನ್ನಡ ಸಂಸ್ಕೃತಿಯಲ್ಲಿ ಮಾತ್ರವಲ್ಲ, ಲೋಕದ ನಾನಾ ಭಾಷೆ ಸಂಸ್ಕೃತಿಯಲ್ಲಿರುವಂತವು. ಇವು ಪ್ರಾಂತ, ರಾಷ್ಟ್ರ, ಭಾಷೆಯ ಮಿತಿಗಳನ್ನು ದಾಟಿದಂತವು. ಎಲ್ಲ ಮೂಲಗಳಿಂದ ದೊರಕುವ ಬೆಳಕನ್ನು ಸ್ವೀಕರಿಸಿ ನನ್ನದು, ನಾನು ಎಂಬ ಅಹಂಕೇಂದ್ರಿತ ನೆಲೆಯನ್ನು ಧಿಕ್ಕರಿಸಿ 'ನಾನಾರೆಂಬುದು ನಾನಲ್ಲ' ಎಂಬ ಅನಾತ್ಮವಾದಿ ನೆಲೆಯವು. ವೈದಿಕ ಆಧ್ಯಾತ್ಮಿಕ ಪರಂಪರಗೆ ತೋರಿದ ಪ್ರತಿಕ್ರಿಯೆಗಳಾಗಿವೆ ಎಂದು ಚರ್ಚಿಸುತ್ತಾರೆ. ಇವು ಮೌಖಿಕವಾಗಿರುವ ಕಾರಣದಿಂದಲೇ ಇನ್ನೂ ಗಂಭೀರ ಅಧ್ಯಯನಕ್ಕೆ ಒಳಪಡಿಸಿಲ್ಲ ಎಂಬ ವಿಷಾದವೂ ವಿವರಣೆಯಲ್ಲಿದೆ. ಇಲ್ಲಿನ ಅನೇಕರ ಹಾಡುಗಳು ಸಾಂಸ್ಕೃತಿಕ ತಿಳುವಳಿಕೆಗೆ ಮಹತ್ವವಾದವು ಎಂಬ ಭಾವನೆ ಇದೆ.

ವಿ.ಜಿ.ಪೂಜಾರ ಅವರ 'ಆಯ್ದ ಸ್ವರ ವಚನಗಳು' ಕೃತಿಯಲ್ಲಿ, ಅನುಭಾವಿಕ ನೆಲೆಯ ಸಂಕಲನದ ಹಾಡುಗಳು ತತ್ವಾದರ್ಶವಾಗಿವೆ. ಅಲ್ಲದೆ ಶರಣರ ರಚನೆಗಳ ತಾತ್ವಿಕ ನೆಲೆಯಲ್ಲಿಯೇ ಸಂಗ್ರಹಿಸಿದ ಗ್ರಂಥವಾಗಿದೆ ಎಂಬುದು ಪ್ರಸ್ತಾವನೆಯ ಚರ್ಚೆಯಿಂದ ಗೋಚರಿಸುತ್ತದೆ. ಆದರೆ ಶರಣರ ರಚನೆಗಳ ತಾತ್ವಿಕ ಆಶಯಗಳಿಂದ ಹೊರಗಿರುವ ರಚನೆಗಳೂ ಈ ಸಂಕಲನದಲ್ಲಿ ಸೇರಿವೆ. ಈ ಮೂಲಕ ತತ್ವಪದಗಳು ಯಾವುದೇ ಒಂದು ಸಿದ್ಧ ಮಾದರಿಯ ಚೌಕಟ್ಟಿಗೆ ಒಳಗಾಗದೆ ಇರುವಂತವು ಎಂಬುದನ್ನು ಈ ಗ್ರಂಥದಿಂದ ಅರಿಯಬಹುದಾಗಿದೆ. ಈ ಕಾರಣಕ್ಕೆ ಇದು ಮುಖ್ಯವಾಗಿದೆ.

ಹಾಗೆಯೇ ಟಿ.ಎಂ.ಭಾಸ್ಕರ್ ಅವರ 'ಆಯ್ದ ತತ್ವಪದಗಳು' ಕೃತಿಯಲ್ಲಿ 'ಗುರು-ಶಿಷ್ಯ, ಭಕ್ತಿ-ವೈರಾಗ್ಯ, ಆತ್ಮ-ಪರಮಾತ್ಮ, ಅರಿವು-ಆಚಾರ ಪರಮಾರ್ಥ, ಸಮಾಜ-ಸಂಕೀರ್ಣ, ಚಾರಿತ್ರಿಕ ಮಹಾಪುರುಷರು' ಹೀಗೆ ಅಧ್ಯಯನದ ಅನುಕೂಲಕ್ಕೆ ಹಾಡುಗಳನ್ನು ವಿಂಗಡಿಸಿ ಸಂಕಲಿಸಲಾಗಿದೆ. ಆದರೆ ತತ್ವಪದಗಳ ನಿಜವಾದ ಹಾಡಿನ ನೆಲೆ ಬೇರೆಯೇ ಆಗಿರುತ್ತದೆ. ಅವು ವರ್ಗೀಕರಣಕ್ಕೆ ಸಿಲುಕದೆ ಅಖಂಡತೆಯನ್ನು ಸಾರುತ್ತವೆ. ಅಂಥ ಹಾಡುಗಳು ಇದರಲ್ಲಿವೆ ಎಂಬುದನ್ನು ಚರ್ಚಿಸುತ್ತಾರೆ. 'ಸಮಾಜ-ಸಂಕೀರ್ಣ, ಚಾರಿತ್ರಿಕ ಮಹಾಪುರುಷರು' ಕೃತಿಯ ಈ ಬಾಗಗಳು ಸಾಂಸ್ಕೃತಿಕ ಚರಿತ್ರೆ ದೃಷ್ಟಿಯಿಂದ ಮಹತ್ವದ್ದಾಗಿವೆ.

ಈ ಮೇಲಿನ ಮೂರು ಕೃತಿಗಳು ಈಗಾಗಲೇ ಪ್ರಕಟಿತವಾದ ಕೃತಿಗಳಿಂದ ಆಯ್ದ ಹಾಡುಗಳನ್ನು ತಮ್ಮ ಉದ್ದೇಶಕ್ಕೆ ಅನುಗುಣವಾಗಿ ಸಂಕಲಿಸಿ ವಿವರಿಸಿದಂತವು. ಆದರೆ 'ಆಯ್ದ ಸ್ವರವಚನಗಳು' ಮತ್ತು 'ಆಯ್ದ ತತ್ವಪದಗಳು' ಕೃತಿಗಳನ್ನು ಶೈಕ್ಷಣಿಕ ಪದ್ಧತಿಯ ಭಾಗವಾಗಿ, (ವಿದ್ಯಾರ್ಥಿಗಳಿಗೆ ಪಠ್ಯಪುಸ್ತಕದ ಭಾಗವಾಗಿ) ಪದವಿ ತರಗತಿಗಳಿಗೆ ಅಭ್ಯಾಸಕ್ಕೆ ಇಡಲಾಗಿದೆ. ಇವು ಹೆಚ್ಚಾಗಿ ಜೀವನ ಮೌಲ್ಯಗಳ ಬಗೆಗಿನ ಚರ್ಚೆಗೆ ಸಾಧನಗಳಾಗಿ ತೋರಿವೆ. ಇವುಗಳ ಅಧ್ಯಯನ ಕೇವಲ ಔಪಚಾರಿಕವಾಗುತ್ತಾ ನಡೆದಿದೆ.

ಬೋಧನೆಯೂ ಆನುಷಂಗಿಕ ಸಾಧನವಾಗಿದೆ. ಆದ್ದರಿಂದ ಶೈಕ್ಷಣಿಕ ಪಠ್ಯಕ್ರಮದ ಅಂಗವಾಗಿ ಬರುವ ಈ ಅಧ್ಯಯನ ಅಂತಹ ಗಣನೀಯವಾದ ಸಾಧನೆಗೆ ಕಾರಣವಾಗಿಲ್ಲ ಎನ್ನಬಹುದು. ವಿದ್ಯಾರ್ಥಿಗಳು ಮೂಲಕೃತಿಗಳಿಂದ ದೂರ ಉಳಿದು ಸಾರಾಂಶಗಳನ್ನು ಒದಗಿಸುವ ಮಾರುಕಟ್ಟೆಯ ಗೈಡುಗಳಿಗೆ ಮೊರೆ ಹೋಗಿರುವುದು ಕಂಡುಬರುತ್ತದೆ.

ಈ ಮೇಲಿನ ವಿಷಯವಾಗಿ ನಾನು ಕೈಗೊಂಡ ಕ್ಷೇತ್ರಕಾರ್ಯ ಮೇಲೆ ಹೇಳಲಾದ ಸಂಗತಿಗಳ ಬಗೆಗೆ ಹೇಗೆ ಬೆಳಕು ಬೀರುತ್ತದೆ ಎಂಬುದನ್ನು ಗಮನಿಸಬಹುದು. ನಾನು ಈ ಉದ್ದೇಶದಿಂದ ನಡೆಸಿದ ಕ್ಷೇತ್ರಕಾರ್ಯದ ಸ್ವರೂಪ, ವಿಧಾನ ಮತ್ತು ಅದರ ಫಲಿತಾಂಶಗಳನ್ನು ಪ್ರಬಂಧದ ಅನುಬಂಧದಲ್ಲಿ ಕೊಟ್ಟಿದ್ದೇನೆ.

ಓ.ಎಲ್.ನಾಗಭೂಷಣಸ್ವಾಮಿ ಮತ್ತು ಇತರರು ಸಂಪಾದಿಸಿದ 'ತತ್ವಪದಗಳು' ಮತ್ತು ಕಾಳೇಗೌಡ ನಾಗವಾರ ಮತ್ತು ಜಿ.ವಿ.ಆನಂದಮೂರ್ತಿ ಅವರು ಸಂಗ್ರಹಿಸಿದ 'ಹಲವು ತೋಟದ ಹೂಗಳು' ಈ ಎರಡೂ ಒಂದೇ(೨೦೦೦) ವರ್ಷದಲ್ಲಿ ಪ್ರಕಟವಾದ ಮಹತ್ವದ ಪ್ರಾತಿನಿಧಿಕ ಸಂಕಲನಗಳು. ಅನೇಕ ಅಜ್ಞಾತ ತತ್ವಪದಕಾರರ ಮತ್ತು ಕರ್ನಾಟಕದ ಎಲ್ಲ ಭಾಗಗಳಲ್ಲಿರುವ ತತ್ವಪದಕಾರರ ಹಾಡುಗಳು ಈ ಸಂಕಲನಗಳಲ್ಲಿ ಸೇರಿರುವುದೊಂದು ವಿಶೇಷ.

ಮೊದಲ ಕೃತಿ ಅನೇಕ ಪಠ್ಯಗಳ ನೆರವಿನಿಂದ ಕನ್ನಡ ಕಾವ್ಯದ ಜೀವಂತಿಗೆ ಅದರ ದೇಶಿಯವಾದ ಹೊಸ ನೆಲೆಗೆ ಒಳಗು ಮಾಡುವ ಮಹತ್ವದ ಉದ್ದೇಶ ಹೊಂದಿದೆ. ಬಹುಮುಖ್ಯವಾಗಿ ಸಾಹಿತ್ಯಕ ಗುಣ ಹೊಂದಿ ಸಾಂಸ್ಕೃತಿಕ ಅಧ್ಯಯನಕ್ಕೆ ಅನುಕೂಲವಾಗುವ ಹಿನ್ನೆಲೆಯಲ್ಲಿ ಇಲ್ಲಿನ ಹಾಡುಗಳನ್ನು ಸೇರಿಸಲಾಗಿದೆ ಎನ್ನುವ ಚರ್ಚೆ ಪ್ರಸ್ತಾವನೆಯಲ್ಲಿದೆ.

ಜಾಗತೀಕರಣದ ಈ ಸಂದರ್ಭದಲ್ಲಿ ಕನ್ನಡದಂತ ಪ್ರಾದೇಶಿಕ ಭಾಷೆಗಳು ತಮ್ಮ ಅಸ್ತಿತ್ವಕ್ಕಾಗಿ ತಡಕಾಡುತ್ತಿವೆ. ತಮ್ಮ ಭೌಗೋಳಿಕ ಭಾಷೆ ಮತ್ತು ಸಂಸ್ಕೃತಿಗಳ ನಾಶವಾಗುವ ಆತಂಕವನ್ನು ವ್ಯಕ್ತಪಡಿಸಿವೆ. ಜನಸಮುದಾಯಗಳಲ್ಲಿ ಬೇರು ಬಿಟ್ಟ ಭಾಷೆ ಮತ್ತು ಸಂಸ್ಕೃತಿಯನ್ನು, ಜ್ಞಾನ ಮೂಲವನ್ನು ಉಳಿಸಿಕೊಳ್ಳುವ ಉಪಾಯವಾಗಿ ತತ್ವಪದಗಳಂಥ ರಚನೆಗಳೂ ಪ್ರಮುಖ ಆಕರವಾಗಿವೆ ಎನ್ನುವ ನಂಬಿಕೆ ಆಧುನಿಕ ಶಿಕ್ಷಿತರಿಗೆ ಬಂದ ಕಾರಣವಾಗಿ ಇವುಗಳ ಅಧ್ಯಯನಕ್ಕೆ ಕೈ ಹಾಕಿದ್ದಾರೆ. ಈ ನೆಲೆಯಲ್ಲಿಯೇ ತತ್ವಪದಗಳನ್ನು ಅದರ ಒಟ್ಟು ಚಾರಿತ್ರಿಕ ಹಿನ್ನೆಲೆಯಲ್ಲಿ ದೀರ್ಘವಾಗಿ ಪ್ರಸ್ತಾವನೆಯಲ್ಲಿ ಚರ್ಚಿಸಲಾಗಿದೆ. ತತ್ವಪದಗಳ ಚಹರೆಗಳು ಬೇರೆ ಬೇರೆ ಭಾಷೆಯಲ್ಲಿರುವುದನ್ನು ಗುರುತಿಸಲಾಗಿದೆ. ಮನಸ್ಸಿನ ಆರೋಗ್ಯ, ಸಹನೆ, ವಿನಯ, ವಿನ್ಯಾಸ, ಧರ್ಮ, ಶಿಕ್ಷಣ, ಭಕ್ತಿ, ತತ್ವ, ವೈರಾಗ್ಯ ಮುಂತಾದವು ತತ್ವಪದಗಳ ಆಸಕ್ತಿಗಳು ಎನ್ನಲಾಗಿದೆ. ಸಾಂಸ್ಥಿಕ ಧರ್ಮ ಸಂಸ್ಥೆಗಳಲ್ಲಿದ್ದವರಿಂದ ಮತ್ತು ವ್ಯವಸ್ಥಿತ

ಶಿಕ್ಷಣ ಪಡೆಯದ, 'ಸುಶಿಕ್ಷಿತ'ರಲ್ಲದವರಿಂದ ರಚನೆಯಾದ ತತ್ವಪದಗಳ ಎರಡು ಧಾರೆಗಳನ್ನು ಗುರುತಿಸಿದ್ದಾರೆ.

ಧಾರ್ಮಿಕ ಸಂಸ್ಥೆಗಳಿಂದ ದೂರವಿದ್ದು ರಚನೆಯಾದ ಹಾಡುಗಳು ಅನುಭವನಿಷ್ಠವಾದವು. ಹಾಗಾಗಿಯೇ ತತ್ವಪದ ಸಾಹಿತ್ಯರೂಪದಂತೆ ಕೇವಲ ಒಂದು ಕಾವ್ಯ ಪ್ರಕಾರವಲ್ಲ, ಅದೊಂದು ಆಚರಣೆಯ ಭಾಗವಾಗಿದೆ. ಬದುಕಿನ ಘಟನೆಗಳೇ ತತ್ವಪದಗಳಿಗೆ ವಸ್ತುವಾಗಿವೆ. ಈ ದೃಷ್ಟಿಯಿಂದ ತತ್ವಪದಗಳನ್ನು ಅನೇಕ ಪಠ್ಯಗಳನ್ನೊಳಗೊಂಡ ಸಂಕೀರ್ಣ ಪಠ್ಯಗಳೆಂದೇ ಭಾವಿಸಬೇಕು ಎನ್ನುತ್ತಾರೆ.

ಹೀಗೆ ಸಂಪಾದನೆಗಳ ತೊಡಕನ್ನು ಚರ್ಚಿಸುತ್ತಾ ಮೌಖಿಕವಾದ ಈ ತತ್ವಪದಗಳನ್ನು ಜನ ಸಮುದಾಯಗಳು ಅಂಕಿತ ಬದಲಿಸಿ ಹಾಡುವ ಮತ್ತು ಅವು ಲಿಖಿತಕ್ಕೆ ಬರುವ ಸಂದರ್ಭದಲ್ಲಿ ವ್ಯತ್ಯಾಸಗಳುಂಟಾಗುತ್ತವೆ. ಈ ದೃಷ್ಟಿಯಿಂದ ಅವುಗಳ ನಿಜಪಾಠವನ್ನು, ಕರ್ತೃತ್ವವನ್ನು ಹುಡುಕುವುದು ವ್ಯರ್ಥ ಪ್ರಯತ್ನ ಎಂಬ ನಿರ್ಣಯಕ್ಕೆ ಬರುತ್ತಾರೆ.

ಇದೇ ದೃಷ್ಟಿಯಿಂದ ಬಂದ 'ಹಲವು ತೋಟದ ಹೂಗಳು' ಕೃತಿಯು ಕರ್ನಾಟಕದ ಎಲ್ಲ ಭಾಗಗಳ ತತ್ವಪದಕಾರರ ರಚನೆಗಳನ್ನು ಒಳಗೊಂಡ ಮತ್ತೊಂದು ವಿಶೇಷ ಕೃತಿಯಾಗಿದೆ. 'ನಾನಾರೆಂಬುದು ನಾನಲ್ಲ' ಎಂಬ ಭಾಗದಲ್ಲಿ ೯೫ ಅಜ್ಞಾತ ತತ್ವಪದಕಾರರು ಮತ್ತು 'ಯಾವ ದೇಶದ ಹೂವಿದ್ದಾವ ಇವು' ಎಂಬ ಭಾಗದಲ್ಲಿ ವಚನಕಾರರ, ದಾಸರ, ರಚನೆಗಳ ಜೊತೆಗೆ ಅನೇಕ ತತ್ವಪದಕಾರರ ರಚನೆಗಳೂ ಸೇರಿವೆ. ಇಲ್ಲಿನ ಹೆಚ್ಚಿನ ಹಾಡುಗಳು ಕ್ಷೇತ್ರಕಾರ್ಯದ ಮೂಲಕ ಸಂಗ್ರಹಿಸಿದ ಮೌಖಿಕ ಹಾಡುಗಳಾಗಿವೆ. ಹೀಗಾಗಿ ಇಲ್ಲಿನ ಬಹುತೇಕ ಹಾಡುಗಳನ್ನು ಜನಪದ ತಾತ್ವಿಕ ಹಿನ್ನೆಲೆಯಿಂದ ಸಂಪಾದಿಸಲಾಗಿದೆ. 'ಜನಪದ ಸಂಸ್ಕೃತಿಯು ಇಂದು ವಿಸ್ಮೃತಿಗೆ ಒಳಗಾಗುತ್ತಿದೆ. ಸ್ಥಳೀಯ ಜ್ಞಾನಸಂಪತ್ತಿನ ಮಹತ್ವ ಮನದಟ್ಟು ಮಾಡಬೇಕಾಗಿದೆ. ಈ ನಿಟ್ಟಿನಲ್ಲಿ ತತ್ವಪದಗಳ ಪಾತ್ರ ಮಹತ್ವದ್ದು'[೧೪] ಎನ್ನುವ ಪ್ರಸ್ತಾವನೆಯ ನುಡಿಗಳನ್ನು ಗಮನಿಸಿದರೆ, ಇವು ಜನಪದ ರಚನೆಗಳು ಎಂದು ಭಾವಿಸಿ ಚರ್ಚಿಸಿದಂತಿದೆ.

ತತ್ವಪದಕಾರರನ್ನು ಜನಪದರ ಹಿನ್ನೆಲೆಯಲ್ಲಿ ನೋಡುವುದನ್ನು ಹಿ.ಶಿ.ರಾಮಚಂದ್ರೇಗೌಡರು ಒಂದೆಡೆ ಆಕ್ಷೇಪಿಸುತ್ತಾರೆ. 'ಭೂಮಿಯಿಂದ ಜನರನ್ನು ಖಾಲಿ ಮಾಡಿಸುವ ಯಾವ ತತ್ವವೂ ಜನಪದತತ್ವ ಚಿಂತನೆ ಆಗುವುದಿಲ್ಲ. ತತ್ವಪದಕಾರರು ಮೇಲುವರ್ಗದ ಜಡ ಮೌಲ್ಯಗಳನ್ನು ಜನಪದ ಧಾಟಿ ಧೋರಣೆಗಳನ್ನು ಬಳಸಿಕೊಂಡು ಹೇಳಹೊರಟಿದ್ದಾರೆ. ಈ ಎಲ್ಲರೂ ಜನಪದ ಧಾಟಿ, ಲಯಗಳನ್ನು ಮೋಹಕವಾಗಿ ಬಳಸಿಕೊಂಡಿದ್ದಾರೆ. ಆದರೆ ತಿರುಳು ಮಾತ್ರ ದೋಖ''[೧೫] ಎನ್ನುವುದು ಮೇಲಿನ ಹೇಳಿಕೆಗೆ ವಿರುದ್ಧವಾಗಿದೆ. ಗೌಡರು ಕೆಲವೇ ತತ್ವಪದಕಾರರ ಘಟನೆಗಳನ್ನು ಆಧರಿಸಿ ಈ ನಿಲುವಿಗೆ ಬರಲು ಸಾಧ್ಯವಿದೆ. ಆದರೆ ಸ್ಥಾವರ ಮೌಲ್ಯಗಳಿಗೆ ದೂರವಿರುವ ಲೋಕದ ದುಃಖವನ್ನು ಶಮನಗೊಳಿಸುವ

ಬಹುದೊಡ್ಡ ಆಶಯವುಳ್ಳ ಇವು ನಿತ್ಯಮಂಗಳಕರಗೊಳಿಸುವ, ಏಕರೂಪ ಸಂಸ್ಕೃತಿಯಿಂದ ಪಾರಾಗುವ ದಾರಿಯನ್ನು ತೋರುವ ರಚನೆಗಳಾಗಿವೆ. ಕಿ.ರಂ.ನಾಗರಾಜರು ಹೇಳುವಂತೆ ಹೊಸಗನ್ನಡದ ಅರುಣೋದಯಕ್ಕೆ ಹೊಸದಾರಿಯನ್ನು ತೋರುವ ಕಾರಣಕ್ಕೆ ಮುಖ್ಯವಾದವು ಎಂಬ ಚರ್ಚೆಯನ್ನು ಗಮನಿಸಬೇಕಾಗಿದೆ.

ಪ್ರಾದೇಶಿಕವಾಗಿಯೂ ತತ್ವಪದಗಳು ಸಂಗ್ರಹವಾಗಿವೆ. ಈ ತರದ ಪ್ರಾದೇಶಿಕ ಸಂಕಲನಗಳು ಯಾಕೆ ನಡೆಯುತ್ತಿವೆ? ಪ್ರತಿಯೊಂದು ಪ್ರದೇಶಕ್ಕೂ ಅದರದ್ದೇ ಆದ ಭೌಗೋಳಿಕ ವಿಶೇಷತೆಗಳಿವೆ ಎಂಬ ಕಾರಣದಿಂದಲೇ? ಅದರಲ್ಲೂ 'ಹೈದ್ರಾಬಾದ್ ಕರ್ನಾಟಕ ಭಾಗದಲ್ಲಿ ತತ್ವಪದಗಳು ಹೆಚ್ಚಾಗಿ ಸೃಷ್ಟಿಯಾಗಿವೆ. ಅಲ್ಲಿನ ರಾಜಕೀಯ, ಆರ್ಥಿಕ, ಸಾಮಾಜಿಕ ಮತ್ತು ಸಾಂಸ್ಕೃತಿಕ ಸಂಬಂಧಗಳು ಸಂಕೀರ್ಣವಾದವು. ಈ ಹಿನ್ನೆಲೆಯಲ್ಲಿ ಈ ಪ್ರಾಂತಕ್ಕೆ ಅದರದೇ ಆದ ಭೌಗೋಳಿಕ, ಪ್ರಾಕೃತಿಕ, ಭಾಷಿಕ, ಸಾಂಸ್ಕೃತಿಕ ಅನನ್ಯತೆ ಇದೆ. ಈ ಎಲ್ಲ ಚಾರಿತ್ರಿಕ ಒತ್ತಡದಲ್ಲಿ ಹುಟ್ಟಿದ ಸಾಹಿತ್ಯದಿಂದ ಹೊಸ ಚರಿತ್ರೆ ಕಟ್ಟಬಹುದು. ಸಾಂಸ್ಕೃತಿಕ ತಿಳುವಳಿಕೆಯನ್ನು ಅರಿಯಬಹುದು ಎನ್ನುವ ಆಶಯದಿಂದ ಬಂದಂತೆ ಪ್ರಸ್ತಾವನೆಯ ವಿವರಣೆಗಳಲ್ಲಿ ಕಾಣುತ್ತವೆ.

ಈ ನಿಟ್ಟಿನಲ್ಲಿ ಬಂದ ಬಸವರಾಜ ಸಬರದ ಅವರು ಸಂಪಾದಿಸಿದ 'ಹೈದರಾಬಾದು ಕರ್ನಾಟಕದ ತತ್ವಪದಗಳು' ಕೃತಿಯು ಮುಖ್ಯವಾದುದು. ಮೌಖಿಕ ಹಾಡುಗಳನ್ನು ಕ್ಷೇತ್ರಕಾರ್ಯದ ಮೂಲಕ ಸಂಗ್ರಹಿಸಿಕೊಡಲಾಗಿದೆ. ಇದು ಈ ಪ್ರದೇಶದ ತತ್ವಪದಗಳ ಜನಪ್ರಿಯ ಸಂಪುಟವೂ ಆಗಿದೆ. ಇದರಿಂದಾಗಿ ಹೈದ್ರಾಬಾದ್ ಕರ್ನಾಟಕ ಪ್ರದೇಶದ ಸೌಹಾರ್ದ ಬದುಕು, ಸಮನ್ವಯ ಆಚರಣೆಗಳನ್ನು ಕಂಡುಕೊಳ್ಳುವ ಆಶಯವುಳ್ಳ ಸಂಕಲನವಾಗಿವೆ. ಜೊತೆಗೆ ರಾಷ್ಟ್ರೀಯ ಭಾವೈಕ್ಯತೆ, ಮತೀಯ ಸಹಿಷ್ಣುತೆ, ಸಾಂಸ್ಕೃತಿಕ ಸಮನ್ವಯತೆಯ ದೃಷ್ಟಿಯಿಂದಲೂ ಮಹತ್ವದ ಸಂಕಲನವಾಗಿದೆ ಎಂದು ಚರ್ಚಿಸುತ್ತಾರೆ.

ತತ್ವಪದಗಳ ಅರ್ಥ, ಪರಂಪರೆ, ಅವುಗಳ ಅನುಭಾವ ಈ ಕುರಿತಾದ ಚರ್ಚೆಯನ್ನೂ ನಡೆಸಲಾಗಿದೆ. ತತ್ವಪದ ಸಾಹಿತ್ಯವನ್ನು ಶಿಷ್ಟ ಮತ್ತು ಜಾನಪದ ಪರಂಪರೆಯಲ್ಲಿ ಸೇರಿಸಿ ಚರ್ಚಿಸುತ್ತಾರೆ. ಶಿಷ್ಟ ಸಾಹಿತ್ಯದ ಮೇಲೆ ಜಾನಪದ, ಜಾನಪದ ಸಾಹಿತ್ಯದ ಮೇಲೆ ಶಿಷ್ಟದ ಪ್ರಭಾವವಿರುವುದನ್ನು ಗುರುತಿಸುತ್ತಾರೆ. ಈ ಎರಡು ಸಂಸ್ಕೃತಿಯಲ್ಲಿ ಕೊಡುಕೊಳ್ಳುವಿಕೆಯ ಅಂಶವನ್ನು ಚರ್ಚಿಸಲಾಗಿದೆ. ವಸಾಹತುಶಾಹಿ ಹಿನ್ನೆಲೆಯಲ್ಲಿಯೂ ಈ ತತ್ವಪದ ರಚನೆಗಳನ್ನು ಚರ್ಚಿಸಲಾಗಿದೆ. ಮೂರು ರೀತಿಯ ವಸಾಹತುಶಾಹಿಗೆ ತತ್ವಪದಗಳು ಎದುರಾಗಿರುವುದನ್ನು ಗುರುತಿಸುತ್ತಾರೆ. ಒಂದು ಚಾತುರ್ವರ್ಣ ವ್ಯವಸ್ಥೆಯ ಸಾಂಸ್ಕೃತಿಕ ವಸಾಹತುಶಾಹಿ. ಎರಡನೆಯದು ಬ್ರಿಟಿಷ್ ವಸಾಹತುಶಾಹಿ. ಮೂರು ಮನಸ್ಸಿನ ಸ್ವಾರ್ಥದ ವಸಾಹತುಶಾಹಿ. ಆದರೆ ತತ್ವಪದಕಾರರು ಈ ಮೂರನೇ ವಸಾಹತುಶಾಹಿಗೆ ಗಮನ ಕೊಟ್ಟರು ಎನ್ನುವ ಪ್ರತಿಪಾದನೆ ಸಬರದ ಅವರದು. ಈ ಹೇಳಿಕೆ ತತ್ವಪದಕಾರರ ಹೋರಾಟವನ್ನು ಒಂದು ಮಿತಿಗೆ ಒಳಪಡಿಸಿ

ಚರ್ಚಿಸಿದಂತೆ ಕಾಣುತ್ತದೆ. ಆದರೆ ಈ ಸಂಕಲನದ ಕಡಕೋಳ ಮಡಿವಾಳಪ್ಪ, ಮರಕುಂದಿ ಬಸವಣ್ಣಪ್ಪ, ವಡಕಿತಾತಪ್ಪಯ್ಯ ಮುಂತಾದವರ ರಚನೆಗಳಲ್ಲಿ ಎಲ್ಲ ಬಗೆಯ ಪ್ರತಿರೋಧಗಳಿರುವುದನ್ನು ಕಾಣಬಹುದು.

ಮೌಖಿಕ/ಜಾನಪದ ಹಿನ್ನೆಲೆಯಲ್ಲಿನ ಹಾಡುಗಳ ಸಂಪಾದನೆ ಇದಾದ್ದರಿಂದ ಹಾಡುಗಳ ಪಾಠಪರಿಷ್ಕರಣ, ಶುದ್ಧೀಕರಣಕ್ಕೆ ತೊಡಗದೆ ಲಭ್ಯವಿರುವ ಪಾಠಗಳಲ್ಲಿ ಸರಿ ಎನಿಸಿದ್ದನ್ನು ಹಾಡುಗಳ ಆಶಯಕ್ಕೆ ಧಕ್ಕೆ ಬರದೇ ಸಂಗ್ರಹಿಸಿರುವುದು ಚರ್ಚೆಯಲ್ಲಿ ಕಂಡುಬರುತ್ತದೆ. ಕವಿಗಳ ಕಾಲದ ಅಂತರದಿಂದ ಕೆಲವು ಹಾಡುಗಳ ಸಂಪಾದನಾ ತೊಡಕುಗಳನ್ನು ನಿವಾರಿಸಿಕೊಂಡಿರುವುದು ಕಾಣುತ್ತದೆ. ಆದರೆ ಇದು ಯೋಚಿಸಬೇಕಾದ ವಿಷಯವಾಗಿದೆ.

ಒಟ್ಟಾರೆ ಈ ಪ್ರಸ್ತಾವನೆಗಳಲ್ಲಿ ತತ್ವಪದಕಾರರ ಕಾಲ, ದೇಶಾದಿ ಚರ್ಚೆಗಳು, ಅವರ ಜೀವನ ಕೃತಿಗಳು, ಗುರುಪರಂಪರೆ, ಪ್ರಭಾವ, ಪ್ರೇರಣೆ, ಪ್ರಾದೇಶಿಕ ಹಿನ್ನೆಲೆ ಈ ಮುಂತಾದ ಅಂಶಗಳೇ ಹೆಚ್ಚಾಗಿ ಚರ್ಚಿಸಲಾಗಿದೆ. ಸಾಹಿತ್ಯಕವಾಗಿ ಅವರ ಹಾಡುಗಳಲ್ಲಿ ಭಕ್ತಿ, ವೈರಾಗ್ಯ, ಕೈವಲ್ಯ, ಮುಖ್ಯವಾಗಿ ಅನುಭಾವ, ಭಾಷೆಯ ಬೆಡಗು, ಆಯಾ ಸಾಮಾಜಿಕ ಸಂದರ್ಭಕ್ಕೆ ತೋರಿದ ಪ್ರತಿಕ್ರಿಯೆಗಳನ್ನು ಏಕಮುಖಿ ನೆಲೆಯಲ್ಲಿ ವಿಶ್ಲೇಷಿಸಲಾಗಿದೆ.

## ೪.೩. ವಿಮರ್ಶಾ ಲೇಖನಗಳು

ತತ್ವಪದ ಕುರಿತ ಅನೇಕ ವಿಷಯಗಳ ಹಿನ್ನೆಲೆಯಲ್ಲಿ ಬಿಡಿ, ಬಿಡಿ ಲೇಖನಗಳು ಬಂದಿವೆ. ಹೆಚ್ಚಿನ ಲೇಖನಗಳು (ಅಭಿನಂದನ ಗ್ರಂಥ ಮತ್ತು ಸ್ಮರಣ ಸಂಚಿಕೆಯಲ್ಲಿನ) ತತ್ವಪದಕಾರರ ಕಾಲ, ಜೀವನ, ಕೃತಿಗಳ ಸಮೀಕ್ಷೆ ಕುರಿತೇ ಬಂದಿವೆ. ಈ ಭಾಗದಲ್ಲಿ ಈ ವಿಷಯಗಳ ಕುರಿತು ಚರ್ಚಿಸದೇ (ಯಾಕೆಂದರೆ ಇದೇ ಅಧ್ಯಾಯದ ಭಾಗ-೨ರಲ್ಲಿ ಈ ಕುರಿತಂತೆ ಚರ್ಚಿಸಲಾಗಿದೆ) ತತ್ವಪದಗಳನ್ನು ಕುರಿತು ಬಂದ ಅನುಭಾವದ ಹಿನ್ನೆಲೆಯ ಮತ್ತು ವಸಾಹತುಶಾಹಿಗೆ ತೋರಿದ ಪ್ರತಿಕ್ರಿಯೆಯ ಲೇಖನಗಳನ್ನು ಒಟ್ಟಾಗಿಯೂ, ಬಿಡಿಯಾಗಿಯೂ ಬಂದ ಸಮಾಜದರ್ಶನ, ಸೌಹಾರ್ದತೆ, ಜಾತ್ಯತೀತತೆ, ಛಂದಸ್ಸು, ಭಾಷೆ ಮುಂತಾದ ನೆಲೆಯಲ್ಲಿನ ಲೇಖನಗಳನ್ನು ಈ ಭಾಗದಲ್ಲಿ ವಿಮರ್ಶಾತ್ಮಕ ಸಮೀಕ್ಷೆಗೆ ಒಳಪಡಿಸಲಾಗಿದೆ.

**ತತ್ವಪದಗಳಲ್ಲಿ ಅನುಭಾವ ಕುರಿತ ಚರ್ಚೆ :** ಅನುಭಾವ ಮಾನವನ ವಿಕಾಸದ ಜೊತೆಗೆ ನಡೆದು ಬಂದುದು. ಅದು ಎಲ್ಲ ಧರ್ಮತತ್ವಗಳ ಮೂಲ ಸ್ರೋತ್ರವಾಗಿದೆ. ಒಂದೊಂದು ಮತ-ಧರ್ಮ-ದರ್ಶನ ಸಿದ್ಧಾಂತಗಳಲ್ಲಿ ಬೆಳೆದು ಬಂದಿದೆ. ವಿಭಿನ್ನ ಅರ್ಥವಲಯಗಳನ್ನು ಒಳಗೊಂಡಿದ್ದರೂ ಅದರ ಗುರಿ ಒಂದೇ ಆಗಿದೆ ಎಂದು ವಿದ್ವಾಂಸರು ಚರ್ಚಿಸಿದ್ದಾರೆ. ಹಾಗೆ ಕನ್ನಡ ತತ್ವಪದಗಳಲ್ಲಿನ ಅನುಭಾವಿಕ ದೃಷ್ಟಿಕೋನ ಇದಕ್ಕಿಂತ ಭಿನ್ನವೇನಲ್ಲ. ಅದು ಹಿಂದಿನದರ ಸರಳೀಕೃತ ಪುನರ್‌ನಿರೂಪಣೆ ಆಗಿದೆ ಎಂಬ ಹಿನ್ನೆಲೆಯಲ್ಲಿಯೇ ಬಹುತೇಕ ತತ್ವಪದಗಳ (ತತ್ವಪದಕಾರರ) ಅನುಭಾವದ ಚರ್ಚೆಯನ್ನು ಮಾಡಲಾಗಿದೆ.

ಆದರೆ ಎಚ್.ಎಸ್.ಶಿವಪ್ರಕಾಶ್, ಕಿ.ರಂ.ನಾಗರಾಜ, ರಹಮತ್ ತರೀಕೆರೆ, ಓ.ಎಲ್.ನಾಗಭೂಷಣ ಸ್ವಾಮಿ ಮತ್ತು ಜಿ.ವಿ.ಆನಂದಮೂರ್ತಿ ಅವರು ತತ್ವಪದಗಳ, ಅನುಭಾವಿಗಳ ಕುರಿತ ಆನುಭಾವಿಕ ಚರ್ಚೆಯನ್ನು ವಿಭಿನ್ನವಾಗಿ ಮಾಡಿದ್ದಾರೆ. ಮುಂದೆ ಈ ಕುರಿತು ಚರ್ಚಿಸಲಾಗಿದೆ.

ಒಬ್ಬೊಬ್ಬ ತತ್ವಪದಕಾರರ, ಶಿಶುನಾಳ ಶರೀಫ್(ಸಾ.ಶಿ.ಮರುಳಯ್ಯ) ಕಡಕೋಳ ಮಡಿವಾಳಪ್ಪ (ವಿಜಯಶ್ರೀ ಸಬರದ), ನಿಜಗುಣ ಶಿವಯೋಗಿ, (ಬಸವರಾಜ ಪಿ.,ಸಿದ್ಧಾಶ್ರಮ), ಮುಪ್ಪಿನ ಷಡಕ್ಷರಿ (ಷಣ್ಮುಖಯ್ಯ ಅಕ್ಕೂರಮಠ), ಸರ್ಪಭೂಷಣ ಶಿವಯೋಗಿ, ಕೂಡಲೂರು ಬಸವಲಿಂಗಶರಣ (ಸ.ಸ.ಮಾಳವಾಡ) ಮುಂತಾದವರ ಆನುಭಾವಿಕ ಅಭಿವ್ಯಕ್ತಿಯ ವಿಶಿಷ್ಟತೆಯನ್ನು ಕುರಿತು ಬಿಡಿಯಾಗಿ ಚರ್ಚಿಸಲಾಗಿದೆ. ''ಜಾಣನು ಲೌಕಿಕ ಪರಮಾರ್ಥವೆರಡನ್ನು ಮಾಣದೆ ಕೂಡಿ ನಡೆಸಿತಿಹ ನಿಂತು'' ಎಂಬ ಭಾವದಲ್ಲಿ ದೇವೇಂದ್ರ ಕುಮಾರ ಹಕಾರಿ ಅವರು ನಿಜಗುಣರ ಹಾಡುಗಳಲ್ಲಿನ ಆನುಭಾವಿಕ ಚರ್ಚೆಯನ್ನು ಮಾಡಿದ್ದಾರೆ. ಹಾಗೆಯೇ ಗುರುಭಕ್ತಿ, ಸದಾಚಾರ, ಜ್ಞಾನ, ವೈರಾಗ್ಯ ಇವು ಈ ಅನುಭಾವಿಯ ಮುಖ್ಯ ಲಕ್ಷಣ ಎಂದೂ ಚರ್ಚಿಸಲಾಗಿದೆ. ಮುಪ್ಪಿನ ಷಡಕ್ಷರಿಯನ್ನು ಇದೇ ನೆಲೆಯಲ್ಲಿಯೇ ನೋಡಲಾಗಿದೆ. ಶರೀಫರ ಆನುಭಾವಿಕ ನೆಲೆಗೆ ಅದ್ವೈತ, ಶಾಕ್ತ, ನಾಥ, ಸಾಂಖ್ಯ ದರ್ಶನದ ಬೇರುಗಳು ಹೇಗೆ ಮೂಲವಾಗಿವೆ ಎಂಬ ನೆಲೆಯಲ್ಲಿ ಚರ್ಚಿಸಲಾಗಿದೆ.[೯] ಗುಬ್ಬಣ್ಣವರ ವೀರಶೈವದ ಹಿನ್ನೆಲೆಯಲ್ಲಿಯೂ/ ವಚನಕಾರರ ಪ್ರಭಾವದ ನೆಲೆಯಲ್ಲಿ 'ಭಕ್ತಿತತ್ವದ' ಪ್ರತಿಪಾದಕರಂತೆ ಅವರ ಆಧ್ಯಾತ್ಮಿಕ ನೆಲೆಯನ್ನು ಗುರುತಿಸುತ್ತಾರೆ. ಕಡಕೋಳ ಮಡಿವಾಳಪ್ಪ ಮತ್ತು ಶರೀಫ ಕುರಿತಂತೆ ಅವರು ಬದುಕಿದ ಕಾಲದ ಅಂತರ, ಸಾಂಸ್ಕೃತಿಕ ಸಂದರ್ಭ ಭಿನ್ನವಾಗಿದ್ದರೂ ಅವರ ರಚನೆಗಳಲ್ಲಿನ ಅನುಭಾವದ ಆಶಯ ಮಾತ್ರ ಒಂದೇ ಆಗಿರುವುದನ್ನು ವಿಜಯಶ್ರೀ ಸಬರದ ಅವರು ಗುರುತಿಸುತ್ತಾರೆ. (ಕಡಕೋಳ ಮಡಿವಾಳಪ್ಪ ಹಾಗೂ ಶಿಶುನಾಳ ಷರೀಫರ ಹಾಡುಗಳಲ್ಲಿ ಅನುಭಾವದ ಅಭಿವ್ಯಕ್ತಿ) ಜನತೆಯ ಬದುಕಿನ ಅಸ್ಥಿರತೆಗೆ ಕಾರಣಗಳನ್ನು ಅದರಿಂದ ಬಿಡುಗಡೆ ಪಡೆಯುವ ಮಾನಸಿಕ ಗಟ್ಟಿತನವನ್ನು ಹೇಗೆ ರೂಢಿಸಿದರು ಎಂಬುದನ್ನು ಚರ್ಚಿಸಿದ್ದಾರೆ. ಇಂತಲ್ಲಿ ಶರೀಫರಂತವರು ಕಡಕೋಳ ಮಡಿವಾಳಪ್ಪನವರಿಗಿಂತ ಭಿನ್ನವೂ ಆಗಿರುವುದನ್ನು ಗುರುತಿಸುತ್ತಾರೆ. ಹೀಗೆ ಪರಸ್ಪರ ಭಿನ್ನತೆಯಿಂದ (ಆಯ್ದ) ಕೆಲವೇ ರಚನೆಗಳ ಮೂಲಕ ತತ್ವಪದಕಾರರನ್ನು ಭಾವುಕ ನೆಲೆಯಲ್ಲಿ ಅರ್ಥೈಸುವ ಪ್ರಯತ್ನಗಳೂ ನಡೆದಿವೆ. ಈ ಭಾವುಕತೆ, ಪಕ್ಷಪಾತದ ಧೋರಣೆ ಅನುಭಾವಿಗಳ ನಿಜದ ನೆಲೆ ತೋರಿಸುತ್ತದೆಯೇ? ಯಾಕೆಂದರೆ ಕಿ.ರಂ.ನಾಗರಾಜ ಅವರು ಹೇಳುವಂತೆ 'ಈ ಅನುಭಾವಿ ಅಭಿವ್ಯಕ್ತಿಕಾರರ ವಲಯ ತುಂಬಾ ವ್ಯಾಪಕವಾದದ್ದು, ಕನ್ನಡ ಸಂಸ್ಕೃತಿಯ ಸಂದರ್ಭದಲ್ಲಿ ಒಬ್ಬೊಬ್ಬ ಅಭಿವ್ಯಕ್ತಿಕಾರನ ಸ್ಥಾನ ನಿರ್ದೇಶನ ಮಾಡುವುದು ತುಂಬಾ ಜಟಿಲವಾದುದು. ಒಬ್ಬೊಬ್ಬ ಅಭಿವ್ಯಕ್ತಿಕಾರನಿಗೂ ತನ್ನದೇ ಆದ ಒತ್ತಡವಿದ್ದೂ ಸಾಮುದಾಯಿಕ ಪ್ರಜ್ಞೆಯ ಒಟ್ಟು ಸಂದರ್ಭಕ್ಕೆ ಪ್ರತಿಕ್ರಿಯಿಸುವವರೂ ಆಗಿದ್ದಾರೆ. ಅನುಭಾವ, ಅನುಭಾವದ ವಿಚಾರ.

ದೇವರು, ಧರ್ಮಗಳ ಬಗೆಗೆ ಇವರೆಲ್ಲರ ನಿಲುವು ಒಂದೇ ಆಗಿಲ್ಲ. ಮಿಗಿಲಾಗಿ ತಾವು ನೆಲೆಗೊಂಡ ಸಾಮಾಜಿಕ ಸಂದರ್ಭ ಎದುರಾಗುವ ಸಮಸ್ಯೆಗಳ ಒತ್ತಡ ಅವರು ಈ ನೆಲೆಗಳನ್ನು ನಿರ್ವಚಿಸಿಕೊಳ್ಳುವ ರೀತಿಗೆ ಕಾರಣವಾಗುತ್ತದೆ. ಹೀಗಾಗಿ ಈ ಕಾಲಮಾನದ ಅನುಭಾವಿ ಅಭಿವ್ಯಕ್ತಿ ಸಾಮಾನ್ಯೀಕರಿಸಲು ಸಾಧ್ಯವಿಲ್ಲದ್ದು."[೧೭]

ಎಂ.ಎಂ.ಕಲಬುರ್ಗಿ ಅವರು ತತ್ವಪದಕಾರರ ಸಾಹಿತ್ಯವನ್ನು ಆತ್ಮಸಾಹಿತ್ಯವೆಂದು ಚರ್ಚಿಸುತ್ತಾರೆ. (ಕನ್ನಡದಲ್ಲಿ ಅನುಭಾವ ಸಾಹಿತ್ಯ) ಅಂದರೆ ಆತ್ಮವನ್ನು 'ಅಧಿ'ಗೊಳಿಸುವುದರ ಪ್ರತಿಪಾದನೆ ಇದೆ. ಹಾಗಾಗಿ ತತ್ವಪದಕಾರರ ಸಾಹಿತ್ಯ' ಅನುಭಾವ ಸಾಹಿತ್ಯವಲ್ಲ 'ಆತ್ಮಸಾಹಿತ್ಯ' ಎನ್ನುತ್ತಾರೆ. 'ವೈಯಕ್ತಿಕ ಪ್ರಜ್ಞೆ ಮತ್ತು ಸಾಮಾಜಿಕ ಪ್ರಜ್ಞೆ ಹೊಂದಿರುವುದೇ ಅನುಭಾವ ಸಾಹಿತ್ಯ' ಎಂದು ಅನುಭಾವ ಕುರಿತು ಡೆಫಿನೇಷನ್ ಕೊಡುತ್ತಾರೆ. ಶರಣರ ಸಾಹಿತ್ಯ ಇದಕ್ಕೆ ಉತ್ತಮ ನಿದರ್ಶನವೆನ್ನುತ್ತಾರೆ. ತತ್ವಪದಕಾರರು ಅದರಲ್ಲೂ ಶರೀಫರನ್ನು ಕುರಿತು 'ಹೇಳುವುದು ಸದಾಚಾರ, ಬಾಳುವುದು ವಾಮಾಚಾರ'[೧೮] ಎನ್ನುವ ಕಟುನುಡಿಯನ್ನೇ ಆಡುತ್ತಾರೆ. ಶರೀಫರ "ಗುಡಿಯ ನೋಡಿರಣ್ಣ ದೇಹದ ಗುಡಿಯ ನೋಡಿರಣ್ಣ" ಎಂಬ ಹಾಡು ಮಾನವ ಶರೀರ ತುಚ್ಛ ಅಲ್ಲ, ಹೀನ ಅಲ್ಲ ಅದನ್ನು ಸಾರ್ಥಕಗೊಳಿಸಿಕೊಳ್ಳಬೇಕು ಎಂಬುದನ್ನಾಗಲಿ, "ತನ್ನ ತಾ ತಿಳಿಯುವ" ಆತ್ಮಜ್ಞಾನದ ಹಾದಿಯಾಗಲಿ "ಬಾಯಲಿ ಬ್ರಹ್ಮವ ಬೊಗಳಿದರೇನು" ಎಂದು ಡಾಂಬಿಕ ಕ್ರಿಯಾಚರಣೆಗಳನ್ನು ನಿರಾಕರಿಸುವುದಾಗಲಿ ಇವೆಲ್ಲ ಸಾಮಾಜಿಕ ಪ್ರಜ್ಞೆಯಲ್ಲವೆ? ಎಲ್ಲ ಸಾಮಾಜಿಕ ಹಿನ್ನೆಲೆಯಿಂದ ಬಂದವರಾದ ಕಡಕೋಳ ಮಡಿವಾಳಪ್ಪ, ಕೂಡಲೂರು ಬಸವಲಿಂಗ, ಕೈವಾರ ನಾರಾಯಣಪ್ಪ, ಪೀರ ಸಾಹೇಬರು, ಶಂಕರಾನಂದ ಬಾಲಲೀಲಾ ಮಹಾಂತ ಮುಂತಾದ ತತ್ವಪದಕಾರರೆಲ್ಲ ಸಮಾಜದಲ್ಲಿನ ಜಾತಿ, ಅಧಿಕಾರ, ಜನನ-ಮರಣ, ಮಡಿ-ಮೈಲಿಗೆ ಧರ್ಮದ ಡಾಂಬಿಕತೆ, ವ್ಯಾಮೋಹ ಇವೆಲ್ಲ ಸ್ವಸ್ಥ ಸಾಮಾಜಿಕ ಜೀವನಕ್ಕೆ ಹೇಗೆ ಅಡ್ಡಿಯಾಗಿವೆ ಎಂದು ಪ್ರತಿಭಟಿಸಿದ್ದಾರೆ. ಇವುಗಳ ಮೇಲೆ ಉರಿವ ನಾಲಗೆಯನ್ನೇ ಹರಿಯಬಿಟ್ಟಿದ್ದಾರೆ. ಅಲ್ಲದೆ ಶರೀಫರಂತವರು "ಪಂಚಮಿ ಹಬ್ಬ, ಎಲ್ಲಮ್ಮನ ಜಾತ್ರೆ, ಬೆಣ್ಣೆ ಮಾರಾಟ, ಗಿರಣಿ ವಿಸ್ತಾರ, ತಿಗಣೆಕಾಟ, ಬ್ರಹ್ಮಾಂಡವೆಲ್ಲ ತುಂಬಿಕೊಂಡಿರುವ ಕುಂಬಾರ, ಮರಣಕ್ಕೆ ಒಳಗಾಗುವ ಹರಕೆಯ ಕುರಿ' ಈ ಎಲ್ಲವುಗಳ ಬಗ್ಗೆ ಶಿವಪ್ರಕಾಶ್ ಹೇಳುವಂತೆ 'ತತ್ವಪದಕಾರರು ಮನದುಂಬಿ ಹಾಡಿದ ಹಾಗೆ ಬಸವಾದಿ ಶರಣರು ಹಾಡುವುದನ್ನು ಊಹಿಸುವುದೂ ಕಷ್ಟ.'[೧೯] ಇವೆಲ್ಲ ಸಾಮಾಜಿಕ ಅಂಶಗಳಲ್ಲವೇ? ಇವನ್ನು ಯಾಕೆ ಗ್ರಹಿಸುವುದಿಲ್ಲ.

ತತ್ವಪದಕಾರರನ್ನು ಭಿನ್ನವಾಗಿ ನೋಡಿದ ಆಲೋಚನೆಗಳು ಇವೆ. ಎಚ್.ಎಸ್. ಶಿವಪ್ರಕಾಶ್ ಅವರು ಆಧುನಿಕ ರಾಜಕೀಯ ಪ್ರಜ್ಞೆ ಮತ್ತು ಗತಕಾಲದ ಚಾರಿತ್ರಿಕ ಪ್ರಜ್ಞೆಯ ಹಿನ್ನೆಲೆಯಲ್ಲಿ ತತ್ವಪದಕಾರರನ್ನು ವಿವರಿಸುತ್ತಾರೆ. 'ಜಗತ್ತು ಧರ್ಮದ್ವೇಷದ ಕೊಂಡ ಹಾಯುತ್ತಿರುವ ಇವತ್ತಿನ

ಸಮಸ್ಯೆಗಳಿಂದ ತತ್ವಪದಕಾರರ ನಾನತ್ವವನ್ನು ಒಪ್ಪುವ ಏಕತ್ವದ ಕಲ್ಪನೆ ಒಂದು ಒಳ ದಾರಿಯನ್ನು ತೋರಬಲ್ಲದೇ?'[೨೦] ಎಂಬಲ್ಲಿ ಕೆಳಸ್ತರದ ಅಂಚಿಗೆ ದೂಡಲ್ಪಟ್ಟ ಸಮುದಾಯಗಳನ್ನು ಅನುಭಾವಿಗಳ ಈ ಅನುಭಾವಿಕ ಚಿಂತನೆಗಳ ಮೂಲಕ ಆಧುನಿಕ ಬದುಕಿಗೆ ಸೆಳೆಯುವ ತುಡಿತವಿದೆ. ಇದನ್ನು ಸಂಕೀರ್ಣ ಆಯಾಮಗಳಿಂದ ವಿವೇಚಿಸಬೇಕಾಗಿದೆ.

ಕಿ.ರಂ.ನಾಗರಾಜ ಅವರು 'ಈ ಕಾಲದ ಅನುಭಾವ ಸಾಹಿತ್ಯ ಲೇಖನದಲ್ಲಿ' ಅನುಭಾವಿ ರಚನೆಗಳು ಧರ್ಮಾತೀತವಾದ ಧ್ಯಾನಶೀಲ ರಚನೆಗಳು ಎನ್ನುತ್ತಾರೆ. ಧ್ಯಾನಶೀಲ ಆಶಯವನ್ನು ಪ್ರಕಟಿಸುವ ಕ್ರಿಯೆಯನ್ನು ತತ್ವಪದಗಳಲ್ಲಿ ಗುರುತಿಸಲು ಸಾಧ್ಯವಿದೆ ಎಂದು ಪ್ರತಿಪಾದಿಸುತ್ತಾರೆ. ಈ ರಚನೆಗಳಲ್ಲಿಯ ಸಂಕೇತ, ವಿಧಾನ, ರೂಪಕ ನಿರ್ಮಿತಿಗಳು ಸಾಂಪ್ರದಾಯಿಕ ಕಾವ್ಯ ಪ್ರತಿಮೆಗಳಿಗಿಂತ ಹೇಗೆ ಭಿನ್ನ ಸ್ವರೂಪ ಹೊಂದಿವೆ ಎಂಬುದನ್ನು ಚರ್ಚಿಸುತ್ತಾರೆ. ಪ್ರಭುತ್ವ ವಿರೋಧಿ ನೆಲೆಯ ತತ್ವಪದಗಳು ಮೇಲ್ನೋಟಕ್ಕೆ ಬದುಕಿಗೆ ವಿಮುಖವಾದಂತೆ ಅನ್ನಿಸಿದರೂ, ಅಂತರ್ಯದಲ್ಲಿ ಹೇಗೆ ಅವು ಆಂತರಿಕ ಮತ್ತು ಬಾಹ್ಯ ಜಗತ್ತಿನ ಘರ್ಷಣೆಯಿಂದ ಸೃಷ್ಟಿಯಾಗಿವೆ ಮತ್ತು ವರ್ತಮಾನಕ್ಕೆ ಹೇಗೆ ಲಗತ್ತಾಗುತ್ತವೆ ಎಂದು ಅವುಗಳ ಅನುಭಾವದ ವಿಶಾಲ ಭಿತ್ತಿಯನ್ನು ಪರಿಚಯಿಸಿದ್ದಾರೆ.

ತತ್ವಪದಗಳ ಅನುಭಾವದ ಹಿನ್ನೆಲೆ, ಅವು ಉಸಿರಾಡುವ ವಾತಾವರಣ ಮತ್ತು ಸಮುದಾಯ ಗಳಲ್ಲಿ ಅವು ಬೀರಬಹುದಾದ ನೇರ ಪರಿಣಾಮವನ್ನು ಕುರಿತು ಜಿ.ವಿ.ಆನಂದಮೂರ್ತಿ ಚರ್ಚಿಸುತ್ತಾರೆ. ವೈದಿಕ ಧರ್ಮದ ಅನುಭಾವ ತಮ್ಮ ಮತಾಂಧ ನೆಲೆಯನ್ನು ಬಿಟ್ಟುಕೊಡದೇ ವಿವರಿಸುವಂತದ್ದು. ಆದರೆ ತತ್ವಪದಕಾರರದು ಸಾಮಾಜಿಕ ಕಟ್ಟಕಡೆಯ ಮನುಷ್ಯನ ಉನ್ನತಿಯನ್ನು ಕುರಿತದ್ದು ಆಗಿದೆ ಎನ್ನುತ್ತಾರೆ.

ರಹಮತ್ ತರೀಕೆರೆ ಅವರು ಈ ಅನುಭಾವಿ ಅಧ್ಯಯನಗಳು, ಅನುಭಾವಿ ಪಂಥಗಳ ಆಚರಣೆ, ತಾತ್ವಿಕತೆ, ಸಾಹಿತ್ಯಗಳ ಒಳಗೆ ಇರುವ ಅನೇಕ ವೈರುಧ್ಯಗಳನ್ನು ಬಿಟ್ಟುಕೊಟ್ಟ ಪ್ರಮೇಯಗಳನ್ನು ಮಂಡಿಸುತ್ತಾರೆ. ಜಾತಿ-ಭೇದ ನಿರಾಕರಿಸಿದ ಸಂತರನ್ನು ಜಾತಿಯ ಗುರುತಾಗಿ ಬಂಧಿಸುವುದು, ಚರಿತ್ರೆಯ ಸಂಗತಿಗಳನ್ನು ಕೇವಲ ಸಂಕೇತಗಳಾಗಿ ಮಾಡಿಕೊಂಡಿರುವುದು. ಆಧುನಿಕತೆ ವಿರೋಧಿಸುವ ದೇಶಿವಾದಿಗಳು ಸಮುದಾಯಗಳ ಸಾಮಾಜಿಕ, ಆರ್ಥಿಕ ಸ್ಥಿತಿ-ಗತಿಯನ್ನು ಪರಿಗಣಿಸದಿರುವುದು. ಸಂತರ ಜಾತ್ರೆ, ಉರುಸುಗಳ ಆಚರಣೆಗಳಲ್ಲಿ ಸ್ತ್ರೀಯರನ್ನು ಕುರಿತ ಪಕ್ಷಪಾತ, ಉಳಿಗಮಾನ್ಯ ವ್ಯವಸ್ಥೆಯ ಛಾಯೆ ಇರುವುದನ್ನು ಅಧ್ಯಯನಗಳು ಯಾಕೆ ಚರ್ಚಿಸುವುದಿಲ್ಲ ಎಂಬುದನ್ನು ಪ್ರಶ್ನಿಸುತ್ತಾರೆ. ಅನುಭಾವಿ ಅಧ್ಯಯನಗಳಲ್ಲಿ ಇಂತಹ ವೈರುಧ್ಯಗಳನ್ನು ಬಿಟ್ಟುಕೊಡುವುದು ಚಾರಿತ್ರಿಕ ದೋಷ ಮಾತ್ರವಲ್ಲ, ಗಂಭೀರವಾದ ಸೈದ್ಧಾಂತಿಕ ರಾಜಕೀಯ ಸಮಸ್ಯೆ ಎಂದು ಚರ್ಚಿಸುತ್ತಾರೆ.

ಈ ಹಿನ್ನೆಲೆಯಲ್ಲಿ ವಿವರಿಸುವುದಾದರೆ ಭಕ್ತಿಪಂಥ, ತತ್ವಪದಕಾರರಂಥ ಅನುಭಾವಿಪಂಥಗಳನ್ನು ಭಾವುಕರಾಗಿ ಸಾಮರಸ್ಯವಾದಿ ನಿಲುವಿನಲ್ಲಿ ನೋಡದೇ, ಸಂತರನ್ನು ಆಚರಣಾತ್ಮಕ ಹಿನ್ನೆಲೆಯಲ್ಲಿ,

ವರ್ತಮಾನದ ನಿಷ್ಠುರ ರಾಜಕೀಯ ಪ್ರಜ್ಞೆಯಲ್ಲಿ ಮುಖಾಮುಖಿ ಮಾಡಬೇಕಾದ ಅನಿವಾರ್ಯತೆ ಕಾಣಿಸುತ್ತದೆ.

ತತ್ವಪದಗಳ ಒಟ್ಟು ರಚನೆಗಳನ್ನು ಬೇರೆ ಪಂಥಗಳ ಅನುಭಾವದ ಹಿನ್ನೆಲೆಯಲ್ಲಿ ಚರ್ಚಿಸಿರುವುದು ಕಾಣುತ್ತದೆ. ಅಲ್ಲದೆ ತತ್ವಪದಕಾರರ ಮತ್ತು ದಾಸರ, ತತ್ವಪದಕಾರರ ಮತ್ತು ಶರಣರ, ತತ್ವಪದಕಾರರ ಮತ್ತು ಸೂಫಿಗಳ ಹಿನ್ನೆಲೆಯಲ್ಲಿ ಅನುಭಾವದ ಚರ್ಚೆಗಳು ನಡೆದಿವೆ. ಇಲ್ಲಿ ತತ್ವಪದಕಾರರ ಅನುಭಾವ, ಶರಣರ, ದಾಸರ, ಸೂಫಿಗಳ ತತ್ವಗಳಿಗೆ ಹೇಗೆ ಸಮನಾಗಿದೆ ಮತ್ತು ಯಾವ ರೀತಿಯಲ್ಲಿ ಭಿನ್ನವಾಗಿದೆ ಎಂಬುದನ್ನು 'ಕನ್ನಡ ಸಾಹಿತ್ಯ ಮತ್ತು ಅನುಭಾವ : ತಾತ್ವಿಕ ನೆಲೆಗಳು'(ಮಲ್ಲಿಕಾರ್ಜುನ ಸಿಂಧಗಿ), 'ತತ್ವಪದಗಳಲ್ಲಿ ಅನುಭಾವ'(ವಿ.ಜಿ.ಪೂಜಾರ), 'ತತ್ವಪದಕಾರರ ಅನುಭಾವದಲ್ಲಿ ಸಾಮಾಜೋಧಾರ್ಮಿಕ ಸಾಮರಸ್ಯ' (ಡಿ.ಬಿ.ನಾಯಕ), 'ಸ್ವರವಚನಗಳು - ಅನುಭಾವ'(ಎ.ಎಲ್.ಶಿವರುದ್ರಪ್ಪ) ಮತ್ತು 'ತತ್ವಪದಕಾರರ ಅನುಭಾವದಲ್ಲಿ ಕೋಮುಸೌಹಾರ್ದತೆ' (ಗವಿಸಿದ್ಧಪ್ಪ ಎಚ್.ಪಾಟೀಲ), 'ತತ್ವಪದಗಳಲ್ಲಿ ಆಧ್ಯಾತ್ಮಿಕ ದೃಷ್ಟಿ' (ಎಸ್.ಪಿ.ಪದ್ಮಪ್ರಸಾದ್) ಮುಂತಾದ ಲೇಖನಗಳು ವಿವರಿಸುತ್ತವೆ.

ಅಂತರಂಗ-ಬಹಿರಂಗದ ಶುದ್ಧತೆ, ಬಹಿರಂಗಕ್ಕಿಂತ ಅಂತರಂಗದ ಶುದ್ಧಿಯೇ ಮಹತ್ವವೆಂದು ಸಾರುವುದು. ಈಶ್ವರ-ಅಲ್ಲಾ ಭೇದವೆಣಿಸದ ಆಕಾರ-ನಿರಾಕಾರದ ತತ್ವವನ್ನು ಬೆರೆಸುವ ಸಾಮರಸ್ಯವಾದಿ ನಿಲುವು. ಸತಿ-ಪತಿ ಭಾವದ ಧೋರಣೆ, ವ್ಯಕ್ತಿ ಪ್ರಜ್ಞೆ, ವೈಚಾರಿಕ ಪ್ರಜ್ಞೆ, ಸಾಮಾಜಿಕ ಪ್ರಜ್ಞೆ ಆತ್ಮಚಿಂತನೆ, ಆತ್ಮಶೋಧನೆ, ಸ್ವಾನುಭಾವ, ಆತ್ಮಪರಮಾತ್ಮದ ಚರ್ಚೆ ಮತ್ತು ಡಾಂಬಿಕತನದ ವಿರೋಧ, ತನ್ನ ತಾನರಿಯುವ, ಭಕ್ತಿತತ್ವವನ್ನು ಪ್ರತಿಪಾದಿಸುವ ಗುರು-ಶಿಷ್ಯ ಸಂಬಂಧ, ಏಕದೇವೋಪಾಸನೆ, ಪ್ರಾಪಂಚಿಕ ಮೋಹದಿಂದ ದೂರವಿರುವುದು, ಶರಣ, ದಾಸ ಎಂಬ ಭಾವದ ಶರಣು ಹೋಗುವಿಕೆ. ಈ ಎಲ್ಲ ಅಂಶಗಳ ಹಿನ್ನೆಲೆಯಲ್ಲಿ ವಚನಕಾರರು, ದಾಸರು, ಸೂಫಿಗಳು ಮತ್ತು ತತ್ವಪದಕಾರರನ್ನು ಸಮಾನರಂತೆ ಕಂಡು ವಿವರಿಸಿದ ಚರ್ಚೆಗಳು ಇವೆ. ವಚನಕಾರರದು 'ಭಕ್ತಿಪಂಥ'ವಾಗಿದೆ. ಪ್ರೇಮ ಪರಮಪುರುಷಾರ್ಥ ಮೋಕ್ಷವಲ್ಲ. ನಾಮರೂಪಕ್ಕಿಂತ ದೊಡ್ಡದು. ಭಕ್ತ ದೇವರಿಗಿಂತ ದೊಡ್ಡವನು. ಇವರು ನಿರ್ಗುಣೋಪಾಸಕರು. ತತ್ವಪದಕಾರರ ಅನುಭಾವ 'ಜ್ಞಾನಮಾರ್ಗ'ದಿಂದ ಕೂಡಿದ್ದು. ಅದು ಅಮೂರ್ತವಾದುದು. ಸಾಮಾಜಿಕ ಘಟನೆಗಳ ವಿವರಣೆಯಿಂದ ಮೂರ್ತ ರೂಪ ಪಡೆಯುತ್ತದೆ. ವೈರಾಗ್ಯ, ಗುರುಭಕ್ತಿ, ಸದಾಚಾರ, ಜ್ಞಾನ' ಇವು ಅವರ ಮುಖ್ಯ ಲಕ್ಷಣ. ಲೌಕಿಕದ ಮೂಲಕ ಅಲೌಕಿಕವನ್ನು ಗ್ರಹಿಸಿ ಉಪದೇಶಿಸುವ, 'ಗುರು' ಮೊದಲ, 'ಜ್ಞಾನ' ಮೊದಲ ಎಂಬ ಇಬ್ಬಂದಿತನದ ತೊಳಲಾಟವಿದೆ. ವಿರಾಗಿ ಜೀವನವೇ ಮೋಕ್ಷಕ್ಕೆ ದಾರಿ ಎನ್ನುವ ಪ್ರತಿಪಾದನೆಯಿದೆ. ಇವರು ಬಹುದೇವೋಪಾಸಕರೂ, 'ನಾನಳಿದು' ಒಂದಾಗುವ ನಿರಶನ ಭಾವ ತತ್ವಪದಕಾರರದಾಗಿತ್ತು ಎನ್ನುವ ಭಿನ್ನ ಚರ್ಚೆಗಳು ನಡೆದಿವೆ.

ದಾಸರು 'ಪ್ರಪಂಚದ ಕಣಕಣದಲ್ಲಿ ಇರುವ ಪರಮಾತ್ಮನ ಶಕ್ತಿಯನ್ನು ಕಾಣುವುದು ಹೇಗೆ? ಅವನು ಇರುವುದಾದರೂ ಎಲ್ಲಿ? ಅವನು ನೆಲೆಯಲ್ಲಿದ್ದಾನೆಯೇ? ಜಲದಲ್ಲಿದ್ದಾನೆಯೇ? ಮುಗಿಲಲ್ಲಿದ್ದಾನೆಯೇ? ಅವನನ್ನು ಕಾಣುವ ಬಗೆ ಯಾವುದು? ಎಂಬ ಜಿಜ್ಞಾಸೆಯಲ್ಲಿ ತೊಡಗಿದ ಅವರ ಅನುಭಾವ "ಹುಚ್ಚು ಹಿಡಿಯಿತೋ ಎನಗೆ ಹುಚ್ಚು ಹಿಡಿಯಿತು"[೨೧] (ಪುರಂದರ ದಾಸರು) "ಹುಚ್ಚನಾಗಬೇಕೋ ಜಗದಿ" (ಶ್ರೀರಾಮದಾಸರು), "ಹುಚ್ಚು ಹಿಡಿಸಿದೆಯಾ ಮಾಧವ" (ಪ್ರಾಣೇಶ ವಿಠಲ), "ಹುಚ್ಚಾದೇನಣ್ಣ ಮುಚ್ಚುಗೊಂಡು" (ಕಾಖಂಡಕಿ ಕೃಷ್ಣರಾಯ)[೨೨] ಎಂಬುದೆಲ್ಲ ದೇವೋನ್ಮಾದದ ಅವಸ್ಥೆಯಾಗಿದೆ. ಹೊರಗಿನ ಪರಿವೆಯೇ ಇಲ್ಲದ ಅವರಿಗೆ 'ದೇಹವೇ ಒಂದು ಊರು' ಆಗಿದೆ. ತತ್ವಪದಕಾರರಿಗೆ 'ದೇಹ' ಒಂದು 'ಗುಡಿ'ಯಾದರೆ, ವಚನಕಾರರಿಗೆ 'ದೇಹವೇ ದೇವಾಲಯವಾಗಿದೆ'. ಆದರೆ ಸೂಫಿಗಳು ಜೀವನದಲ್ಲಿಯೇ ದೇವನಿರುವನು ಎನ್ನುತ್ತಾರೆ. ಪರಮಾತ್ಮನನ್ನು 'ಪ್ರಿಯತಮೆ' ಎಂದು ಆರಾಧಿಸುವ ಮಧುರ ಭಕ್ತಿಯ ಸೂಫಿಗಳು ಭೌತಿಕ ಬದುಕು ದೈವ ಸಾಕ್ಷಾತ್ಕಾರಕ್ಕೆ ಕಾರಣವೆಂದು ನಂಬಿದವರು. ತತ್ವಪದಕಾರರಲ್ಲಿ ಪರಮಾತ್ಮನನ್ನು 'ಪತಿ' ಎನ್ನುವ ವಚನಕಾರರ ನಿಲುವು. ಪರಮಾತ್ಮನನ್ನು 'ಪ್ರಿಯತಮೆ' ಎನ್ನುವ ಸೂಫಿಗಳ ನಿಲುವುಗಳೆರಡೂ ಅವರ ಅನುಭಾವದಲ್ಲಿ ಕಂಡುಬರುತ್ತದೆ. ಆದರೆ ಈ ಅನುಭಾವ ತನಗೆ ತಾನೇ ಪಡೆದ ಅನುಭಾವದ ಅನುಭವವನ್ನು ಒಳಗೊಂಡಿದೆ. ಸೂಫಿಗಳಂತೆ ತತ್ವಪದಕಾರರು ಗುರುವನ್ನು, ಜ್ಞಾನವನ್ನು ಹುಡುಕುತ್ತ ಸುತ್ತಾಟವನ್ನು ನಡೆಸಿದವರು. ಭಾರತದ ಅನುಭಾವಿ ಪರಂಪರೆಗಳಲ್ಲಿ ಒಬ್ಬ ಸಂತನು ಇನ್ನೊಬ್ಬನನ್ನು ಭೇಟಿಯಾಗುವುದು. ಕರ್ನಾಟಕದ ಅನೇಕ ಸಾಂಸ್ಕೃತಿಕ ನಾಯಕರು ಉತ್ತರದಿಂದ ದಕ್ಷಿಣದ ಕಡೆ ಚಲಿಸುವುದು ಇವೆಲ್ಲ ತಿಳಿವನ್ನು ಹಂಚಿಕೊಳ್ಳುವ ಮುಖಾಮುಖಿಯ ಭಾಗವಾಗಿವೆ ಎಂಬಂತೆ ಚರ್ಚಿಸಲಾಗಿದೆ. ಈ ನಾಯಕರ ಮುಖಾಮುಖಿಗಳನ್ನು ರಹಮತ್ ತರೀಕೆರೆ ಅವರು 'ಜನಸಮುದಾಯಗಳು ಒಬ್ಬರ ಸೋಲು ಮತ್ತೊಬ್ಬರ ಗೆಲುವುಗಳ ಮಾದರಿಯಲ್ಲಿ ಕಲ್ಪಿಸಿಕೊಂಡು ಕಥನಗಳ ಕಟ್ಟಿಕೊಂಡಿರಬಹುದು ಎಂದು ಊಹಿಸುತ್ತಾರೆ."[೨೩]

ಒಟ್ಟಿನಲ್ಲಿ ಅನುಭಾವದ ಅಧ್ಯಯನವನ್ನು ಧರ್ಮದ ಒಂದು ಭಾಗವಾಗಿ ನೋಡುವ ಪ್ರಯತ್ನ ನಡೆಯುತ್ತಿದೆ. ಧಾರ್ಮಿಕ ಚೌಕಟ್ಟುಗಳ ಪರಿಧಿಯಲ್ಲಿರುವ ಅನುಭಾವದ ಮಿತಿಗಳು ಬೇರೆ. ಧಾರ್ಮಿಕ ಚೌಕಟ್ಟುಗಳ ಪರಿಧಿಯಾಚೆ ಇರುವ ಅನುಭಾವದ ತೀವ್ರತೆ ಬೇರೆ. (ಬಹುತೇಕ ಇದು ಮುಖ್ಯವಾದದ್ದು ಅನಿಸುತ್ತದೆ.) ಆದರೆ ಸ್ವರೂಪದಲ್ಲಿ ಒಂದೇ ಆದರೂ ತನ್ನ ಕಾಲಘಟ್ಟಗಳಲ್ಲಿ ಇದು ಅಭಿವ್ಯಕ್ತಿ ಪಡೆದುಕೊಳ್ಳುವ ವಿಧಾನಗಳಲ್ಲಿ ವ್ಯತ್ಯಾಸವಾಗಬಹುದು. ಇದನ್ನು ಗಮನಿಸದೇ ಹೀಗೆ ಧರ್ಮನಿರಪೇಕ್ಷ ಸ್ವರೂಪದ (ಹುಸಿ ಸಾಮರಸ್ಯವಾದಿ) ಹಾಗೂ ಧಾರ್ಮಿಕ ಜಿಜ್ಞಾಸೆಯ ಮೂಲಕ ಸಂತರನ್ನು ಸಂಭ್ರಮದಿಂದ ನೋಡಲಾಗುತ್ತದೆ. ಅವರನ್ನು ಅರ್ಥ ಮಾಡಿಕೊಳ್ಳಬೇಕೇ ವಿನಃ ಹೀಗೆ ಸಂಭ್ರಮದಿಂದ ನೋಡುವುದರಲ್ಲಿ ಅರ್ಥವಿಲ್ಲ. ಅನುಭಾವ ಕಾಲಾತೀತವಾದದ್ದು ಎಂಬ ನೆಲೆಯ ಮೂಲಕವೂ ನೋಡಲಾಗುತ್ತಿದೆ. ಆದರೆ

ಕಾಲಂತರದಲ್ಲಿ 'ಎಲ್ಲ ಅನುಭಾವಿಗಳ ಅತ್ಯಂತ ದೊಡ್ಡ ಸಮಸ್ಯೆ ಎಂದರೆ ತಮಗಾದ ಆನುಭಾವಿಕ ಅನುಭವಗಳನ್ನು ಭಾಷಿಕವಾಗಿ ಅಭಿವ್ಯಕ್ತಿಸಿರುವ ಬಗೆಗೆ ಇರುವ ತೊಡಕು. ಅನುಭವಗಳನ್ನು ವಿವರಿಸಲು ಭಾಷೆಗೆ ಸಾಧ್ಯವಾಗದೇ ಹೋಗುತ್ತದೆ ಎಂದು ಭಾವಿಸುತ್ತಾರೆ. ಅವರು ತಮ್ಮ ಅನುಭಾವದ ಸಮರ್ಥನೆ, ಸ್ಪಷ್ಟತೆಯ ಅಭಿವ್ಯಕ್ತಿಗೆ ತಕ್ಕುದಾದ ಭಾಷೆ ದೊರಕಿಲ್ಲವೆಂದೇ ಹೇಳುತ್ತಾರೆ''[೨೪] ಮಂಗಳಾ ಪ್ರಿಯದರ್ಶಿನಿಯವರ ಈ ಹೇಳಿಕೆ ತತ್ವಪದಕಾರರಿಗೆ ಅನ್ವಯಿಸುತ್ತದೆಯೇ ಎಂಬುದನ್ನು ವಿವೇಚಿಸಬೇಕಾಗಿದೆ. ಯಾಕೆಂದರೆ ತತ್ವಪದಕಾರರು ಬಹುಭಾಷಿಕ ಹಿನ್ನೆಲೆಯುಳ್ಳವರು. ತಮ್ಮ ಅಭಿವ್ಯಕ್ತಿಗೆ ಭಾಷೆ ತೊಡಕೆಂದು ಭಾವಿಸಿಲ್ಲ. ಸಹಜವಾಗಿ ಜನಸಾಮಾನ್ಯರ ನುಡಿಯನ್ನು ಮತ್ತು ಬಹುಭಾಷೆಯನ್ನು ಬಳಸಿದವರು. ಹಾಗಾಗಿ ಇವರ ಭಾಷೆ ಸಂಕೀರ್ಣವಾಗಿದೆ. ಅನುಭಾವದ ಅಭಿವ್ಯಕ್ತಿಗೆ ಅದರದ್ದೇ ಆದ ಭಾಷೆ ಒಂದು ಇದೆಯೇ? ತತ್ವಪದಗಳು ಭಾಷಿಕವಾಗಿ ಮೀರುವ, ಕನ್ನಡತ್ವಕ್ಕಿಂತ ಕರ್ನಾಟಕತ್ವಕ್ಕೆ, ಪ್ರತಿಸಂಸ್ಕೃತಿಯ ನಿರ್ಮಾಣಕ್ಕೆ ತುಡಿದಂತವಾಗಿ ಕಾಣುತ್ತವೆ.

ಹಲವು ಕಾಲಘಟ್ಟಗಳಲ್ಲಿ ಬದುಕಿದ, ಹಲವು ಸಾಮಾಜಿಕ ಹಿನ್ನೆಲೆಯಿಂದ ಬಂದ ತತ್ವಪದಕಾರರ ಅನುಭಾವದ ಗ್ರಹಿಕೆ ವಿಭಿನ್ನವಾಗಿದೆ. 'ಅನುಭಾವ ಎಂಬ ಪದವನ್ನು ವಿಶ್ವದ ಎಲ್ಲ ಸಂಸ್ಕೃತಿಗಳಿಗೆ ಸಮನಾದ ಅಂಶ ಎಂದು ಕೆಲವರು ಗುರುತಿಸಿದರೂ ಅನುಭಾವವು ಹಾಗೆ ದೇಶ ಕಾಲಾತೀತವಾದದ್ದು ಆಗಿರಲು ಸಾಧ್ಯವಿಲ್ಲ. ನಿರ್ದಿಷ್ಟ ಸಾಮಾಜಿಕ ಮತ್ತು ಧಾರ್ಮಿಕ ಸಂಗತಿಗಳು ಅನುಭಾವದ ಸ್ವರೂಪವನ್ನು ನಿರ್ಧರಿಸುತ್ತವೆ. ಹಾಗಾಗಿಯೇ ಕ್ರಿಶ್ಚಿಯನ್ ಅನುಭಾವ, ಬೌದ್ಧ ಅನುಭಾವ, ಇಸ್ಲಾಂ ಅನುಭಾವ ಎಂಬಂತ ನುಡಿಗಟ್ಟುಗಳು ರೂಪುಗೊಂಡಿವೆ. 'ಭಾವ ಇದ್ದಾಂಗ ದೇವ' ಅನ್ನುವ ಪ್ರಸಿದ್ಧ ಮಾತೂ ಇದನ್ನೇ ಹೇಳುತ್ತದೆ.''[೨೫] ಅನುಭಾವ ಎನ್ನುವುದು ಯಾವುದೋ ಲೋಕದಲ್ಲಿ ಕಣ್ಣುನೆಟ್ಟು ಕುಳಿತುಕೊಳ್ಳುವುದಲ್ಲ, ದೇವರ ಕುರಿತ ಚಿಂತನೆಯಷ್ಟೇ ಅಲ್ಲ. ಬದಲಿಗೆ ಬದುಕಿನ ಮೌಲ್ಯವನ್ನು ಕುರಿತ ಚಿಂತನೆ, ತಿಳುವಳಿಕೆ. ಅನುಭಾವ ಎನ್ನುವುದು ಸಾಂಸ್ಕೃತಿಕ ಕಾಳಜಿಯ ಹುಡುಕಾಟ. ಇದನ್ನು ವಚನಕಾರರು, ತತ್ವಪದಕಾರರು ಬೇರೆ ಬೇರೆ ರೀತಿಯಲ್ಲಿ ಸಾಧಿಸಿದರು. ಈ ಹಿನ್ನೆಲೆಯಲ್ಲಿ ನೋಡುವುದಾದರೆ ಅನುಭಾವವು 'ನಿಜಗುಣ ಶಿವಯೋಗಿಗಳಿಗೆ 'ವಿಮಲ ಪರಂಜ್ಯೋತಿಯಾದರೆ, ಚಿದಾನಂದಾವಧೂತರಿಗೆ 'ಮುತ್ತು' ಆಗಿದೆ. ಹಾಗೇ ಶಂಕರಾನಂದ, ಹಾಗಲ್ವಾಡಿ ಮುದ್ವೀರಸ್ವಾಮಿಯವರಿಗೆ 'ರತ್ನ'ವಾದರೆ, ನಿಂಬರಗಿ ಮಹಾರಾಜರಿಗೆ 'ಕಲ್ಲು ಸಕ್ಕರೆ ಸಿಹಿ'ಯಾಗಿದೆ ಎಂಬುದನ್ನು ಗಮನಿಸಬಹುದು.

**ವಸಾಹತುಶಾಹಿ ಹಿನ್ನೆಲೆಯಲ್ಲಿ ತತ್ವಪದಗಳ ಚರ್ಚೆ :** ವಸಾಹತುವಾದ ಆಧುನಿಕ ಪಶ್ಚಿಮ ರೂಪಿಸಿದ ಒಂದು ವಿಶಿಷ್ಟ ಆಕ್ರಮಣ ಸಿದ್ಧಾಂತವೆಂದು ಹಾಗೂ ಇದು ಸನಾತನವಾದಿಗಳಿಂದ ಹಿಂಸೆಗೊಳಗಾದ ಅನೇಕ ಶೋಷಿತ ಜನಸಮುದಾಯಗಳಿಗೆ ಬಿಡುಗಡೆಯ ಮಾರ್ಗವೂ ಆಗಿದೆ ಎಂದು ನಂಬುವ ಇಂಥ ಗ್ರಹಿಕೆಗಳೇ ವಸಾಹತುಶಾಹಿಯನ್ನು ಬೇರೆ ಬೇರೆ ನಿಟ್ಟಿನಿಂದ ನೋಡಲು ಸಾಧ್ಯವಾದಂತೆ ತೋರುತ್ತದೆ.

ಯಾಕೆಂದರೆ ವಸಾಹತುಶಾಹಿಯ ಸ್ವರೂಪ ಒಂದೇ ರೀತಿಯಾಗಿಲ್ಲ. ಇದಕ್ಕೆ ಆಯಾ ವರ್ಗಗಳು ತೋರಿದ ಪ್ರತಿಕ್ರಿಯೆ ಭಿನ್ನವಾಗಿದೆ. ವಸಾಹತುಶಾಹಿ ತಂದ ಬದಲಾವಣೆಗಳು ನಮ್ಮನ್ನು ತಲ್ಲಣಗೊಳಿಸಿದರೆ ಮತ್ತೆ ಕೆಲವು ವಿಮೋಚನೆಯ ಮಾರ್ಗಕ್ಕೆ ದಾರಿಯಾದವು. ಕೆಲವನ್ನು ವಿರೋಧಿಸಿದರೆ ಮತ್ತೆ ಕೆಲವನ್ನು ಅಪ್ಪಿಕೊಳ್ಳಲಾಯಿತು. ಈ ವೈರುಧ್ಯಗಳ ಹಿನ್ನೆಲೆಯಲ್ಲಿ ತತ್ವಪದಕಾರರು ವಸಾಹತುಶಾಹಿಗೆ ತೋರಿದ ವಿಭಿನ್ನ ಪ್ರತಿಕ್ರಿಯೆಯ ಕುರಿತ ಚರ್ಚೆಗಳನ್ನು ಅರಿಯಲಾಗಿದೆ.

ಬ್ರಿಟಿಷರ ರಾಜಕೀಯ ವಸಾಹತುಶಾಹಿ, ಸನಾತನವಾದಿಗಳ ಸಾಂಸ್ಕೃತಿಕ ವಸಾಹತುಶಾಹಿ ಮತ್ತು ಮನುಷ್ಯನ ಮನಸ್ಸಿನ ವಸಾಹತುಶಾಹಿಗಳ ವಿರುದ್ಧ ತತ್ವಪದಕಾರರು ಪ್ರತಿಕ್ರಿಯಿಸಿರುವುದನ್ನು 'ಘನಮಠದಾರ್ಯರು'(ಬಸವರಾಜ ಸಬರದ) ಲೇಖನ ಚರ್ಚಿಸುತ್ತದೆ. ಕೈವಾರ ನಾರಾಯಣಪ್ಪ, ಕಡಕೋಳ ಮಡಿವಾಳಪ್ಪ, ಖೈನೂರು ಕೃಷ್ಣಪ್ಪನಂತಹ ತತ್ವಪದಕಾರರು ಬ್ರಿಟಿಷರ ರಾಜಕೀಯ ವಸಾಹತುಶಾಹಿಯ ಮತ್ತು ಪಾಳೆಗಾರಿಕೆಯ ವಿರುದ್ಧ ಪ್ರತಿಭಟಿಸಿರುವುದನ್ನು, ಪುರೋಹಿತಶಾಹಿಯ ಚಾತುರ್ವರ್ಣ ವ್ಯವಸ್ಥೆಯ ವಿರುದ್ಧವೂ ಪ್ರತಿಭಟಿಸಿರುವುದನ್ನು ಲೇಖಕರು ಗುರುತಿಸುತ್ತಾರೆ. ಆದರೆ ಇವುಗಳಿಗಿಂತ 'ಮನಸ್ಸಿನ ವಸಾಹತುಶಾಹಿ' ಅವನಲ್ಲಿರುವ ಸ್ವಾರ್ಥ, ಸಣ್ಣತನ, ದ್ವೇಷ, ಕಪಟತನ ಇವು ಅವಕ್ಕಿಂತಲೂ ಅಪಾಯಕಾರಿಯಾಗಿವೆ. ಇವುಗಳ ವಿರುದ್ಧ ಹೋರಾಡುವುದು ಅವರಿಗೆ ಬಹಳ ಮುಖ್ಯವಾದ ತಾತ್ವಿಕತೆಯಾಗಿತ್ತು ಎನ್ನುತ್ತಾರೆ. ಸಬರದ ಅವರು ಈ ಹಿನ್ನೆಲೆಯಲ್ಲಿ ಘನಮಠದ ನಾಗಭೂಷಣನಂತಹವರು ಸಾಂಸ್ಕೃತಿಕ ವಸಾಹತುಶಾಹಿ ಮತ್ತು ಮನಸ್ಸಿನ ವಸಾಹತುಶಾಹಿಗೆ ತೀವ್ರವಾಗಿ ಪ್ರತಿಕ್ರಿಯಿಸಿರುವುದನ್ನು ಚರ್ಚಿಸುತ್ತಾರೆ.

ಆದರೆ ಕೈವಾರ ನಾರಾಯಣಪ್ಪ, ಶಿಶುನಾಳ ಶರೀಫ್ ಅಂತವರು ನೇರವಾಗಿ ವಸಾಹತುಶಾಹಿ ಕುರಿತು ಪ್ರತಿಕ್ರಿಯಿಸಿರುವುದನ್ನು 'ವಸಾಹತುಶಾಹಿ ಹಿನ್ನೆಲೆಯಲ್ಲಿ ತತ್ವಪದಕಾರರ ರಚನೆಗಳು' (ಲಕ್ಷ್ಮೀಪತಿ ಕೋಲಾರ) ಲೇಖನ ಚರ್ಚಿಸುತ್ತದೆ. ವಿದೇಶಿ ವಸಾಹತುಶಾಹಿಗಿಂತ ಸ್ವದೇಶಿ ಅಥವಾ ಸನಾತನ ವಸಾಹತುಶಾಹಿ ಹಿಡಿತವೆ ಮುಖ್ಯವಾಗಿತ್ತು. ಬಹುತೇಕ ತತ್ವಪದಕಾರರು ಈ ಸ್ವದೇಶಿ ಅಥವಾ ಸನಾತನ ವಸಾಹತುಶಾಹಿ ವಿರುದ್ಧ ಹೋರಾಡಿದ್ದನ್ನು ಚರ್ಚಿಸುತ್ತಾರೆ. ಸಾಂಸ್ಕೃತಿಕವಾಗಿ ಆ ಕಾಲದಲ್ಲಿ 'ಜಾತಿ ಪದ್ಧತಿಯ ವಿರುದ್ಧ ಯಾವುದೇ ಬಗೆಯ ನೇರ ಅಥವಾ ಪರೋಕ್ಷ ಆಂದೋಲನ ನಡೆಯದಿದ್ದಾಗಲೂ ಈ ಅದ್ಭುತ ಸಂಭವಿಸಿತು. ಲೋಕಾಯತರಿಂದ ಹಿಡಿದು ಬುದ್ಧ-ಬಸವ, ವಚನಕಾರರು, ದಾಸರು, ಅನುಭಾವಿಗಳು ಮತ್ತಿತರ ಸುಧಾರಣಾವಾದಿ ಗಣ್ಯರಿಂದಲೂ ಆಗದಿದ್ದ ಕೆಲಸ ವಿದೇಶಿ ವಸಾಹತುಶಾಹಿ ನಿರ್ವಹಿಸಿತೆಂಬುದೇ ಇಲ್ಲಿನ ಸೋಜಿಗದ ಸಂಗತಿಯಾಗಿದೆ''[೨] ಎಂದು ಅಭಿಪ್ರಾಯಪಡುತ್ತಾರೆ. ಇದು ಶೋಷಿತ ಸಮುದಾಯಗಳಿಗೆ ಕೊಂಚ ಮಟ್ಟಿನ ಬಿಡುಗಡೆಯ ಮಾರ್ಗವಾದರೂ ವೈದಿಕ ವಸಾಹತುಶಾಹಿಯೇ ವಿದೇಶಿ ವಸಾಹತುಶಾಹಿಯ ಮುಖವಾಡದಲ್ಲಿ ಕಾಣಿಸಿಕೊಂಡುದು ಮಾತ್ರ ದುರಂತವಾದುದು. ಈ

ಮುಖವಾಡದಲ್ಲಿ ಕಾಣಿಸಿಕೊಂಡ ವೈದಿಕ ವಸಾಹತುಶಾಹಿಯ ಆರ್ಥಿಕ ಮೂಲದ ಪರಿಣಾಮಗಳ ಬಗ್ಗೆ ಕೈವಾರ ನಾರಾಯಣರು, ಆಧುನಿಕತೆ ಮತ್ತು ವಿಜ್ಞಾನದ ಪರಿಣಾಮಗಳ ಬಗ್ಗೆ ಶರೀಫರು ಚಿಂತಿಸಿರುವುದನ್ನು ವಿವರಿಸುತ್ತಾರೆ. ಆದರೆ ಮುಖ್ಯವಾಗಿ ಅಧ್ಯಾತ್ಮದ ನೆಲೆಯಲ್ಲಿಯೇ ಎಲ್ಲ ವಸಾಹತುಶಾಹಿಯನ್ನು ವಿರೋಧಿಸುವುದು ತತ್ವಪದಕಾರರ ತಾತ್ವಿಕ ನಿಲುವಾಗಿತ್ತು.

ಶಿಶುನಾಳ ಶರೀಫ, ಕೈವಾರ ನಾರಾಯಣಪ್ಪ, ಘನಮಠದಾರ್ಯ, ಕೂಡಲೂರು ಬಸವಲಿಂಗಪ್ಪ, ಕಡಕೋಳ ಮಡಿವಾಳಪ್ಪ, ಬಾಲಲೀಲಾ ಮಹಾಂತ, ಖೈನೂರು ಕೃಷ್ಣಪ್ಪ, ಸರ್ಪಭೂಷಣ ಮುಂತಾದವರು ಸ್ವಲ್ಪ ಹೆಚ್ಚು-ಕಡಿಮೆ ಒಂದೇ ಕಾಲಘಟ್ಟದಲ್ಲಿ ಜೀವಿಸಿದ್ದವರು(ಸುಮಾರು ೧೮ನೇ ಶತಮಾನದ ಕೊನೆ ಮತ್ತು ೧೯ನೇ ಶತಮಾನದಿಂದೀಚೆಗೆ). ಹಾಗೆಯೇ ಕರ್ನಾಟಕದ ಅನೇಕ ಭಾಗಗಳಲ್ಲಿ ಇದ್ದವರೂ ಆಗಿದ್ದರು. ಹೀಗಾಗಿ ವಸಾಹತುಶಾಹಿ ಕುರಿತು ತತ್ವಪದಕಾರರ ಪ್ರತಿಕ್ರಿಯೆ ಒಂದೇ ರೀತಿಯಾಗಿಲ್ಲ. ವಸಾಹತುಶಾಹಿ ನೇರ ಆಳ್ವಿಕೆಗೆ ಒಳಪಟ್ಟ ಪ್ರದೇಶಗಳಲ್ಲಿದ್ದ ಶರೀಫರಿಗೆ ಆದ ವಸಾಹತುಶಾಹಿ ಅನುಭವವೇ ಬೇರೆ. ಬಾಲಲೀಲಾ ಮಹಾಂತ, ಸರ್ಪಭೂಷಣ, ಹಾಗಲ್ವಾಡಿ ಮುದ್ವೀರಸ್ವಾಮಿಯಂತವರಿಗೆ ಆದ ಅನುಭವವೇ ಬೇರೆ. ಸರ್ಪಭೂಷಣರಂತೂ ವಸಾಹತು ಕುರಿತಂತೆ ದಿವ್ಯಮೌನ ವಹಿಸಿರುವುದನ್ನು ಜಿ.ಎಸ್.ಶಿವರುದ್ರಪ್ಪನವರು ತಮ್ಮ ಕೃತಿಯಲ್ಲಿ ಗುರುತಿಸುತ್ತಾರೆ. ಬ್ರಿಟಿಷರ ನೇರ ಆಳ್ವಿಕೆಯೂ ಇಂಗ್ಲಿಷ್ ವಿದ್ಯಾಭ್ಯಾಸವೂ ಅಷ್ಟಾಗಿ ಇರದಿದ್ದ ಹೈದರಾಬಾದ್ ಕರ್ನಾಟಕದಲ್ಲಿನ ಕಡಕೋಳ ಮಡಿವಾಳಪ್ಪ, ಖೈನೂರು ಕೃಷ್ಣಪ್ಪ, ಕೂಡಲೂರು ಬಸವಲಿಂಗಪ್ಪ, ಘನಮಠದ ನಾಗಭೂಷಣ ಮುಂತಾದ ತತ್ವಪದಕಾರರಿಗೆ ಆದ ವಸಾಹತುಶಾಹಿ ಅನುಭವವೇ ಬೇರೆಯಾಗಿದೆ.

ಕಡಕೋಳ ಮಡಿವಾಳಪ್ಪ ಮತ್ತು ಶಿಶುನಾಳ ಶರೀಫ್‌ರ ರಚನೆಗಳಲ್ಲಿ ವಸಾಹತುಶಾಹಿ ಕುರಿತು ವೈರುಧ್ಯಾತ್ಮಕ ಪ್ರತಿಕ್ರಿಯೆಗಳಿವೆ. ಶರೀಫರು ''ಕುಶಲಗಾರ ಕಂಪನಿಯವರಮ್ಮ | ವಾಸುದೇವನ ಅವತಾರ ಜನಿಸಿದರಮ್ಮ' ಎಂದು 'ಗಿರಣಿ ವಿಸ್ತಾರ ನೋಡಮ್ಮ ಇದಕೆ ಪರಾಕು ಮಾಡಮ್ಮ' ಎಂದು ಕೊಂಡಾಡಿದ್ದರೆ ಮತ್ತೊಂದು ಕಡೆ 'ನರಕ ಕರ್ಮಕೆ ತಕ್ಕ ದಿನ ಬಂತು ರಮಣಿ', ಎಂದು 'ಬಂತೋ ಇಂಗ್ಲೆಂಡ್ ದೇಶಕ ಬೆಂಕಿಯ ಮಳಿಯೋ | ರಾಣಿ ರಾಜರ ವೈಭವಕೆ | ಪ್ರಾಣಹಾನಿಗಳಾದವು ಎಣೆ ಇಲ್ಲ ಇದಕೆ' ಮತ್ತು 'ಸೋಜಿಯೇ ನೀನು ಸೂಜಿಯೆ', ಹಾಗೂ 'ಎಷ್ಟಂತ ಹೇಳಲಿ ಸೃಷ್ಟಿಯೊಳಗೆ ಪ್ಯಾಟಿ', 'ಬಂದಿತು ಬರಬಹುದು', 'ಘೋರವಾಗಿ ಮಹಾ ಮುಂಬೈಯೊಳು'[೨೭] ಎಂಬ ರಚನೆಗಳೆಲ್ಲ ವಸಾಹತುಶಾಹಿಗೆ ಹಾಕುವ ಶಾಪ. ಯಂತ್ರ ನಾಗರಿಕತೆ ತಂದೊಡ್ಡಿದ ಕೆಡುಕನ್ನು ಹೇಳುತ್ತವೆ. ಕಡಕೋಳರ ''ಏನಾಗತದೆ ಎಂತಾಗತದೊ | ಈ ನಾಡ ನೀನೋಡ ತಮ್ಮ | ದುಡಿದುಣ್ಣುವ ರೈತರಿಗೆ ಏನಿಲ್ಲ ರೊಕ್ಕ | ದುಡಿಯದ ಭಂಟರಿಗೆ ಭಾರಿ ಬಿಂಕ'' ಎನ್ನುವ ಪ್ರಭುತ್ವದ ವಿಷಯದಲ್ಲಿನ ಹತಾಶಯಗಲಿ, ''ಸರಕಾರ ಕಂಡರೆ ಸಲಾಮು ಮಾಡೋ''[೨೮] ಎಂಬ ದಾಸಭಾವವಾಗಲಿ ಇವೆಲ್ಲ ಅಷ್ಟರಮಟ್ಟಿಗೆ ಗಮನಾರ್ಹವಾದವೇ.

ಈ ಹಿನ್ನೆಲೆಯಲ್ಲಿ ನೋಡಿದರೆ ವಸಾಹತುಶಾಹಿ ಅನುಭವ ಸಂಕೀರ್ಣವಾಗಿದೆ ಅನಿಸುತ್ತದೆ. ಆಯಾ ವರ್ಗಗಳಿಗೆ ಈ ವಸಾಹತು ಅನುಭವ ಭಿನ್ನವಾದಂತೆ ತೋರುತ್ತದೆ. ದಲಿತರು, ಹಿಂದುಳಿದವರಿಗೆ ಈ ಅನುಭವ ಸಂಭ್ರಮವಾದರೆ, ಅನುಭಾವಿಗಳಿಗೆ ನುಂಗಲಾರದ, ಉಗುಳಲಾರದ ತುತ್ತಾಗಿದೆ. ಪುರೋಹಿತಶಾಹಿ ವರ್ಗಗಳಿಗೆ ಆಂತರ್ಯದಲ್ಲೇ ವಿಷಾದ ಹುಟ್ಟಿಸುವ ಸಂಗತಿಯಾಗಿದೆ.

ಹೀಗಾಗಿ ಆಯಾ ಪ್ರದೇಶಗಳ ಸಾಂಸ್ಕೃತಿಕ ಹಿನ್ನೆಲೆಯಲ್ಲೇ ವಸಾಹತುಶಾಹಿಯ ಅನುಭವವನ್ನು ಗ್ರಹಿಸಬೇಕಾಗಿದೆ. ತನ್ನ ಸಂಸ್ಕೃತಿಯನ್ನು ವಿಮರ್ಶಿಸಿಕೊಳ್ಳುವ ಮಾದರಿಯನ್ನು ವಸಾಹತುಶಾಹಿಯಿಂದಲೇ ಕಲಿತ ಸಂಗತಿ ಕೆಲವು ತತ್ವಪದಕಾರರ ರಚನೆಗಳಲ್ಲಿ ಸಿಗಬಹುದೇನೋ? ಹಾಗಾಗಿ ತತ್ವಪದಕಾರರ ರಚನೆಗಳನ್ನು ಸಂಕೀರ್ಣವಾದ ಸಾಮಾಜಿಕ, ಸಾಂಸ್ಕೃತಿಕ ಆಯಾಮಗಳಿಂದ ಗ್ರಹಿಸಬೇಕಾಗಿದೆ.

**ಸಂಕೀರ್ಣ :** ಮೇಲೆ ವಿವರಿಸಿದ ನಿರ್ದಿಷ್ಟ ವಿಷಯದ (ಅನುಭಾವ ವಸಾಹತು ಹಿನ್ನೆಲೆ ಮುಂತಾದ) ವರ್ಗೀಕರಣದ ಎಲ್ಲೆಕಟ್ಟಿನೊಳಗೆ ಬರದ ತತ್ವಪದಕಾರರ ಕುರಿತ ವಿವಿಧ ವಿಷಯಗಳ ಹಿನ್ನೆಲೆಯಲ್ಲಿನ ಬಿಡಿ ಲೇಖನಗಳನ್ನು ಈ ಭಾಗದಲ್ಲಿ ಚರ್ಚಿಸಲಾಗಿದೆ.

ಎಚ್.ಎಸ್.ಶಿವಪ್ರಕಾಶ್ ಅವರ ಎಲ್ಲ 'ಜಾತಿಯ ಮರಗಳ ಕಾಡು : ತತ್ವಪದಕಾರರು' ಲೇಖನ ಎಲ್ಲ ಜಾತಿ, ವೃತ್ತಿಗಳ ಹಿನ್ನೆಲೆಯಿರುವ ತತ್ವಪದಕಾರರನ್ನು ಮಠದೊಳಗೆ ಬಂಧಿಸಿ ಸಾಂಸ್ಥಿಕಗೊಳಿಸಿದ ಪರಿಯನ್ನು ವಿವರಿಸುತ್ತಲೇ, ಅವರ ಜಾತ್ಯತೀತ ನಿಲುವನ್ನು ಪ್ರತಿಪಾದಿಸುತ್ತದೆ.

ಈ ಜಗತ್ತು ಒಂದು ಕಾಡಾದರೆ, ಮಠದ ಒಳಗೆ ನಡೆಯುವ ಧಾರ್ಮಿಕ ವಿಧಿಯಾಚರಣೆಗಳು ಕೇವಲ ಒಂದು ಮರದಂತೆ. ಆದರೆ ಹೊರಗೆ ನಡೆಯುವ ತತ್ವಪದಕಾರರ ಧಾರ್ಮಿಕ ವಿಧಿಯಾಚರಣೆಗಳು ಮಾತ್ರ ಎಲ್ಲ ಜಾತಿಯ ಮರಗಳನ್ನು ಹೊಂದಿದ ಕಾಡಿನಂತೆ ಇವೆ. ಈ ರೂಪಕದ ಮೂಲಕ ತತ್ವಪದಕಾರರು ಹೇಗೆ ಸಮಸ್ತ ಜನತೆಯ ಆಶೋತ್ತರಗಳನ್ನು ಬಿಂಬಿಸುವ ಹಾಡನ್ನು ಹಾಡಿದರು. ಜನಸಮುದಾಯಗಳ ನೋವನ್ನು ನೀಗಿಸಿದರು. ನಿಗಿ ನಿಗಿ ಕೆಂಡದಂಥ, ಅವರ ಬದುಕಿನಲ್ಲಿ ಹೇಗೆ ನೀರಿನ ಆಸರೆಯಾದರು. ಇಂಥ ಜೀವಂತ ಸಂಸ್ಕೃತಿಯ ಪರಂಪರೆಯುಳ್ಳ ಇವರನ್ನು ಒತ್ತಡಗಳ ಇಂದಿನ ಬದುಕಿನಲ್ಲಿ ಕಡೆಗಣಿಸಲ್ಪಟ್ಟಿರುವ ಆತಂಕವನ್ನು ವ್ಯಕ್ತಪಡಿಸುತ್ತಾರೆ. ಅಲ್ಲದೇ ಅಸಾಧ್ಯವನ್ನು ಸಾಧ್ಯವಾಗಿಸುವ ಮೂಲಕವೇ ಜನ-ಲೋಕದ ಜೊತೆ ಮಾತಾಡುವ ಇವರ ರಚನೆಗಳು ಕ್ರಿಯಾರೂಪಗಳಾಗಿವೆ ಎನ್ನುತ್ತಾರೆ. ಬೇರೆ ಬೇರೆ ಸಂಸ್ಕೃತಿ, ಜನರ ನಂಬಿಕೆಗಳ ನಡುವೆ ಬಾಳಿದ ತತ್ವಪದಕಾರರು ಅವರೆಲ್ಲ ಆಚರಣೆ, ದೈವ, ಸಂಕೇತಗಳನ್ನು, ಜನಪದರ ಹಲವು ಮುಖಗಳ ಸಂಸ್ಕೃತಿಯನ್ನು ಸ್ವೀಕರಿಸಿ ಅನುಭಾವದ ಮೂಲಕ ಅನಾವರಣ ಮಾಡಿದ್ದನ್ನು, ಅವರ ಅನೇಕತೆಯಲ್ಲಿ ಏಕತ್ವದ ಕಲ್ಪನೆ ಇರುವುದನ್ನು ಚರ್ಚಿಸುತ್ತಾರೆ.

ವಸಾಹತುಶಾಹಿ ಶಿಕ್ಷಣದ ಪ್ರಭಾವದಿಂದ ಮಧ್ಯಯುಗೀನ ಭಾರತೀಯ ಸಾಹಿತ್ಯ ಚರಿತ್ರೆಯನ್ನು ವಿಘಟಿತವಾಗಿ ಮಾಡಿ ಹೆಣೆಯಲಾಗಿದೆ. ಇಂಗ್ಲಿಷಿನಿಂದ ಮಧ್ಯಯುಗದ ಸಾಹಿತ್ಯ ಒಂದು ಪಲ್ಲಟವನ್ನು

ಪಡೆಯಿತು ಎಂದು ನಂಬಿದ ಇವರು ಮಧ್ಯಯುಗ ಮತ್ತು ಆಧುನಿಕತೆಯ ನಡುವಿನ ಕೊಂಡಿಯಾಗಿ, ಹುಟ್ಟಿದ ಪರಿಸರದಲ್ಲಿ ''ಕಾವ್ಯ, ಸಂಸ್ಕೃತಿ, ಆಚರಣೆ, ದುಡಿಮೆ, ವಿಶ್ರಾಂತಿ ಎಲ್ಲವೂ ಒಂದರ ಜೊತೆ ಒಂದು ಹೊಸೆದುಕೊಂಡ, ಬೆಸೆದುಕೊಂಡ''(ಪು.೧೦) ತತ್ವಪದಗಳನ್ನು ನೋಡದ ಇತಿಹಾಸಕಾರರ ಚಾರಿತ್ರಿಕ ದೋಷವನ್ನು ಗುರುತಿಸುತ್ತಾರೆ.

ಬಹುಭಾಷೆಯಲ್ಲಿ ಹಾಡಿದ ತತ್ವಪದಕಾರರು ಕನ್ನಡತನ, ಕನ್ನಡ ಸಂಸ್ಕೃತಿಗಿಂತ ಕರ್ನಾಟಕ ಸಂಸ್ಕೃತಿಯ ಮಹತ್ವದ ಬಗ್ಗೆ ಅವು ಒತ್ತಾಯಿಸುವುದನ್ನು ಚರ್ಚಿಸುತ್ತಾರೆ.

'ವಚನ-ದಾಸ ಮತ್ತು ಜನಪದ ಸಾಹಿತ್ಯದ ಹಿನ್ನೆಲೆಯಲ್ಲಿ ತತ್ವಪದಗಳನ್ನು' ನೋಡಿದ ರಾಮಚಂದ್ರೇಗೌಡರು ತತ್ವಪದವನ್ನು 'ವ್ಯವಹಾರಕ್ಕೆ ಬೇರೆಯಾದ ಯಾವುದೇ ಮಾತನ್ನು 'ತತ್ವ' ಎನ್ನುತ್ತಾರೆ ಎಂದು ಅರ್ಥೈಸುತ್ತಾರೆ. ಈ ಹಿಂದಿನ ಅನುಭಾವಿಗಳ ಪರಂಪರೆಯೊಂದಿಗೆ ತಾತ್ವಿಕವಾಗಿ ಚರ್ಚಿಸುತ್ತಾರೆ. ತತ್ವಪದಕಾರರು ಪ್ರಧಾನವಾಗಿ 'ಹಿಂದೂ ಧರ್ಮದ ವಕ್ತಾರರು, ಆ ಧರ್ಮದ ಪ್ರಚಾರಕರು ಮತ್ತು ಸೇವಕ ವರ್ಗ' ಎನ್ನುತ್ತಾರೆ.

ಉಪದೇಶಕರಂತೆ ಸಮಾಜದ ಹೊರಗಿನಿಂದ ಮಾತನಾಡುತ್ತಾರೆ ಎಂದು ಅವರನ್ನು ನಾಲ್ಕು ವರ್ಗಗಳಲ್ಲಿ ನೋಡುತ್ತಾರೆ. ೧. ತನ್ನನ್ನು ಕಳಕೊಂಡು ಇನ್ನೊಬ್ಬನಾಗುವ ತತ್ವ, ೨. ತನ್ನನ್ನು ಕಳಕೊಂಡು ಮತ್ತೇನೂ ಆಗದ ತತ್ವ, ೩. ತಾನು ತಾನೇ ಆಗುವ ತತ್ವ, ೪. ಎಲ್ಲರಂತಾಗುವ ತತ್ವ. ಇವುಗಳಲ್ಲಿ ತತ್ವಪದಕಾರರನ್ನು ಎರಡನೆಯದರಲ್ಲಿ ನಿಲ್ಲಿಸುತ್ತಾರೆ. ದುಡಿಯುವ, ದೇಹವನ್ನು ನಿರಾಕರಿಸಿದ ಇವರು ವಚನಕಾರರು, ಜನಪದ ಗಾಯಕರ ಸ್ಥಾನದಲ್ಲಿ ನೋಡಲು ಸಾಧ್ಯವಿಲ್ಲ ಎಂದು ಕೆಲವು ವ್ಯತ್ಯಾಸವನ್ನು ಗುರುತಿಸುತ್ತಾರೆ.[೩೯] ಆದರೆ ಹಿ.ಶಿ.ರಾಮಚಂದ್ರೇಗೌಡರು ತತ್ವಪದಕಾರರ ಕೆಲವು ರಚನೆಗಳನ್ನು ಬಳಸಿಕೊಂಡು ಹೀಗೆ ಹೇಳಲು ಸಾಧ್ಯ. ಆದರೆ ಬಹುಸಾಂಸ್ಕೃತಿಕ, ಹಿನ್ನೆಲೆಯಿಂದ ಬಂದ ಕಡಕೋಳ, ಘನಮಠದಾರ್ಯ, ಕೂಡಲೂರು ಮುಂತಾದ ತತ್ವಪದಕಾರರಿಗೆ ಈ ಮಾತನ್ನು ಅನ್ವಯಿಸುವುದು ಕಷ್ಟವಾಗುತ್ತದೆ. ಇದೊಂದು ಏಕಮುಖಿ ನೆಲೆಯ ತೀರ್ಮಾನದಂತೆ ಅನಿಸುತ್ತದೆ.

ಚಂದ್ರಶೇಖರ ನಂಗಲಿ ಅವರು 'ತತ್ವಪದಗಳ ಭಾಷೆ ಮತ್ತು ಬಂಧ' ಲೇಖನದಲ್ಲಿ ಪೂರ್ವಧ್ಯಾನಿತ ಕಾವ್ಯಭಾಷೆ ಮತ್ತು ಧ್ಯಾನಪೂರ್ವ ಕಾವ್ಯಭಾಷೆಗಳಿಗಿರುವ ವ್ಯತ್ಯಾಸಗಳನ್ನು ಗುರುತಿಸಿದ್ದಾರೆ. 'ಇದುವರೆಗೆ ಕನ್ನಡದಲ್ಲಿ ನಡೆದಿರುವ ಶೈಲಿಶಾಸ್ತ್ರದ ವಿಶ್ಲೇಷಣೆಗಳು ಪೂರ್ವಧ್ಯಾನಿತ ಕಾವ್ಯ ಭಾಷೆಗೆ ಅನ್ವಯಿಸಲು ಬರುವುದಿಲ್ಲ' ಎನ್ನುವ ಮೂಲಕ ಧ್ಯಾನಪೂರ್ವ ಕಾವ್ಯಭಾಷೆಯ ವಿಶ್ಲೇಷಣೆ ಮಾಡಿದ್ದಾರೆ. 'ಧ್ಯಾನಪೂರ್ವ ಕಾವ್ಯವು ಬದುಕಿನ ಉಪವಸ್ತುವಾಗಿರುವುದನ್ನು'[೪೦] ಗುರುತಿಸುತ್ತಾರೆ. ವಚನ ಸಾಹಿತ್ಯ, ಜನಪದ ಸಾಹಿತ್ಯ, ತತ್ವಪದ ಸಾಹಿತ್ಯ ಪೂರ್ವಧ್ಯಾನಿತವಾದ ಕಾವ್ಯವಲ್ಲ, ಸಹಜವಾದ ಅಭಿವ್ಯಕ್ತಿಗಳು ಎನ್ನುತ್ತಾರೆ. ಅವರು

ತತ್ವಪದಗಳನ್ನು ಕನ್ನಡ ಕಾವ್ಯ ಪರಂಪರೆಯ ಮುಖ್ಯ ಪ್ರವಾಹದ ಜೊತೆಯಲ್ಲಿಟ್ಟು ನೋಡುತ್ತಾರೆ. ವಿಶೇಷವಾಗಿ ವಚನಸಾಹಿತ್ಯದೊಡನೆ ಅವುಗಳ ಭಾಷೆ ಮತ್ತು ಬಂಧಗಳ ಬೆಡಗು ಮತ್ತು ಅಗಲೀಕರಣದ ವಿಶಿಷ್ಟ ಲಕ್ಷಣಗಳನ್ನು ತೌಲನಿಕವಾಗಿ ಪರಿಶೀಲಿಸುತ್ತಾರೆ.

ತತ್ವಪದಗಳಂಥ ರಚನೆಗಳನ್ನು ಕನ್ನಡ ಕಾವ್ಯ ಪರಂಪರೆಯಲ್ಲಿ ಸೇರಿಸುವಾಗ ಕಂಡುಬರುವ ವ್ಯತ್ಯಾಸ-ಪಕ್ಷಪಾತಗಳನ್ನು ಅವರು ಗುರುತಿಸದೇ ಮರೆಯುವುದಿಲ್ಲ. ತತ್ವಪದಗಳು, ವಚನಗಳ ಭಾಷೆ ಮತ್ತು ಬಂಧಗಳಿಗಿಂತ ಹೇಗೆ ಬಹುಮುಖವಾಗಿ ಪ್ರಕಟಗೊಂಡಿವೆ ಎಂಬುದನ್ನು ಶರೀಫ್, ಕೈವಾರ ನಾರಾಯಣಪ್ಪ ಮತ್ತು ಗಟ್ಟಿಹಳ್ಳಿ ಅಂಜಿನಪ್ಪನ ರಚನೆಗಳ ಅಭಿವ್ಯಕ್ತಿ ಕ್ರಮಗಳ ಮೂಲಕ ಚರ್ಚಿಸುತ್ತಾರೆ. ನಿದರ್ಶನದಿಂದ ನಿರ್ಣಯದ ಕಡೆಗೆ ಸಾಗುವ ವಚನಗಳ ಅನುಗಮನ ವಿಧಾನ ಹಾಗೆಯೇ ನಿರ್ಣಯದಿಂದ ನಿದರ್ಶನದ ಕಡೆಗೆ ಚಲಿಸುವ ತತ್ವಪದಗಳ ನಿಗಮನ ವಿಧಾನಗಳನ್ನು ಉದಾಹರಣೆ ಸಮೇತ ವಿಶ್ಲೇಷಿಸುತ್ತಾರೆ.

ಯಾವ ಭೇದಗಳೂ ಇಲ್ಲದೆ ಒಲಿದಂತೆ ಹಾಡಿದ ಈ ರಚನೆಗಳು ಮುಕ್ತವಾದವು ಎನ್ನುವ ಸಾಮರಸ್ಯದ ನಿಲುವಿಗೂ ಬರುತ್ತಾರೆ. ಪ್ರಾದೇಶಿಕ ಹಿನ್ನೆಲೆಯಿಂದ ತತ್ವಪದಗಳನ್ನು ವಿಂಗಡಿಸಬಹುದಾದರೂ ಅವುಗಳ ಭಾಷೆ ಮಾತ್ರ ಒಂದೇ ಆಗಿದೆ(ಪು.೮೩) ಎನ್ನುತ್ತಾರೆ. ಆದರೆ ಸಮುದಾಯದ ಭಾಷೆಯೇ? ಅನುಭಾವದ ಭಾಷೆಯೇ? ಪ್ರಭುತ್ವದ ಭಾಷೆಯೇ? ಪ್ರಭುತ್ವ ವಿರೋಧದ ಭಾಷೆಯೇ? ಅವರು ಹೇಳುವ ಬಹುರೂಪಾತ್ಮಕವಾದ ಒಂದೇ ಭಾಷೆ ಯಾವುದು? ತಿಳಿಯುವುದಿಲ್ಲ.

'ತತ್ವಪದಗಳಲ್ಲಿ ಸಮಾಜ ವಿಮರ್ಶೆ' ತಿಪ್ಪಶೆಟ್ಟಿಯವರ ಈ ಲೇಖನ ತತ್ವಪದ ಸಾಹಿತ್ಯ ಸನ್ಯಾಸಿಗಳ, ವಿರಾಗಿಗಳ, ಗಾಂಜ, ಅಫೀಮು ಸೇವಿಸುತ್ತ ಅಮಲಿನಲ್ಲಿಯೇ ಮಲಿನ ಬದುಕಿನ ಸತ್ಯವನ್ನು ತೋರುವ ಸಾಹಿತ್ಯವಾಗಿದೆ[೩೧] ಎನ್ನುತ್ತಾರೆ. ಇದರಲ್ಲಿ ಸಾಮಾಜಿಕ ವಿಮರ್ಶೆ ವಿರಳವೆನ್ನುತ್ತಾರೆ. ಆದರೂ ತತ್ವ ಪದಕಾರರು ಜನನ, ವಿವಾಹ, ಮರಣ, ಜಾತಿ, ಧರ್ಮ, ಶೀಲ, ಮಡಿ-ಮೈಲಿಗೆ, ಸಂಪತ್ತು, ಅಧಿಕಾರ, ವೃತ್ತಿ, ಅಂತಸ್ತು ಮುಂತಾದವುಗಳ ಬಗ್ಗೆ ತತ್ವಪದಕಾರರು ಸಾಮಾಜಿಕವಾಗಿ ಪ್ರತಿಭಟಿಸಿರುವುದನ್ನು ಕುರಿತು ಚರ್ಚಿಸುತ್ತಾರೆ.

ಕೈವಾರ ನಾರಾಯಣಪ್ಪನ 'ಮಾನವರೆಲ್ಲರು ಮೂತ್ರದ್ವಾರದಿಂದ ತೂರಿ ಬಂದವರು' ಎನ್ನುವ, ಪೀರಸಾಹೇಬರ 'ಕೆಟ್ಟ ಹೊಲಸುತನ ಹೊಟ್ಟೆಯೊಳಗಿಟ್ಟುಕೊಂಡು ಮುಟ್ಟಿ ಮಾಡುತ್ತೀರಿ ಶಿವಧ್ಯಾನ' ಎಂಬುವ, ಶಂಕರಾನಂದರ 'ಬ್ರಹ್ಮಬೀಜವೆ ಸರ್ವ ಯೋನಿಯೊಳು ಪುಟ್ಟಿರುವರೆಂಬುವ' ಹಾಗೆಯೇ ಕಡಕೋಳರ, ಬಾಲಲೀಲಾರ, ಶಿಶುನಾಳ ಶರೀಫರ, ಕೂಡಲೂರು ಬಸವಲಿಂಗರ ಹಾಡುಗಳು ಜನನದ ಬಗ್ಗೆ ವೈಜ್ಞಾನಿಕ ಕಟುಸತ್ಯವನ್ನು ಹೇಳುತ್ತವೆ. ಈ ಕೀರ್ತಿ ತತ್ವಪದಕಾರರಿಗೆ ಸಲ್ಲುತ್ತದೆ ಎನ್ನುತ್ತಾರೆ.

ಲೇಖಕರು ಹೇಳುವಂತೆ 'ತತ್ವಪದಕಾರರು ಹೆಣ್ಣನ್ನು ಹೀಗಳೆದಿಲ್ಲ. ಆದರೆ ಸಂಸಾರದ ವ್ಯಾಮೋಹಕ್ಕೆ ಬಿದ್ದು ಮಾನವ ಹೇಗೆ ಹಾಳಾಗುತ್ತಾನೆ ಎಂಬುದನ್ನು ತತ್ವಪದಕಾರರು ತಮ್ಮದೇ ಆದ ರೀತಿಯಲ್ಲಿ ವ್ಯಕ್ತಪಡಿಸಿದ್ದಾರೆ''[೩೨] ಎಂಬುದನ್ನು ಪೂರ್ಣವಾಗಿ ಒಪ್ಪಲಾಗದು. 'ಹೆಣ್ಣಿಗಿಚ್ಛೈಸುವರೆ ಮೂಢಾ' ಎಂಬುದಾಗಲಿ, 'ಧರೆಯೊಳೀ ಹೆಣ್ಣು ರಾಕ್ಷಸಿಯಲ್ಲದುಂಟೆ' ಎನ್ನುವುದಾಗಲಿ 'ಹೆಣ್ಣು ಮೋಹ ಚೂರಿಯಿಲ್ಲದೆ ಕೊರಳನ್ನು ಕುಯ್ಯುತ್ತದೆ' ಎನ್ನುವ ನಿಷ್ಠುರತೆಯಾಗಲಿ ಈ ರಚನೆಗಳೆಲ್ಲ ಏನನ್ನು ಸೂಚಿಸುತ್ತವೆ? ವೀರಶೈವದ ಪ್ರಭಾವವಿರುವ ತತ್ವಪದಕಾರರಿಗೆ ಹೆಣ್ಣು-ಮಾಯೆಯಾಗಿ ಯಾಕೆ ಕಂಡಳು? ಇವನ್ನೆಲ್ಲ ಗಮನಿಸಬೇಕಾಗಿದೆ.

'ನಿಜಗುಣ ಶಿವಯೋಗಿ ದೃಷ್ಟಿಯಲ್ಲಿ ಸ್ತ್ರೀ' ಎನ್ನುವ ವಿಜಯಶ್ರೀ ಸಬರದ ಅವರ ಲೇಖನ ನಿಜಗುಣರು ತಮ್ಮ ರಚನೆಗಳಲ್ಲಿ ಸ್ತ್ರೀಯನ್ನು ಕುರಿತು ತಾಳಿದ ನಿಲುವನ್ನು ಮೂರು ರೀತಿಯಲ್ಲಿ ಗುರುತಿಸುತ್ತಾರೆ. ಒಂದು ಲೌಕಿಕ, ಎರಡು ಅಲೌಕಿಕ, ಮೂರು ತಾತ್ವಿಕ. ಅಲೌಕಿಕದಲ್ಲಿ ಸ್ತ್ರೀ, ದೇವತೆಯಾಗಿ ಶಕ್ತಿರೂಪಿಣಿಯಾಗಿ, ತಾಯಿಯಾಗಿ, ಜಗದ ರಕ್ಷಕಳಾಗಿ ಕಾಣಲಾಗಿದೆ. ಹಾಗೂ ಲೌಕಿಕದಲ್ಲಿ ಸೌಂದರ್ಯದ, ಭೋಗದ ವಸ್ತುವಾಗಿ, ಮಾಯೆ-ಮೋಹಿನಿಯಾಗಿ ಕಂಡರೆ, ತಾತ್ವಿಕವಾಗಿ ಜ್ಞಾನೇಂದ್ರಿಯ, ಕರ್ಮೇಂದ್ರಿಯಗಳನ್ನು ಸೂಚಿಸುವಳಾಗಿ ಕಾಣುವಳು ಎನ್ನುತ್ತಾರೆ. ನಿಜಗುಣರು ಹೆಣ್ಣನ್ನು ನಂಬಿಕೆಗೆ ಅನರ್ಹಳು ಅಸ್ಪೃಶ್ಯಳು ಎಂದು ಜರಿಯುವುದು ಮನಃಶಾಸ್ತ್ರದ ದೃಷ್ಟಿಯಿಂದ ನೋಡಿದರೆ ನಿರಾಧಾರವೆನ್ನುವ ತೀರ್ಮಾನಕ್ಕೆ ಬರುತ್ತಾರೆ. ಆದರೆ ವಚನಕಾರರು-ತತ್ವಪದಕಾರರು ಸ್ತ್ರೀಯರನ್ನು ಅಸ್ಪೃಶ್ಯರನ್ನಾಗಿ ಕಾಣಲಿಲ್ಲ ನಿಜ. ಆದರೆ ಬಹುತೇಕ ತತ್ವಪದಕಾರರು ಸ್ತ್ರೀ ಮುಕ್ತಿ ಪಡೆಯಲು ಅರ್ಹಳಲ್ಲ ಎಂದು ಗೊಣಗುತ್ತಾರೆ. ಅಲ್ಲದೆ ತಮ್ಮ ಮುಕ್ತಿ ಕಲ್ಪನೆಗೆ ಈ ಸಂಸಾರ ಹೆಣ್ಣು ಅಡ್ಡಿ ಎಂಬ ಆತಂಕ ಬಹುತೇಕ ತತ್ವಪದಕಾರರಿಗೆ ಕಾಡಿದೆ. ಆದರೆ ವಿರಕ್ತಿಗೆ ಹೆಚ್ಚು ಒತ್ತುಕೊಟ್ಟಿದ್ದರಿಂದ ಸ್ತ್ರೀಸಮಾಜದ ಇತರ ವಿದ್ಯಮಾನಗಳು ಅವರಿಗೆ ಅಷ್ಟು ಕಾಡಿದ ವಸ್ತುಗಳಾಗಿರಲಿಲ್ಲವೆನಿಸುತ್ತದೆ.

ತತ್ವಪದಕಾರ್ತಿ ರಾಯಚೂರು ಹನುಮಂತವ್ವನನ್ನು(ವಿಜಯಶ್ರೀ ಸಬರದ) ತತ್ವಪದಕಾರರ ವಿಚಾರಗಳ ಹಿನ್ನೆಲೆಯಲ್ಲಿಟ್ಟು ಚರ್ಚಿಸಲಾಗಿದೆ. ಗುರು, ಅನುಭಾವ ಮತ್ತು ಸಾಮಾಜಿಕ, ವಿಷಯಗಳಿಗೆ ಮಹಿಳಾ ತತ್ವಪದಕಾರರು ಪುರುಷ ತತ್ವಪದಕಾರರಂತೆಯೇ ಯೋಚಿಸಿರುವುದನ್ನು ಚರ್ಚಿಸುತ್ತಾರೆ. ಆದರೆ ಹೆಣ್ಣಾದ ಹನುಮಂತವ್ವಗೆ ಯಾವ ಭಿನ್ನತೆಗಳೂ ಕಾಡಲಿಲ್ಲವೆ? ಅಕ್ಕಮಹಾದೇವಿ ತಾನು ಸತಿಯಾಗಿ ತನ್ನ ದೇವನನ್ನು ಪತಿಯೆಂದು ಕರೆದುಕೊಂಡಳು. ಹನುಮಂತವ್ವ ಎಲ್ಲದಕ್ಕೂ ಗುರುವೇ ಮುಖ್ಯವೆಂದು ಪುರುಷ ತತ್ವಪದಕಾರರಂತೆ ಹಾಡಿಕೊಂಡಿದ್ದಾಳೆ. ಈಕೆಯ ಗುರು ಕೂಡ ಪುರುಷನೇ ಆಗಿದ್ದಾನೆ. ಇಲ್ಲಿ ಸ್ತ್ರೀಯರಿಗೆ ಸ್ತ್ರೀಯರು ಗುರುವಾದ ನಿದರ್ಶನಗಳು ಯಾಕೆ ಕಂಡುಬರುವುದಿಲ್ಲ. ಇದಕ್ಕೆ ಕಾರಣಗಳೇನು? ಇಂಥ ಅಂಶಗಳು ಕೂಡ ಚರ್ಚೆಗೊಳಪಡಬೇಕಾಗಿದೆ.

ಮೀನಾಕ್ಷಿಬಾಳಿಯವರು 'ಶಿಶುನಾಳಶರೀಫ ಮತ್ತು ಕಡಕೋಳ ಮಡಿವಾಳಪ್ಪ'ನವರ ವ್ಯಕ್ತಿತ್ವವನ್ನು ಕುಸ್ತಿಪಟುಗಳಂತೆ ಮುಖಾಮುಖಿ ಮಾಡಿ ವಿಶ್ಲೇಷಿಸಿದ್ದಾರೆ. ಮಡಿವಾಳಪ್ಪ ಬಂಡಾಯದ ಗಟ್ಟಿಧ್ವನಿಯಾದರೆ, ಶರೀಫ್ ರಾಜಿಮನೋಭಾವದ ಸೌಮ್ಯ ಯೋಗಿಯಾಗಿ ಕಾಣುತ್ತಾನೆ. ತನ್ನದಲ್ಲದ ಅನ್ಯದೊಂಗು ಸಂಸ್ಕೃತಿಯಲ್ಲಿ ಗುರುತಿಸಿಕೊಂಡ ಶರೀಫ್ ಗಜಿಬಿಜಿ ಅನುಭವಿಸಿದ. ಆದರೆ ಮಡಿವಾಳಪ್ಪ ದುರ್ಬಲ ವರ್ಗದವರ ನೋವಿಗೆ ಮಿಡಿಯುವ ಪ್ರಾಣಮಿತ್ರನಾಗಿ, ಸಂಪ್ರದಾಯಗಳ ಅರ್ಥಹೀನತೆಯನ್ನು ಬಯಲಿಗೆ ಎಳೆದ ದಿಟ್ಟತನವನ್ನು ಗುರುತಿಸುತ್ತಾರೆ. ಶರೀಫರ ದ್ವಂದ್ವ ಮತ್ತು ಮಡಿವಾಳಪ್ಪನವರ ಗಟ್ಟಿತನವನ್ನು ಲೇಖನದುದ್ದಕ್ಕೂ ಚರ್ಚಿಸುತ್ತಾರೆ. ಆದರೆ ಒಂದು ಶತಮಾನದ ಅಂತರವಿರುವ ಈ ಇಬ್ಬರ ರಚನೆಗಳಲ್ಲಿ ಅವರವರ ಸಾಮಾಜಿಕ, ರಾಜಕೀಯ, ಸಾಂಸ್ಕೃತಿಕ ಸಂದರ್ಭಕ್ಕೆ ತೋರಿದ ಪ್ರತಿಕ್ರಿಯೆಗಳಲ್ಲಿ ಸಹಜವಾಗಿ ವ್ಯತ್ಯಾಸಗಳಾಗಿವೆ. ಇವುಗಳ ಹಿನ್ನೆಲೆಯಲ್ಲಿ ಇವರಿಬ್ಬರ ವ್ಯಕ್ತಿತ್ವವನ್ನು ಬೆಲೆ ಕಟ್ಟಬೇಕೇ ವಿನಃ ಕುಸ್ತಿಪಟು ಗಳಂತೆ ಎದುರುಬದುರು ತರುವುದರಲ್ಲಿ ಅಂಥದ್ದೇನು ನಿರೀಕ್ಷಿಸಲು ಸಾಧ್ಯವಿಲ್ಲ ಅನ್ನಿಸುತ್ತದೆ.

ವಿಕ್ರಮ ವಿಸಾಜಿ ಅವರು ತಮ್ಮ ಸಂಶೋಧನ ಪ್ರಬಂಧದಲ್ಲಿ (ನಾದಗಳು ನುಡಿಯಾಗಲೇ, ಪು.೨೨) ಆಧುನಿಕ ಕನ್ನಡ ಕಾವ್ಯಸೃಷ್ಟಿಯ ಮೊದಲ ದಿನಗಳಲ್ಲಿ ವಿಶಿಷ್ಟ ರಚನೆಗಳಿಂದ ಕೂಡಿದ ತತ್ವಪದಗಳನ್ನು ಗಮನಿಸದೇ ಇರುವ ಸಾಂಸ್ಕೃತಿಕ ಸ್ವಭಾವದ ಕಾರಣಗಳನ್ನು ಹುಡುಕಲು ಯತ್ನಿಸಿದ್ದಾರೆ. ಕಾಲದ ಒತ್ತಡಗಳು ಮತ್ತು ತಲ್ಲಣಗಳಿಂದ ಸೃಷ್ಟಿಯಾದ ತತ್ವಪದಗಳು ದ್ವಂದ್ವಾತ್ಮಕ ಇಕ್ಕಟ್ಟಿನಲ್ಲಿ ಸೃಷ್ಟಿಯಾಗಿವೆ. ಆಧುನಿಕ ಕನ್ನಡ ಕಾವ್ಯಕ್ಕೆ ಈ ಇಬ್ಬಂದಿತನ ಇಷ್ಟವಾಗದೇ ಹೋಗಿದೆ. ತತ್ವಪದಕಾರರ ನಿರಾಶೆ, ನಿಷ್ಠುರತೆ, ನಕಾರಾತ್ಮಕ ನೋಟ, ಭಾಷಾ ವೈಖರಿ, ಕಿರಿ ಕಿರಿ ಎನಿಸಿದೆ ಎಂದು ಅಭಿಪ್ರಾಯ ಪಡುತ್ತಾರೆ. ಬ್ರಾಹ್ಮಣ್ಯ ವಿರೋಧಿ ಗುಣ, ಜಾತಿ ಪದ್ಧತಿ ಮೀರುವ ಗುಣ, ಸಾಮಾಜಿಕ ನೈತಿಕ ನಡೆ, ಮಡಿ-ಮೈಲಿಗೆ, ದೇವಾಲಯದ ಕಲ್ಪನೆ ಈ ಕ್ರಾಂತಿಕಾರಕ ಗುಣಗಳು ಆಧುನಿಕ ಕಾವ್ಯದಲ್ಲಿ ಸೇರದೇ ಇರಲು ಕಾರಣವಾಗಿವೆ ಎಂದು ಗುರುತಿಸುತ್ತಾರೆ.

ತತ್ವಪದಗಳ ದೇಸಿನುಡಿಗಟ್ಟು ಭಾಷೆ ಮತ್ತು ಆಶಯ ಎಲ್ಲವೂ ಗಂಭೀರ ಚರ್ಚೆಗೆ ಒಳಗಾಗಿದ್ದರೆ, ಹಾಡುಗಳು ಸಂಕಲನ ರೂಪದಲ್ಲಿ ಬಂದಿದ್ದರೆ, ಆಧುನಿಕ ಕನ್ನಡ ಕಾವ್ಯಕ್ಕೆ ಹೊಸ ಆಯಾಮ ಬರಬಹುದಿತ್ತು ಎನ್ನುತ್ತಾರೆ. ಆದರೆ ಬೇಂದ್ರೆಯವರು, ಮಧುರ ಚೆನ್ನರಂತವರು ಪ್ರಾಚೀನ ಸಾಹಿತ್ಯದಲ್ಲಿ, ತತ್ವಪದಗಳಲ್ಲಿ, ಕೀರ್ತನೆಗಳಲ್ಲಿ ತಮ್ಮ ಹೊಸ ಕವಿತೆಗಳಿಗೆ ಪ್ರೇರಣೆಗಳನ್ನು ಶೋಧಿಸುತ್ತಿದ್ದುದು ಈ ಹಿನ್ನೆಲೆಯಲ್ಲಿಯೇ ಎಂಬುದು ಗಮನಾರ್ಹ.

ತತ್ವಪದಗಳು ಛಂದಸ್ಸನ್ನು ಮೀರಿ ನಿಂತಿದ್ದರೂ ಒಂದಲ್ಲ ಒಂದು ಛಂದೋ ಬಂಧಕ್ಕೆ ಒಳಪಡುವುದನ್ನು ಕೆ.ಜಿ.ನಾರಾಯಣ ಪ್ರಸಾದ್ (ಸ್ವರವಚನಗಳಲ್ಲಿ ಛಂದೋ ರೂಪಗಳು), ಬಿ.ವಿ.ಮಲ್ಲಾಪುರ

(ಸ್ವರವಚನ : ಛಂದೋ ಸ್ವರೂಪ) ಮತ್ತು ಗುರುಲಿಂಗ ಕಾಪಸೆ (ಸ್ವರವಚನಗಳ ಸಾಹಿತ್ಯಕ ಮೌಲ್ಯ) ಅವರು ಚರ್ಚಿಸುತ್ತಾರೆ.

ನುಡಿರಚನೆಯಲ್ಲಿ ಪ್ರತ್ಯೇಕ ಗಣಗಳಿರುವುದು. ಮಾತ್ರಾಲಯಗಳ ಪೈಕಿ ಲಲಿತಲಯಕ್ಕೆ ಅಗ್ರಸ್ಥಾನ ದೊರೆತಿರುವುದು. ಹಾಡುಗಳಲ್ಲಿನ ಅಂಶಷಟ್ಪದಿಯು ಚೌಪದಿಯ ರೂಪದಲ್ಲಿ ಮುಂದುವರೆದಿರುವುದು. ಹಾಡುಗಳಿಗೆ ವಿವಿಧ ಪ್ರಕಾರದ ಬಂಧಗಳನ್ನು ಬಳಸಿದ್ದರೂ ಅಂಶಛಂದಸ್ಸಿಗೇ ಮೊದಲ ಸ್ಥಾನವಿರುವುದು. ಮಾತ್ರಾ ಛಂದಸ್ಸಿಗೆ ಎರಡನೆಯ ಸ್ಥಾನವಿರುವುದು. ಆದಿಪ್ರಾಸ ನಿಯತವಾಗಿರುವುದು. ನಿಯತವಲ್ಲದ ಅಂತ್ಯ ಪ್ರಾಸ ಹೊಂದಿರುವುದು. ಹಾಗೆಯೇ ತ್ರಿಪದಿ, ಷಟ್ಪದಿಗಳು ಬಂಧಗಳ ರೂಪದಲ್ಲಿರುವುದು. ಗೊಂದಲ, ಕಣಿ, ಕೋಲುಪದ ಮುಂತಾದ ಮಟ್ಟುಗಳಲ್ಲಿ ಜಾನಪದ ಅಂಶಗಳು ಹೊಂದಿರುವುದನ್ನು ಗುರುತಿಸಲಾಗಿದೆ.

ಎಂ.ಎಂ.ಕಲಬುರ್ಗಿ ಅವರು ಸಂಪಾದಿಸಿದ 'ಸ್ವರವಚನ' ವಿಚಾರ ಸಂಕಿರಣ ಸಂಪುಟದಲ್ಲಿ ಹಲವು ಲೇಖಕರ ವಿವಿಧ ವಿಷಯಗಳ ೧೬ ಲೇಖನಗಳು ಇವೆ. ಮೊದಲ ೧೨ ಲೇಖನಗಳು ಸ್ವರವಚನ ಸಾಹಿತ್ಯದ ಉಗಮ, ಸ್ವರೂಪ, ವಸ್ತು, ಲಕ್ಷಣ, ಅಪ್ರಕಟಿತ, ಪ್ರಕಟಿತ ಹಾಡುಗಳು ಕುರಿತಂತೆಯೂ ಮತ್ತು ಹಾಡುಗಳಿಗೆ ಶಾಸ್ತ್ರೀಯವಾದ ಸಂಗೀತದ ವಿವಿಧ ರಾಗಗಳು ನಿರ್ದೇಶನಗೊಂಡಿರುವುದನ್ನು, ಅವುಗಳಲ್ಲಿ ಒಳಗೊಂಡ ಛಂದಸ್ಸನ್ನು ಈ ಸಾಹಿತ್ಯ ಕಾಲಾಂತರದಲ್ಲಿ ಬೆಳೆದು ಬಂದ ಬಗೆಯನ್ನು ಚರ್ಚಿಸುತ್ತವೆ. ಉಳಿದ ನಾಲ್ಕು ಲೇಖನಗಳಲ್ಲಿ ಹಾಡುಗಳ ಪ್ರಾದೇಶಿಕವಾದ ವಿವರಣೆ ಮಾಡಲಾಗಿದೆ. ಹೈದ್ರಾಬಾದು ಕರ್ನಾಟಕ, ಮೈಸೂರು ಕರ್ನಾಟಕ, ಮುಂಬೈ ಕರ್ನಾಟಕ ಮತ್ತು ಮದ್ರಾಸ್ ಕರ್ನಾಟಕದ ಮೌಖಿಕ ಸ್ವರವಚನಗಳ ಸಾಹಿತ್ಯ ಸ್ವರೂಪ, ಚರಿತ್ರೆ, ಅವುಗಳ ಸಂಗ್ರಹಗಳ ಸಮಸ್ಯೆ, ಖಚಿತಪಡಿಸಬೇಕಾದ ಅವಶ್ಯಕತೆ, ಹಾಡುಗಳ ಹಾಡುವ ಗಾಯಕರ ಪರಿಚಯ, ಪ್ರಾಮುಖ್ಯತೆ, ಈ ಹಾಡುಗಳ ಹಾಡುವ ಪರಂಪರೆ ಕಣ್ಮರೆಯಾಗುವ ಆತಂಕ ಉಳಿಸಿ ಬೆಳೆಸಬೇಕಾದ ಅವಶ್ಯಕತೆ ಮುಂತಾದ ಅಂಶಗಳನ್ನು ಚರ್ಚಿಸುತ್ತವೆ.

ತತ್ವಪದಕಾರರು ಅಕ್ಷರ ವಿದ್ಯೆಗಿಂತ ಅರಿವಿನ ವಿದ್ಯೆಗೆ ಮಹತ್ವ ಕೊಟ್ಟಿರುವುದನ್ನು ವೀರೇಶ ಬಡಿಗೇರ (ತತ್ವಪದಕಾರರಲ್ಲಿ ವಿದ್ಯೆಯ ಸಂಕಥನ) ಲೇಖನದಲ್ಲಿ ವಿಶ್ಲೇಷಿಸಿದ್ದಾರೆ. ವಿದ್ಯೆ ಎನ್ನುವುದು ಅವರಿಗೆ ಕಲಿಯುವುದಾಗಿರಲಿಲ್ಲ ಬದಲಿಗೆ ತಿಳಿಯುವುದಾಗಿತ್ತು. ಗ್ರಂಥಸ್ಥ ಜ್ಞಾನವನ್ನು ಅವರು ದೊಡ್ಡದೆಂದು ಭಾವಿಸುವುದಿಲ್ಲ. ಜನೋಪಯೋಗಿ ಜ್ಞಾನವನ್ನು ಒಪ್ಪಿದ್ದರು. ಇದರಲ್ಲಿ ಯಾವುದೇ ಫಲಾಪೇಕ್ಷೆಯೂ ಇರದ ಭಾವನೆ ಅವರದಾಗಿತ್ತು ಎಂದು ಚರ್ಚಿಸುತ್ತಾರೆ. ವಿದ್ಯೆಯ ಸಾಂಪ್ರದಾಯಿಕತೆಯನ್ನು ಮೀರಿದ ಇವರಿಗೆ ಸ್ವಾನುಭವದಿಂದ ಪಡೆಯುವ ಜ್ಞಾನವೇ ದೊಡ್ಡದಾಗಿತ್ತು. ಅದು ಮಾನವೀಯತೆಗೆ ಹೇಗೆ ಕಾರಣವಾಗಿದೆ ಎಂಬುದನ್ನು ವಾಸ್ತವಿಕ ನೆಲೆಗಟ್ಟಿನಲ್ಲಿ ಲೇಖನದುದ್ದಕ್ಕೂ ಚರ್ಚಿಸುತ್ತಾರೆ.

ಆದರೆ ವಸಾಹತುಶಾಹಿ ಕಾಲದಲ್ಲಿನ ಶಿಕ್ಷಣ ಕ್ರಮದ ಬದಲಾವಣೆಯು ಭಾರತದ ಮತ್ತು ಪಾರಂಪರಿಕವಾಗಿದ್ದ, ಮೌಖಿಕ ಮೂಲವಾಗಿದ್ದ ಜ್ಞಾನಕ್ಕೆ ಅಕ್ಷರದ ಮೂಲಕ ಅಧಿಕೃತತೆಯನ್ನು ತಂದಿತು. ಇದೇ ಕಾಲಘಟ್ಟದಲ್ಲಿದ್ದ ಅನೇಕ ತತ್ವಪದಕಾರರು ಬ್ರಿಟಿಷರ ಈ ಶಿಕ್ಷಣ ಕ್ರಮವನ್ನು ವಿರೋಧಿಸಿದರು. ಈ ಮೇಲೆ ವಿವರಿಸಿದಂತೆ ಮೌಖಿಕವಾದ ಜ್ಞಾನಕ್ಕೆ ಅದರಲ್ಲೂ ಅಂತರಂಗದ ಅರಿವಿನ ಜ್ಞಾನಕ್ಕೆ ಮಹತ್ವ ಕೊಟ್ಟರು. ಈ ಮೂಲಕವೇ ತೀವ್ರತರವಾಗಿ ವಿರೋಧಿಸಿದರು. ಇದು ಅವರಿಗೆ ಪ್ರಭುತ್ವವನ್ನು ವಿರೋಧಿಸುವ ಮಾರ್ಗವೂ ಆಗಿತ್ತು. ಆದರೆ ಇದೇ ಕಾಲದ ಶಿಶುನಾಳ ಷರೀಫ್ ರಚನೆಗಳಲ್ಲಿ ವಸಾಹತುಶಾಹಿ ತಂದ ಬದಲಾವಣೆ ಮತ್ತು ಅವರ ಶಿಕ್ಷಣ ಕ್ರಮವನ್ನು ಸ್ವೀಕರಿಸುವ ಮತ್ತು ನಿರಾಕರಿಸುವ ದ್ವಂದ್ವ ಅವರ ರಚನೆಗಳಲ್ಲಿ ಕಾಣುತ್ತವೆ.

ಶಿಶುನಾಳ ಶರೀಫ, ನರೋಣದ ಹೈದರಲಿ ಮತ್ತು ಮೋಟ್ನಳ್ಳಿಹಸನಸಾಬ ಇಂತವರು ಪಾಠ ಮಾಡುವ ಗಾಂವಠೀ ಶಿಕ್ಷಕರಾಗಿದ್ದರು ಎಂಬುದು ಗಮನಾರ್ಹ. ಹೀಗಾಗಿ ತತ್ವಪದಕಾರರ ಕಾಲದ, ಪ್ರದೇಶದ, ಬದುಕಿನಲ್ಲಿ ಉಂಟಾದ ತಲ್ಲಣಗಳ ಹಾಗೂ ರಾಜಕೀಯ, ಸಾಂಸ್ಕೃತಿಕ ಸಂದರ್ಭದ ಹಿನ್ನೆಲೆಯಲ್ಲಿ ಅವರ ವಿದ್ಯೆಯ ವೈರುಧ್ಯಾತ್ಮಕ ಸಂಕಥನವನ್ನು ಗ್ರಹಿಸಬೇಕಾಗಿದೆ.

ಆರೂಢ, ಅನುಭಾವಿ ಅಧ್ಯಯನಗಳಲ್ಲಿ ಕಾಣಿಸಿರುವ 'ಮುಸ್ಲಿಂ ತತ್ವಪದಕಾರರು' ಈ ಪರಿಭಾಷೆಯ ಹಿಂದೆ ಎರಡು ಮುಖ್ಯ ತಾತ್ವಿಕ ಹಾಗೂ ಸಾಂಸ್ಕೃತಿಕ ಒತ್ತಾಸೆಗಳಿರುವುದನ್ನು ರಹಮತ್ ತರೀಕೆರೆ (ಮುಸ್ಲಿಂ ತತ್ವಪದಕಾರರು : ಹೀಗೆನ್ನುವುದು ಯಾಕೆ ಕಷ್ಟ?) ಅವರು ತಮ್ಮ ಲೇಖನದಲ್ಲಿ ಗುರುತಿಸುತ್ತಾರೆ. ಒಂದು ಜಾತಿ ಹಿನ್ನೆಲೆಯ ಸಾಂಸ್ಕೃತಿಕ ಐಡೆಂಟಿಟಿಯ ವಿಚಾರಧಾರೆಗೆ ಮುಖಾಮುಖಿ ಮಾಡಲು ಸೆಕ್ಯೂಲರಿಷ್ಟರು ಕನ್ನಡದ ಅನುಭಾವಿ ಪರಂಪರೆಯನ್ನು ಮುಂದುಮಾಡಿದ್ದು, ಅದು ಸಮಕಾಲೀನ ರಾಜಕೀಯ ಹತಾಶೆಯ ಸ್ಥಿತಿಯಾಗಿದೆ ಮತ್ತು ಇದು ವರ್ತಮಾನದ ಅಗತ್ಯಗಳಿಗನುಗುಣವಾಗಿ ಚರಿತ್ರೆಯನ್ನು ರೂಪಿಸಿಕೊಳ್ಳುವ ಮಾರ್ಗವಾಗಿದೆ ಎಂದು. ಎರಡನೆಯದಾಗಿ ಉದಾರವಾದಿ ಸಾಮರಸ್ಯವಾದವು. ತನ್ನ ಗ್ರಹಿಕೆಯ ಆಳದಲ್ಲಿ ಹೇಗೆ ಮೂಲಭೂತವಾದದ ತರ್ಕವನ್ನು ಹೊಂದಿದೆ ಎಂಬುದನ್ನು ವಿಶ್ಲೇಷಿಸುತ್ತಾರೆ. ಈ ಎರಡನೆಯ ಅಂಶವನ್ನು ಅವರ ಲೇಖನ ಮುಖ್ಯವಾಗಿ ಸಾಂಸ್ಕೃತಿಕ ಸಂದರ್ಭದಲ್ಲಿಟ್ಟು ಚರ್ಚಿಸುತ್ತದೆ. ಒಟ್ಟಿನಲ್ಲಿ ಅನುಭಾವಿಗಳೆಂಬ ಬಹುರೂಪಿ ಆಕೃತಿಗಳು ಏಕರೂಪೀ ಆಕೃತಿಗಳ ಹಠದಲ್ಲಿ ಅನಾಥವಾಗುತ್ತಿರುವ ಇಂದಿನ ಸ್ಥಿತಿಯಲ್ಲಿ ಅನುಭಾವಿ ಪರಂಪರೆಯನ್ನು ಸಂಕರಶೀಲವಾದ ಅದರ ಎಲ್ಲ ಆಯಾಮಗಳ ಹಿನ್ನೆಲೆಯಲ್ಲಿ ಚರ್ಚಿಸಬೇಕಾದ ತುರ್ತನ್ನು ಅಗತ್ಯವನ್ನು ಹೇಳುತ್ತದೆ.

ಮಹಾಲಿಂಗ ಯಾಳಗಿ ಅವರ 'ಕಾದಂಬರಿಕಾರರ ದೃಷ್ಟಿಯಲ್ಲಿ ನಿಜಗುಣರು' ಪ್ರಸ್ತುತ ಲೇಖನವು ನಿಜಗುಣರ ಕುರಿತ ಎಚ್.ತಿಪ್ಪೇರುದ್ರಸ್ವಾಮಿಯವರ 'ಜ್ಯೋತಿ ಬೆಳಗುತಿದೆ' ದೇವೇಂದ್ರಕುಮಾರ ಹಕಾರಿಯವರ 'ಚೆಲ್ವಕೋಗಿಲೆ' ಮತ್ತು ಶಾಂತಲಾ ಯೋಗಿ ಯಡ್ರಾವಿಯವರ 'ಜಾಣರ ದೇವ' ಈ ಮೂರು ಕಾದಂಬರಿಗಳ ವಿಶ್ಲೇಷಣೆ ಮಾಡುತ್ತದೆ.

'ಜ್ಯೋತಿ ಬೆಳಗುತಿದೆ' ರಾಜನ ತಾಮಸ ಶಕ್ತಿಗಳ ಮೇಲೆ ಸ್ನೇಹ ತಾತ್ವಿಕತೆ ದಿಗ್ವಿಜಯ ಸಾಧಿಸಿದ್ದನ್ನು, ಲೋಕಾನುಕಂಪ ಪಡೆದಿದ್ದನ್ನು, ಹೆಣ್ಣು ಸಂಸಾರ ಸಾಧನೆಗೆ ಮುಳುವಾಗುತ್ತದೆ ಎಂದು ತೊರೆದು ನಿಜಗುಣರು ಸಮಾಜದ ಜ್ಯೋತಿಯಾದದ್ದನ್ನು ವಿವರಿಸುತ್ತದೆ.

ಆದರೆ ಹಕಾರಿಯವರ ಮತ್ತು ಶಾಂತಲಾರ ಕಾದಂಬರಿಗಳಲ್ಲಿ ನಿಜಗುಣರ ಸಾಧನೆಯಲ್ಲಿ ಹೆಣ್ಣು ಸಹಕಾರದ, ಆದರ್ಶಸತಿಯಾಗಿ, ಪಾರಮಾರ್ಥಿಕ ಸಾಧನೆಯಲ್ಲಿ ಮುನ್ನೆಡೆದ ಸ್ತ್ರೀಯಾಗಿ, ಮಾದೇವಿಯಾಗಿ ಚಿತ್ರಿಸಲಾಗಿದೆ. ಲೌಕಿಕ ಜೀವನ ವಿಕಾಸದ ವಿವಿಧ ಮಜಲುಗಳನ್ನು ವಿವರಿಸುವ ಮೂಲಕ ನಿಜಗುಣರು ಆಧ್ಯಾತ್ಮಿಕವಾಗಿ ಹೇಗೆ ಬೆಳೆದರೆಂಬುದನ್ನು ತೋರಿಸಲು ಯತ್ನಿಸಿರುವುದನ್ನು ಚರ್ಚಿಸುತ್ತಾರೆ. ಈ ಮೂರು ಕಾದಂಬರಿಗಳಲ್ಲಿ ನಿಜಗುಣರೇ ಕೇಂದ್ರ ವ್ಯಕ್ತಿಯಾಗಿದ್ದಾರೆ. ಆದರೆ ನಿಜಗುಣರ ರಾಜಕೀಯ ಜೀವನ ಇಲ್ಲಿಲ್ಲ. ಕವಿಯಾಗಿ ವತ್ಸಲರಾಗಿ, ಕಲಾವಿದರಾಗಿ, ಅಧ್ಯಾತ್ಮ ಜಿಜ್ಞಾಸುವಾಗಿ, ಆದರ್ಶಪತಿಯಾಗಿ ಕಾಣಿಸಿಕೊಂಡಿರುವುದನ್ನು ಗುರುತಿಸುತ್ತಾರೆ. ಪತಿಗೆ ತಕ್ಕ ಸತಿಯಾಗಿ, ಕಾದಂಬರಿಗಳಲ್ಲಿ ನಿಜಗುಣರ ಹೆಂಡತಿ 'ಸರ್ವಮಂಗಳೇ/ಕಲ್ಯಾಣಿ' ಪಾತ್ರಗಳನ್ನು ಸೃಷ್ಟಿಸಲಾಗಿದೆ. ಆದರೆ ಗಂಭೀರವಾದ ತಾತ್ವಿಕ ವಿಚಾರಗಳ ಸರಳೀಕರಣ, ಆಕರ್ಷಕ ನಿರೂಪಣೆ, ಅನುಭಾವದ ಸಮ್ಮೋಹನದ ಭಾರದಿಂದಾಗಿ 'ಜ್ಯೋತಿ ಬೆಳಗುತಿದೆ, ಜಾಣರ ದೇವ' ಓದುಗರ ಮೆಚ್ಚುಗೆ ಪಡೆಯುತ್ತವೆ. ಆದರೆ ಚೆಲ್ವಕೋಗಿಲೆ ಸಂವಿಧಾನ, ಭಾಷೆ, ತಂತ್ರ, ಪಾತ್ರಗಳಲ್ಲಿ ಸಂಕೀರ್ಣತೆಯಿದೆ. ಕಲ್ಪನೆಗೇ ಹೆಚ್ಚು ಒತ್ತು ಕೊಡಲಾಗಿದೆ. ಆದ್ದರಿಂದ ಓದುಗರನ್ನು ಆಕರ್ಷಿಸುವಲ್ಲಿ ಕಾದಂಬರಿ ಸೋಲುತ್ತದೆ ಎಂಬ ಅಂಶಗಳನ್ನು ಚರ್ಚಿಸುತ್ತಾರೆ.

ಚಿಂತಾಮಣಿ ಕೊಡ್ಲಕೆರೆ ಅವರು ತಮ್ಮ ಸಂಶೋಧನ ಪ್ರಬಂಧದಲ್ಲಿ(ಪು.೨೪೯-೨೬೫) ಕೆಲವು ತತ್ವಪದಗಳ ಕುರಿತು ಟಿಪ್ಪಣಿ ಮಂಡಿಸಿದ್ದಾರೆ. ಲೌಕಿಕ ಘಟನೆಗಳ ಮೂಲಕ ಅನುಭಾವವನ್ನು ಗ್ರಹಿಸುವುದು. ಆ ಮೂಲಕ ವೈಯಕ್ತಿಕ ಅರಿವಿನ ಅಧ್ಯಾತ್ಮ ಆತ್ಮಶುದ್ಧಿ, ಸಾಧನೆ ಕುರಿತ ಚಿಂತನೆ ನಡೆಸಿರುವುದನ್ನು ನಿಜಗುಣರ 'ಜ್ಯೋತಿ ಬೆಳಗುತಿದೆ' 'ಕೋಗಿಲೆ ಚೆಲ್ವ ಕೋಗಿಲೆ' ಮುದ್ವೀರ ಸ್ವಾಮಿಗಳ 'ತಾಲೆಲೋ ತಾಲೆಲೋ' ಚನ್ನೂರ ಜಲಾಲಸಾಹೇಬರ 'ಸಬಕಹತೆ ಈಶ್ವರ ಅಲ್ಲಾ' ಶಂಕರಾನಂದಯೋಗಿಯ ಹಂಸನಾಗಲೋ ಪರಮ ಹಂಸನಾಗಲೋ, ಚಿದಾನಂದಾವಧೂತರ 'ಚಿಂತ್ಯಾಕೆ ಮಾಡುತಿದ್ದಿ ಚಿನ್ಮಯ ನಿದ್ದಾನೆ' ಮತ್ತು ಅಜ್ಞಾತ ಕವಿಯ 'ಈಸಿ ಈಸಿ ನಾ ದಣಕೊಂಡೆ' ಎಂಬ ಹಾಡುಗಳ ಮೂಲಕ ವಿವರಿಸಿ ಚರ್ಚಿಸುತ್ತಾರೆ.

ನಿಜಗುಣರ 'ಶಿವಕಾರುಣ್ಯ ಸ್ಥಲ'ದಲ್ಲಿ ಬರುವ 'ಕೋಗಿಲೆ ಚೆಲ್ವ ಕೋಗಿಲೆ' ಪದ್ಯ ಕುರಿತು ಕಾಮನ ಸಂಗವನ್ನು ಬಿಟ್ಟು ಕಾಮಾರಿಯನ್ನು ಧ್ಯಾನಿಸುವ ಅಗತ್ಯವನ್ನು ಕುರಿತದ್ದು ಮತ್ತು ಮನಸ್ಸಿಗೆ ಸಂಬಂಧಿಸಿದ್ದಾಗಿದೆ. ಹಾಗಾಗಿ ಇದೊಂದು ಮನೋವೈಜ್ಞಾನಿಕ ವಿಶ್ಲೇಷಣೆ ಮಾಡುವಂತದು ಎಂದು ತಮ್ಮ ಟಿಪ್ಪಣಿಯಲ್ಲಿ ವೀರೇಶ ಬಡಿಗೇರ ಮಂಡಿಸುತ್ತಾರೆ. ನಿಜಗುಣರಿಗೆ ಮನಸ್ಸು ಕೋಗಿಲೆ, ಮುದ್ದುಗಿಳಿಯಾಗಿದೆ.

ಮನಸ್ಸು ಮರ್ಕಟದಂತೆ ಆಡದೆ ಯಾವಾಗಲೂ ಶಿವನಲ್ಲಿ ಐಕ್ಯವಾಗುವ ಪರಿಯನ್ನು ಕುರಿತು ಚರ್ಚಿಸುತ್ತಾರೆ. ಆಸೆ, ಅರ್ಥವನ್ನು ತೊರೆದು ಜೀವಾತ್ಮ ಸಾಧಿಸಬೇಕಾದ ಗುರಿಯಾಗಿದೆ. ಇದು ಕಾಮದ ವಿವಿಧ ಪ್ರವೃತ್ತಿಗಳನ್ನು ಪರಿಚಯಿಸುತ್ತದೆ ಎಂದು ಸಾಧನೆಗೆ ಅನೇಕ ಮಾರ್ಗಗಳಿರುವುದನ್ನು ಈ ಪದ್ಯದಲ್ಲಿ ಗುರುತಿಸುತ್ತಾರೆ. ಹಾಗೆಯೇ ದೇಹದ ನಶ್ವರತೆ, ಜೀವದ ಚಂಚಲತೆ, ಆ ಚಂಚಲತೆಗೆ ಪರಿಹಾರ ಮಾರ್ಗವೂ ಇರುವುದನ್ನು ಚರ್ಚಿಸುತ್ತಾರೆ.

"ಎಂಥ ಆಕಳ ಕೊಟ್ಟ ಗುರು ಕಾಮದೇನು | ಹಗಲು ಇರುಳು ಹಾಲರಿವದೊಂದೇ ಸವನ!" ಕಡಕೋಳ ಮಡಿವಾಳಪ್ಪನ(ಕಪಲಿ) ಈ ಹಾಡಿನ ಮೂಲಕ ಭಕ್ತಿ ಮತ್ತು ಭಕ್ತನ ಹಲವು ಮುಖಗಳ ಸಾಧ್ಯತೆಯನ್ನು ಅದು ಹೇಗೆ ಒಳಗೊಂಡಿದೆ ಎಂಬುದನ್ನು ಲೇಖಕರು ವಿವರಿಸಿದ್ದಾರೆ. ಕಾಮ, ಮುಕ್ತಿ, ದಯಾಗುಣ, ದೇಹದಂಡನೆ, ಕ್ರಿಯಾಚರಣೆಗಳು ಹೇಗೆ ಹಲವು ಮುಖಗಳಿಗೆ ತೆರೆದುಕೊಳ್ಳುತ್ತವೆ. ಕಪಲಿ, ಆಕಳು, ಶಿವಪುರ, ಸಾವಿರಮೊಲಿ, ಹೈನು, ಭೌತಿಕ ಜಗತ್ತಿನ ಈ ಪ್ರತಿಮೆಗಳು ಅನುಭಾವದ ಕಾಣ್ಕೆಗೆ ಹೇಗೆ ಸಾಧನವಾಗಿ ಒದಗುತ್ತವೆ ಎಂಬುದನ್ನು ಮಂಡಿಸುತ್ತಾರೆ.

ಆಧುನಿಕ ಯುಗದ ಅನುಭವಕ್ಕೆ ಒಳಗಾದ ಶರೀಫರು ಅಲ್ಲಿನ ಬದಲಾವಣೆಗಳನ್ನು ಸಂಭ್ರಮ-ಬೆರಗುಗಳಿಂದ ನೋಡುತ್ತಾ 'ಸೂಜಿಯೇ ನೀನು ಸೂಜಿಯೇ' ಈ ಹಾಡಿನ ಮೂಲಕ(ಅನುಭಾವದ ಮೂಲಕ) ತಮ್ಮ ನಿಲುವನ್ನು ವ್ಯಕ್ತಪಡಿಸಿದ್ದನ್ನು ಅಮರೇಶ ನುಗಡೋಣಿ ಅವರ ಟಿಪ್ಪಣಿ ವಿವರಿಸುತ್ತದೆ. ನಿರ್ದಿಷ್ಟವಾಗಿ ಈ ಹಾಡಿನ ನಿಲುವು ಇದೆ ಎಂದು ಹೇಳಲು ಹೋಗುವುದಿಲ್ಲ. ತರ್ಕಕ್ಕೆ ಸಿಗದ ವಿವರಗಳಿರುವುದನ್ನು ಲೇಖಕರು ಬಲ್ಲರು. ಈ ಎಚ್ಚರಿಕೆಯಿಂದಲೇ ಅದನ್ನು ಅನುಭಾವದ ಶಕ್ತಿ ಎಂದು ಕರೆಯುತ್ತಾರೆ.

ಜ್ಞಾನ-ಕ್ರಿಯೆಗಳ ಸಮನ್ವಯ ಸಾಧಿಸದೇ ಹೋದರೆ ಜ್ಞಾನ ಅನ್ನುವುದು ಕೇವಲ ಉಳ್ಳವರ ವಶವಾಗುವ ಅಪಾಯವನ್ನು ಆತಂಕವನ್ನು ಶರೀಫರ ಈ ಹಾಡಿನ ಮೂಲಕ ಕಂಡುಕೊಂಡಿದ್ದಾರೆ.

ಯೋಗ ಪ್ರತಿಪಾದನ ಸ್ಥಲದಲ್ಲಿ ಬರುವ ಸರ್ಪಭೂಷಣರ 'ಕಾಕುಪೋಕು ವಿದ್ಯೆಗಳನೇಕ ವಿರ್ದರೇನು...' ಈ ಹಾಡನ್ನು ಅರಿವು ಪಡೆದವರೆಂಬ ಸೋಗಲಾಡಿಗಳನ್ನು ಭಂಜಿಸುವ ಉದ್ದೇಶದಿಂದ ಬರೆದಂತೆ ತೆಲಗಾವಿ ಅವರು ವಿವರಿಸುತ್ತಾರೆ. ವೇದಾಂತ ರೀತಿಯಲ್ಲಿ ಜ್ಞಾನವನ್ನು ಹೇಳಲು ಪ್ರಯತ್ನಿಸಿದ್ದನ್ನು ಜೀವನಿಗೆ ಮೋಕ್ಷ ಕೊಡುವುದೇ ನಿಜವಾದ ಜ್ಞಾನವಾಗಿರುವುದು ಈ ಹಾಡಿನಲ್ಲಿ ಪ್ರತಿಪಾದಿಸಿದ್ದನ್ನು ಹೇಳುತ್ತಾರೆ. ಕೇವಲ ಉದರ ಪೋಷಣೆಗೆ ಜ್ಞಾನವು ಬಳಕೆಯಾಗುವುದನ್ನು ಈ ಹಾಡು ಖಂಡಿಸುತ್ತದೆ ಹಾಗೂ ಸರ್ಪಭೂಷಣರ ವೈಚಾರಿಕ ನಿಲುವು ಮಾನವನ ಭ್ರಾಮಕತನವನ್ನು ನಿವಾರಿಸುವುದೇ ಆಗಿದೆ ಎನ್ನುತ್ತಾರೆ.

ಒಟ್ಟಿನಲ್ಲಿ ಬಹುತೇಕ ಲೇಖನಗಳು ನಿರ್ದಿಷ್ಟವಾದ ನಿಲುವಿನಲ್ಲಿಯೇ ವಿವರಿಸುವ ಪ್ರಯತ್ನ ಮಾಡುತ್ತವೆ.

## ೪.೪. ಸ್ವತಂತ್ರ ಅಧ್ಯಯನ ಕೃತಿಗಳು

ವ್ಯಕ್ತಿಯೊಬ್ಬ ತಾನೇ ಸ್ವತಂತ್ರವಾಗಿ ನಡೆಸಿದ ಅಧ್ಯಯನಗಳನ್ನು ಈ ಭಾಗದಲ್ಲಿ ಚರ್ಚಿಸಲಾಗಿದೆ. ತತ್ವಪದ ಸಾಹಿತ್ಯ ಅಧ್ಯಯನದ ಬೆಳವಣಿಗೆಯನ್ನು ಗಮನಿಸಿದಾಗ ಮುಖ್ಯವಾಗಿ ಏಳು-ಎಂಟು ಕೃತಿಗಳು ಮಾತ್ರ ಬಂದಿವೆ. ಅವು ಕವಿಕೇಂದ್ರಿತ ಮತ್ತು ಪ್ರಾದೇಶಿಕವಾಗಿ ನಡೆಸಿದ ಅಧ್ಯಯನಗಳಾಗಿವೆ. ಸ್ವತಂತ್ರ ಅಧ್ಯಯನಗಳು ವ್ಯಕ್ತಿನಿಷ್ಠತೆಯನ್ನು ಮುಖ್ಯವೆಂದು ತಿಳಿದಿವೆ. ಆದರೂ ಅವೆಲ್ಲವೂ ಪ್ರಚಲಿತ ಅಧ್ಯಯನದ ತಾತ್ವಿಕತೆಗೆ ಬದ್ಧವಾದಂತೆ ತೋರುತ್ತವೆ. ಬಿಡಿಬಿಡಿಯಾಗಿ ಕಂಡರೂ ಅವುಗಳ ಹಿಂದೆ ಏಕಾಕಾರದ ಚಿಂತನಕ್ರಮವನ್ನು ಕಾಣಬಹುದು. ಈ ಹಿನ್ನೆಲೆಯಲ್ಲಿ ಬಂದ 'ಕನ್ನಡದಲ್ಲಿ ಕೈವಲ್ಯ ಸಾಹಿತ್ಯ(೧೯೮೩ : ಎಚ್.ತಿಪ್ಪೇರುದ್ರಸ್ವಾಮಿ), ಶಿಶುನಾಳ ಶರೀಫ ಸಾಹೇಬರು(೧೯೯೨ : ಶಿನಾನಂದ ಗುಬ್ಬಣ್ಣವರ), 'ನುಡಿವ ಬೆಡಗು'(೧೯೯೯: ಅಮರೇಶ ನುಗಡೋಣಿ), ಸರ್ಪಭೂಷಣ ಶಿವಯೋಗಿ(೨೦೦೪: ಜಿ.ಎಸ್.ಶಿವರುದ್ರಪ್ಪ), ಬೀದರ್ ಜಿಲ್ಲೆಯ ತತ್ವಪದಕಾರರು(೨೦೦೬ : ಗುರುಲಿಂಗಪ್ಪ ಧಬಾಲೆ), ಬಿಂಬದೊಳಗಣ ಪ್ರಾಣ(೨೦೦೭ : ಹೆಬ್ಬಾಲೆ ಕೆ.ನಾಗೇಶ್), ತತ್ವಪದಕಾರರು ಮತ್ತು ವಸಾಹತುಶಾಹಿ ವ್ಯವಸ್ಥೆ(೨೦೦೮ : ಡಿ.ರಘುನಾಥರಾವ್), ಕೃತಿಗಳನ್ನು ಪರಿಶೀಲಿಸಲಾಗಿದೆ. ಈ ಅಧ್ಯಯನ ಕೃತಿಗಳ ಸ್ವರೂಪ ಮತ್ತು ಅವು ಚರ್ಚಿಸಿದ ಅಂಶಗಳು, ಎತ್ತಿದ ತಾತ್ವಿಕ ಪ್ರಶ್ನೆಗಳನ್ನು ಕಂಡುಕೊಳ್ಳಲಾಗಿದೆ.

### ೪.೪.೧. ಕನ್ನಡದಲ್ಲಿ ಕೈವಲ್ಯ ಸಾಹಿತ್ಯ

ಪ್ರಸ್ತುತ ಕೃತಿಯಲ್ಲಿ ತಿಪ್ಪೇರುದ್ರಸ್ವಾಮಿಗಳು ಮಾಡಿದ ಮೂರು ಭಾಷಣಗಳು ಇವೆ. ನಿಜಗುಣ ಶಿವಯೋಗಿಗಳ 'ಕೈವಲ್ಯ ಪದ್ಧತಿ', ಸರ್ಪಭೂಷಣ ಶಿವಯೋಗಿಗಳ 'ಕೈವಲ್ಯ ಕಲ್ಪವಲ್ಲರಿ' ಬಾಲಲೀಲಾ ಮಹಾಂತ ಶಿವಯೋಗಿಗಳು ಮತ್ತು ಇತರರ ಕುರಿತ ರಚನೆಗಳನ್ನು ಅಧ್ಯಾತ್ಮದ ಹಿನ್ನೆಲೆಯಲ್ಲಿ ವಿಶ್ಲೇಷಿಸಲಾಗಿದೆ.

ಮುಖ್ಯವಾಗಿ ಈ ಕೃತಿಯ ಉದ್ದೇಶ 'ಕೈವಲ್ಯ ಸಾಹಿತ್ಯ'ದ ಶಿಖರಗಳನ್ನು ಕಂಡುಕೊಳ್ಳುವುದು. ಇದಕ್ಕೊಂದು ಪರಂಪರೆಯನ್ನು ಕಟ್ಟಿಕೊಡುವುದಾಗಿದೆ. ಇದರ ನೆರಳಿನಲ್ಲೆ ಕಡಕೋಳರ, ಕೆಸ್ತೂರ ದೇವರ, ಶರೀಫ್, ಕೂಡಲೂರು, ಶಂಕರಾನಂದ ಇತರರ ತತ್ವಪದಗಳನ್ನು ಒಟ್ಟಾಗಿ ನೋಡುವುದಾಗಿದೆ. ಕೈವಲ್ಯ ಸಾಹಿತ್ಯದ ಸ್ಥೂಲ ಪರಿಚಯ, ಅದರ ಸ್ವರೂಪ, ವೈವಿಧ್ಯವನ್ನು ಕಂಡುಕೊಳ್ಳುವುದು ಇಲ್ಲಿನ ಮುಖ್ಯ ಆಶಯವಾಗಿದೆ. ಹಾಡುಗಳ ಆಧ್ಯಾತ್ಮಿಕ ನಿಲುವು, ಆಂತರಿಕ ಸತ್ವ ಮುಂದಿನ ಕೈವಲ್ಯ ಸಾಹಿತ್ಯಕ್ಕೆ ಹೇಗೆ ಪ್ರೇರಕವೂ, ಪೋಷಕವು ಆಗಿತ್ತೆಂಬುದನ್ನು ಚರ್ಚಿಸಲಾಗಿದೆ.

ತತ್ವಪದ ಹಾಡುಗಳ ಮೂಲಕ ಅನುಭಾವ, ಮುಕ್ತಿಯ ಕುರಿತ ಸ್ಪಷ್ಟ ಅರಿವನ್ನು ಈ ಕೃತಿ ಓದುಗರಿಗೆ ನೀಡುತ್ತದೆ. 'ಕೈವಲ್ಯ ಸಾಹಿತ್ಯ' ನಿಜಗುಣರ ಮೂಲಕ ಕನ್ನಡ ಸಾಹಿತ್ಯ ಸಂದರ್ಭದಲ್ಲಿ ಸೃಷ್ಟಿಯಾದ ವಿಶಿಷ್ಟ ಪ್ರಕಾರ ಎಂದು ಅವರು ಅಭಿಪ್ರಾಯಪಡುತ್ತಾರೆ. ಅಂದರೆ ಕೈವಲ್ಯ ಸಾಹಿತ್ಯಕ್ಕೆ ಒಂದು ಪರಂಪರೆ ಕಟ್ಟುವ ಇವರ ಪ್ರಯತ್ನ ಮೆಚ್ಚಬಹುದಾದರೂ ಈ ಹಿಂದೆಯೂ ಈ ತರದ 'ಮುಕ್ತಿ' ಅಥವಾ ಕೈವಲ್ಯ ಸಾಹಿತ್ಯದ ಕಾವ್ಯ ಪರಿಕಲ್ಪನೆ ಕನ್ನಡ ಸಾಹಿತ್ಯದಲ್ಲಿ ಬೇರೊಂದು ಕಾಲ ಘಟ್ಟದಲ್ಲಿ ಇತ್ತು ಎಂದು ನೆನೆಯುತ್ತಾರೆ.

ಭಟ್ಟ ಹಲಾಯುಧನ 'ಅಭಿಧಾನ ರತ್ನಮಾಲಾ' ಗ್ರಂಥದಲ್ಲಿ 'ಕೈವಲ್ಯ' ಶಬ್ದವನ್ನು ವಿವರಿಸಿರುವುದು, 'ಕವಿರಾಜಮಾರ್ಗಕಾರನು' ಮೋಕ್ಷ ಕುರಿತು ಉಲ್ಲೇಖಿಸಿರುವುದು ಕಂಡುಬರುತ್ತದೆ. ಜೈನರ ಲೌಖಿಕ ಕಾವ್ಯವನ್ನು ಬಿಟ್ಟರೆ ಉಳಿದೆಲ್ಲ ಕೃತಿಗಳ ಉದ್ದೇಶವು 'ಮೋಕ್ಷ'ವನ್ನು ಪಡೆಯುವುದೇ ಆಗಿದೆ. ನಾಗಚಂದ್ರನು 'ಮುಕ್ತಿ', 'ಮೋಕ್ಷ', 'ಕೈವಲ್ಯ' ಈ ಮೂರನ್ನು ಹೇಳಿದ್ದಾನೆ. ಜನ್ನನ 'ಅನಂತನಾಥ ಪುರಾಣ'ದಲ್ಲಿಯೂ ಇದನ್ನು ಕಾಣಬಹುದು.

'ಈ ಅರ್ಥದಲ್ಲಿ ವಚನಸಾಹಿತ್ಯ, ದಾಸಸಾಹಿತ್ಯ, ಅಷ್ಟೇ ಏಕೆ ಆಧ್ಯಾತ್ಮಿಕ ಸಾಧನೆಯ ಅಥವಾ ಅಂತರಂಗ ಪರಿಭಾವನೆಯ ಮತ್ತು ಪರಿವೀಕ್ಷಣೆಯ ಎಲ್ಲ ಸಾಹಿತ್ಯವನ್ನೂ ಈ ಹೆಸರಿನಡಿಯಲ್ಲಿ ಸಮಾವೇಶಗೊಳಿಸಬಹುದು'[೩೩] ಎಂದು ಅಭಿಪ್ರಾಯಪಡುತ್ತಾರೆ. ಇವೆಲ್ಲವನ್ನು ಗಮನಿಸಿದರೆ 'ಕೈವಲ್ಯ ಸಾಹಿತ್ಯ' ಹಾಡಿನ ರೂಪದಲ್ಲಿ ನಿಜಗುಣ ಶಿವಯೋಗಿಗಳಿಗಿಂತ ಮೊದಲೇ ಬೇರೆ ಬೇರೆ ಸ್ವರೂಪದಲ್ಲಿ ಇರುವುದು ಕಂಡುಬರುತ್ತದೆ. ಆದರೆ 'ಕೈವಲ್ಯ' ಎಂಬ ಹೆಸರಿನಿಂದ ಹಾಡುಗಳನ್ನು ಸಂಗ್ರಹಿಸಿ ಅದಕ್ಕೆ 'ಕೈವಲ್ಯ ಪದ್ಧತಿ' ಎಂದು ಕರೆದಿದ್ದು ಮೊದಲು ನಿಜಗುಣರೇ ಎಂದು ಅಭಿಪ್ರಾಯ ಪಟ್ಟಿದ್ದಾರೆ. ಆದರೆ ನಿಜಗುಣರೇ ಹಾಡುಗಳನ್ನು ಸಂಗ್ರಹಿಸಿದ್ದಾರೆ ಎಂಬುದು ಪರಿಶೀಲಿಸಬೇಕಾಗಿದೆ.

ತತ್ವಪದಕಾರರ ಜೀವನ ಮತ್ತು ಕೃತಿಗಳ ಸಮೀಕ್ಷೆಯೂ ಈ ಕೃತಿಯಲ್ಲಿದೆ. ಆಂತರಿಕ ಸಾಧನೆ, ಆಧ್ಯಾತ್ಮಿಕ ಮತ್ತು ಅನುಭಾವದೊಂದಿಗೆ ಸಂಗತಗೊಳ್ಳುವ ಕೃತಿಗಳ ವಿವಿಧ ಸ್ಥಲಗಳ ಕುರಿತ ಪರಿಚಯಾತ್ಮಕ ವಿವೇಚನೆಯೂ ಇದೆ.

**೪.೪.೨. ಶಿಶುನಾಳ ಶರೀಫ್ ಸಾಹೇಬರು**

ಶಿವಾನಂದ ಗುಬ್ಬಣ್ಣವರ ಪ್ರಸ್ತುತ ಕೃತಿಯಲ್ಲಿ ಶರೀಫರ ಜೀವನದ ವಿವಿಧ ಘಟನೆಗಳನ್ನು ಅವರ ರಚನೆಗಳ ಹಿನ್ನೆಲೆಯಲ್ಲಿ ಚರ್ಚಿಸಿರುವುದು ಕಂಡುಬರುತ್ತದೆ. ಒಬ್ಬ ಕವಿಯ ಅಧ್ಯಯನದಲ್ಲಿ ಸಾಧ್ಯವಿರುವ ವಿಷಯ ವಿಂಗಡನೆಯ ದೃಷ್ಟಿಯಿಂದ ಈ ಗ್ರಂಥವು ಸಾಂಪ್ರದಾಯಿಕ ಮಾದರಿಯನ್ನೇ ಅವಲಂಬಿಸಿದೆ.

ಕವಿಯ ಹಿನ್ನೆಲೆ, ಜೀವನ ವಿಚಾರ, ರಚನೆಗಳ ವಸ್ತು, ವಿನ್ಯಾಸ, ಶೈಲಿ, ಜೀವನ ದೃಷ್ಟಿ ಇವೇ ವಿಷಯಗಳನ್ನು ಕುರಿತು ಚರ್ಚಿಸಲಾಗಿದೆ. ಇದಕ್ಕಾಗಿ ಅವರು ಅನೇಕ ಆಕರಗಳನ್ನು ಬಳಸಿಕೊಂಡಿದ್ದಾರೆ. ಮಲ್ಲಿಕಾರ್ಜುನ ಸಿಂಧಗಿಯವರು ಶರೀಫರ ಕುರಿತ ತಮ್ಮ ಪಿಎಚ್‌ಡಿ ಪ್ರಬಂಧದಲ್ಲಿ ಶರೀಫರ ಜೀವನದ ಸಾಕಷ್ಟು ವಿವರಗಳು ಕಲೆ ಹಾಕಿದರೂ ಅದನ್ನು ಸರಿಯಾಗಿ ಗುರುತಿಸಲು ಪ್ರಯತ್ನಿಸಿಲ್ಲದ್ದನ್ನೂ ವಿಮರ್ಶಿಸುತ್ತಾರೆ. ಈವರೆಗೆ ಶರೀಫ್ ಜೀವನ ಕುರಿತು ಪ್ರಕಟಗೊಂಡ ಗದ್ಯ-ಪದ್ಯಗಳು, ಪವಾಡ ಸದೃಶ್ಯ ಬದುಕಿಗೆ ಒತ್ತುಕೊಟ್ಟವೇ ವಿನಾ ಅವರ ಸಾಮಾಜಿಕ ಜೀವನ ಸಮಗ್ರವಾಗಿ ಗ್ರಹಿಸದೇ ಹೋದವು ಎಂಬುದನ್ನು ಚರ್ಚಿಸುತ್ತಾರೆ. ಇದಕ್ಕೆ ಶರೀಫರು 'ಮಧ್ಯಮ ಮುಸ್ಲಿಂ' ಆಗಿದ್ದೇ ಕಾರಣ ಎನ್ನುತ್ತಾರೆ. ಲೇಖಕರ ಈ ಅಭಿಪ್ರಾಯವನ್ನು ಒಪ್ಪಲಾಗುವುದಿಲ್ಲ. ಯಾಕೆಂದರೆ ಅನೇಕ ತತ್ವಪದಕಾರರು ತಮ್ಮನ್ನು ಕುರಿತು ತಾವು ಏನನ್ನೂ ಹೇಳಿಕೊಂಡಿಲ್ಲ. ಅದು ಅವರ ವೈಶಿಷ್ಟ್ಯವಿರಬೇಕು. ಆದರೆ ತಮ್ಮ ಗುರುಗಳನ್ನು ಕುರಿತು ಹಾಡಿಕೊಂಡಿದ್ದಾರೆ. ಅವರ ವೈಯಕ್ತಿಕ ವಿವರಗಳು ಸಿಕ್ಕ ಅವರ ಹಾಡುಗಳಲ್ಲೇ ಹುಡುಕಬೇಕಾಗಿದೆ. ಸಂಬಂಧಿಸಿದ ದಾಖಲೆಗಳು ಸಿಗಬಹುದಾದರೂ ಅವುಗಳ ಅಧಿಕೃತದ ಪ್ರಶ್ನೆ ಇದ್ದೇ ಇದೆ. ಶರೀಫರು ಹುಟ್ಟಿನಿಂದ ಮುಸ್ಲಿಮರಾದರೂ ಅವರ ತತ್ವಗಳ ಮೂಲಕ ಎಲ್ಲ ಜಾತಿ ಜನಸಮುದಾಯಗಳ ಹೃದಯಲ್ಲಿ ನೆಲೆ ನಿಂತವರು. ಅವರ ಸಾವಿನ ನಂತರ ನಡೆದ ಘಟನೆಯೇ ಇದನ್ನು ಸಾಕ್ಷೀಕರಿಸುತ್ತದೆ. ಈ ಹೊತ್ತಿನಲ್ಲಿಯೂ ನಡೆಯುವ ಶರೀಫರ ಜಾತ್ರೆ, ಹಬ್ಬ, ಆಚರಣೆಗಳು ಏನನ್ನು ಸೂಚಿಸುತ್ತವೆ? ಇವೆಲ್ಲ ಕುತೂಹಲಕರ ಸಂಗತಿಗಳೆಂದು ಗಮನಿಸಬೇಕಾಗುತ್ತದೆ.

ಶರೀಫರ ಗುರುಗಳು ಬ್ರಾಹ್ಮಣರಾಗಿದ್ದ ಕಾರಣ ಬ್ರಾಹ್ಮಣ ಧರ್ಮದ ಬಗ್ಗೆ ಮೃದು ಧೋರಣೆ ಹೊಂದಿದ್ದರೆಂಬ ಆರೋಪಗಳು ಇವೆಯಾದರೂ, ಲೇಖಕರು ಬ್ರಾಹ್ಮಣ ಧರ್ಮದ ಹುಳುಕುಗಳನ್ನು ಬಯಲಿಗೆ ಎಳೆದ ಶರೀಫರ ರಚನೆಗಳ ಮೂಲಕವೇ ವಿವರಿಸಿ ಅಲ್ಲಗಳೆದಿರುವುದು ಕಂಡುಬರುತ್ತದೆ. ಜಾನಪದ ಸೊಗಡಿನಿಂದ ಕೂಡಿ ಶರೀಫರ ಹಾಡುಗಳನ್ನು ಹುಟ್ಟ-ಸಾವು, ಸಂಸಾರ, ಜೀವನ ಮೌಲ್ಯಗಳು, ನಡೆನುಡಿ ಈ ಕುರಿತಾದ ಅಂಶಗಳ ಹಿನ್ನೆಲೆಯಲ್ಲಿ ವಿವರಿಸಿದ ಲೇಖಕರು ಮುಖ್ಯವಾಗಿ ಶರೀಫರ ವ್ಯಕ್ತಿತ್ವ, ಜೀವನದ ನಡೆ ಶರಣರ ವಿಚಾರಗಳಿಂದ ಪ್ರೇರಿತವಾದದ್ದೆಂದು ಗುರುತಿಸಿದ್ದಾರೆ. ಭಕ್ತಿ ಸಾಧನೆಯೇ ಅವರ ಏಕಮಾತ್ರ ಉದ್ದೇಶವಾಗಿತ್ತು ಎನ್ನುತ್ತಾರೆ.

ಶರಣರ ತತ್ವಗಳ ಪ್ರಭಾವದಲ್ಲಿ ಬೆಳೆದ ಶರೀಫರು ಸಂಸಾರ ಮತ್ತು ಕಾಯಕದ ವಿಷಯದಲ್ಲಿ ಯಾಕೆ ಭಿನ್ನ ನಿಲುವನ್ನು ತಳೆದರು? ಸಂಸಾರಕ್ಕೆ ಬಡತನವು ಕಾರಣವಾದರೆ, ಬಡತನವನ್ನು ನಿವಾರಿಸುವ ಕಾಯಕಕ್ಕೆ ಯಾಕೆ ವಿಮುಖರಾದರು? ಇದನ್ನು ಪಲಾಯನವಾದ ಎನ್ನಬಹುದೇ? ಈ ತರಹದ ವೈರುಧ್ಯಗಳನ್ನು ಈ ಕೃತಿ ಚರ್ಚಿಸುವುದಿಲ್ಲ.

೪.೪.೩. ನುಡಿವ ಬೆಡಗು

ಈ ಕೃತಿಯು ಕನ್ನಡ ಸಾಹಿತ್ಯ ಚರಿತ್ರೆಯಲ್ಲಿ ಉಪೇಕ್ಷೆಗೆ ಒಳಗಾದ ತತ್ವಪದ ಸಾಹಿತ್ಯವನ್ನು ವಿಶ್ಲೇಷಿಸುತ್ತದೆ. ೧೭, ೧೮ ಮತ್ತು ೧೯ನೇ ಶತಮಾನದಲ್ಲಿ ಹೈದರಾಬಾದು ಕರ್ನಾಟಕದಲ್ಲಿ ತತ್ವಪದ ಪ್ರಧಾನ ಪ್ರಕಾರವಾಗಿ ಬೆಳೆದಿದೆ. ಈ ಭಾಗದ ತತ್ವಪದ ಸಾಹಿತ್ಯವನ್ನು ಹೊಸ ಚಿಂತನೆಗಳ ಬೆಳಕಿಗೆ ಒಡ್ಡಿ ಶೋಧಿಸುವ ಕೆಲಸವನ್ನು 'ನುಡಿವ ಬೆಡಗು' ಕೃತಿ ಮಾಡಿದೆ. ಇದು ಚಾರಿತ್ರಿಕ ಮತ್ತು ಸಾಮಾಜಿಕವಾದ ಬೆಳಕಿನಲ್ಲಿ ಗಂಭೀರ ಅಧ್ಯಯನ ನಡೆಸಿದ ಕೃತಿಯಾಗಿದೆ.

ನಮ್ಮ ಕನ್ನಡದ ಮೊದಲ ಗ್ರಂಥವಾದ ಕವಿರಾಜಮಾರ್ಗದ ಆದರ್ಶ, ವಚನ ಚಳುವಳಿ, ದಾಸ ಚಳುವಳಿ ಮೊದಲಾದ ಸಾಹಿತ್ಯಕ ಸಾಂಸ್ಕೃತಿಕ ಚಳುವಳಿಗೆ ಹೆಸರಾದ ನಾಡು ಇದಾಗಿದೆ. ಇದು ಉತ್ತರದ ಔರಂಗಜೇಬನ ದಾಳಿಗಳು, ಸುಲ್ತಾನರು, ಮೊಗಲರು, ಮರಾಠರು ಮತ್ತು ಬ್ರಿಟಿಷರ ನಡುವೆ ನಡೆದ ನಿರಂತರ ಯುದ್ಧಗಳಿಂದ ನಲುಗಿದ ನಾಡಾಗಿತ್ತು. ಇದರಿಂದಾಗಿ ರಾಜಕೀಯ ಸಂಘರ್ಷಗಳು ಶುರುವಾದವು. ಈ ಕಾರಣವಾಗಿ ಇಲ್ಲಿನ ಜನಸಮುದಾಯಗಳ ಬದುಕು ಛಿದ್ರಗೊಂಡಿತ್ತು. ಅನೇಕ ಸಂಕಷ್ಟಗಳಿಗೆ ಒಳಗಾಗಿತ್ತು. ಇಂಥ ಸಂದರ್ಭದಲ್ಲಿ ಹುಟ್ಟಿದ ನೂರಾರು ಜನ ಸೂಫಿಗಳು, ಅನುಭಾವಿಗಳು, ತತ್ವಪದಕಾರರು ಹೇಗೆ ಜನ ಸಮುದಾಯಗಳ ನಡುವೆ ಸಾಮರಸ್ಯವನ್ನು ಉಂಟುಮಾಡಿದರು ಎಂಬುದನ್ನು ಚರ್ಚಿಸಲಾಗಿದೆ. ಹಾಗೆಯೇ ಪ್ರಭುತ್ವ (ಆಳುವ ವರ್ಗ), ಸಂತರು ಮತ್ತು ಜನಸಮುದಾಯಗಳು ಬದುಕಿದ ರೀತಿ, ನಡೆದುಕೊಂಡ ಬಗೆ ಕುತೂಹಲವಾದುದು. ಈ ಕುರಿತ ಸಾಮಾಜಿಕ ಆಯಾಮ ಒಂದನ್ನು ಕೃತಿ ತೆರೆದು ತೋರಿಸುತ್ತದೆ. ಬಹು ಸಂಸ್ಕೃತಿಗಳ, ಭಿನ್ನ ಧರ್ಮಗಳ ನಡುವೆಯೂ ಕೂಡಿ ಬಾಳುವ ಸಾಂಸ್ಕೃತಿಕ ಪರಿಸರವನ್ನು ನಿರ್ಮಾಣ ಮಾಡುವಲ್ಲಿ ತತ್ವಪದಕಾರರು ಹೇಗೆ ಕಾರಣರಾಗಿದ್ದಾರೆ ಎಂಬುದನ್ನೂ ಪರಿಶೀಲಿಸಲಾಗಿದೆ.

ಚರಿತ್ರೆಯಲ್ಲಿ ಪ್ರಭುತ್ವವಾದಿಗಳು ಎರಡು ಸಂಸ್ಕೃತಿಗಳ ನಡುವೆ ನಡೆಯುವ ಜನಸಮುದಾಯಗಳ ಹಬ್ಬ, ಆಚರಣೆಗಳಲ್ಲಿ ಯಾಕೆ ಭಾಗವಹಿಸುತ್ತಿದ್ದರು? ಸಂತರನ್ನು ಯಾಕೆ ಗೌರವಿಸುತ್ತಿದ್ದರು. ಇಂಥ ಕ್ರಿಯೆಗಳ ಹಿಂದೆ ಇರುವ ರಾಜಕೀಯ ಕಾರಣಗಳೇನು? ಇತರ ಸಾಂಸ್ಕೃತಿಕ ಕಾರಣಗಳೇನು? ಆಳುವ ಪ್ರಭುತ್ವವಾದಿಗಳ ಅಧಿಕಾರ, ಸಂಪತ್ತುಗಳ ನಿರ್ಲಕ್ಷಿಸಿದ ಸಂತರು ಜನಸಮುದಾಯಗಳಲ್ಲಿ ಯಾವ ಬಗೆಯ ಮೌಲ್ಯವನ್ನು ಬಿತ್ತಿದರು.? ಯುದ್ಧ ಮತ್ತು ವಿರಕ್ತಿಯ ಮುಖಾಮುಖಿಯಿಂದ ಪ್ರಭುತ್ವಕ್ಕೆ ಸಂತರು ಹೇಗೆ ಸವಾಲನ್ನು ಒಡ್ಡಿದರು? ವಿರಕ್ತಿಯನ್ನು ಚಿಗುರಿಸಲು ಕಾರಣರಾದರು? ತತ್ವಪದಕಾರರು, ಅನುಭಾವಿಗಳು ತಮ್ಮ ದಾರ್ಶನಿಕ ವ್ಯಕ್ತಿತ್ವದಿಂದ ಜನಸಮುದಾಯಗಳ ಮೇಲೆ ಯಾವ ಪ್ರಭಾವ ಬೀರಿದರು? ಅವರ ಮನದಲ್ಲಿ ದೈವಗಳಾಗಿ ಯಾಕೆ ನೆಲೆ ನಿಂತರು? ಎನ್ನುವ ಮಹತ್ವದ ಅಂಶಗಳನ್ನು ಚರ್ಚಿಸಲಾಗಿದೆ.

ತತ್ವಪದಗಳನ್ನು ತಮ್ಮ ಬದುಕಿನಲ್ಲಿ ಅಳವಡಿಸಿಕೊಂಡ ಜನಸಮುದಾಯಗಳು ಅನಾಥ ಸ್ಥಿತಿಯನ್ನು ಅವಮಾನವನ್ನು ಮರೆಯಲು, ಆತ್ಮಶಾಂತಿಯನ್ನು ಪಡೆಯಲು ತತ್ವಪದಗಳು ಹೇಗೆ ಕಾರಣವಾಗಿವೆ ಎಂಬುದನ್ನು ವಿವರಿಸಲಾಗಿದೆ. ಭಿನ್ನ ನೆಲೆಯ ತತ್ವಪದಕಾರರು ಬಹುಭಾಷೆಯ ರಚನೆಗಳ ಮೂಲಕ ಸಾಂಸ್ಕೃತಿಕ ಸಾಮರಸ್ಯಕ್ಕೆ ಹೇಗೆ ಶ್ರಮಿಸಿದರು ಎಂಬುದನ್ನು ಪರಿಶೀಲಿಸಲಾಗಿದೆ.

ಕೃತಿಯಲ್ಲಿ ಪ್ರಸ್ತಾಪಿತವಾದ ಹಾಗೆ ತತ್ವಪದಕಾರರು ಗುರುವಿಗಾಗಿ ನಡೆಸಿದ ಹುಡುಕಾಟ, ಪಡೆದ ಉಪದೇಶ, ಹಿಡಿದ ಸಾಧನೆಯ ಹಾದಿ, ತಲುಪಿದ ಗುರಿ ಈ ಎಲ್ಲದರಿಂದ ಪಡುವ ಆಂತರಿಕ ತಲ್ಲಣ 'ತನ್ನ ತಾನರಿಯುವ' ಪರಿಯಾಗಿದೆ ನಿಜ. ಆದರೆ ಅನುಭಾವದ ಸಾಧಕನಿಗೆ ಲೋಕದ ಪ್ರಾಪಂಚಿಕ ವಿದ್ಯಮಾನಗಳ ಕಡೆಗೆ ಯಾಕೆ ಗಮನ ಕೊಡಲಾಗುವುದಿಲ್ಲ? ವಚನಕಾರರು ಕಡಕೋಳ ಮಡಿವಾಳಪ್ಪ, ರಾಮಪುರದ ಬಕ್ಕಪ್ಪಯ್ಯ, ನಿಜಲಿಂಗಭದ್ರೇಶ್ವರ, ಶರೀಫ್ ಮುಂತಾದವರು ಅನುಭಾವಿಗಳಾಗಿ ಸಾಮಾಜಿಕ ವಿದ್ಯಮಾನಗಳಿಗೆ ತೀವ್ರವಾಗಿ ಪ್ರತಿಕ್ರಿಯಿಸಲಿಲ್ಲವೇ? 'ಯಾವುದನ್ನು ಲೌಕಿಕದಲ್ಲಿ ನೋಡಲು ಸಾಧ್ಯವಿಲ್ಲವೋ ಯಾವುದು ಲೌಕಿಕದಲ್ಲಿ ಘಟಿಸಲು ಅಸಾಧ್ಯವೋ ಅಂಥದೆಲ್ಲವು ಅನುಭಾವ ಲೋಕದಲ್ಲಿ ಸಾಧ್ಯವಾಗುತ್ತದೆ''[೬೪] ಅನ್ನುವುದಾದರೆ ತತ್ವಪದಕಾರರು ಲೌಕಿಕ ವಿದ್ಯಮಾನಗಳ ಮೂಲಕ ಅಲೌಖಿಕವನ್ನು ಗ್ರಹಿಸುವ, ಲೌಕಿಕ-ಅಲೌಕಿಕ ಬೇರೆ ಬೇರೆಯಾಗಿ ಕಂಡಿಲ್ಲದ ಮತ್ತು ಅನುಭಾವದ ವಿವರಣೆಗೆ ಲೌಕಿಕದ ವಿವರಗಳನ್ನು ತರುವ ಕುರಿತು ಯೋಚಿಸಬೇಕಾಗಿದೆ. ಲೋಕದ ಅರ್ಥದ ದೃಷ್ಟಿಯಿಂದ 'ಹಾದರ ಮತ್ತು ಗಾಂಜಾಸೇವನೆ' ಇವು ಅಪಮೌಲ್ಯವನ್ನು ಹೊಂದಿವೆ. ಆದರೆ ತತ್ವಪದಕಾರರಲ್ಲಿ ಇವುಗಳು ವಿಶೇಷವಾಗಿರುವುದನ್ನು ಚರ್ಚಿಸಲಾಗಿದೆ.

ಸಮಾಜದ ಯಾವ ಬಂಧನಗಳಿಗೆ ಸಿಲುಕದೆ, ಯಾವ ಆಚರಣೆ, ನಂಬಿಕೆ, ವಿಧಿ-ನಿಷೇಧಗಳಿಗೆ ಒಳಗಾಗದೆ, ಸಾಮಾಜಿಕ, ರಾಜಕೀಯ, ಧಾರ್ಮಿಕವಾದ ಸಂಗತಿಗಳನ್ನು ಹಾಗೂ 'ಮಾನಗೇಡಿ ಮಂದಿ ಹುಟ್ಟಿ ಮರ್ತ್ಯ ಕೆಡಿಸಿದ್ದನ್ನು' ತೀವ್ರವಾಗಿ ಖಂಡಿಸಿದ್ದನ್ನು ವಾಸ್ತವವಾದಿ ನೆಲೆಯಲ್ಲಿ ಚರ್ಚಿಸಲಾಗಿದೆ.

ಆಧುನಿಕತೆಯ ಅಥವಾ ವಸಾಹತುಶಾಹಿಯ ಸಮಸ್ಯೆಗಳು, ಅದರ ಪರಿಣಾಮಗಳನ್ನು, ಅನುಭಾವದ ನೆಲೆಯಲ್ಲಿ ತತ್ವಪದಗಳು ತೀವ್ರವಾಗಿ ವಿರೋಧಿಸುವುದನ್ನು ಚರ್ಚಿಸಲಾಗಿದೆ. ತತ್ವಪದಕಾರರು ಆಧುನಿಕತೆಯ ಸಂಕೇತಗಳಾದ ಹೋಟೆಲ್, ಡಾಂಬರು ರಸ್ತೆ, ಚಹಾ, ಕಾಫಿ, ಸಿಗರೇಟು ಇವು ಬದುಕು ಹಾಳು ಮಾಡುವ ದುಶ್ಚಟಗಳು ಎನ್ನುತ್ತಾರೆ. ಆದರೆ ಆಧುನಿಕತೆಯ ಸಂಕೇತವಾದ ನ್ಯಾಯವ್ಯವಸ್ಥೆಯ 'ವಕೀಲ'ನನ್ನು ದೇವರಂತೆ ಕಾಣುತ್ತಾರೆ. ಅನೇಕ ತತ್ವಪದಕಾರರಲ್ಲಿ ಈ ವಸಾಹತು ಕುರಿತಂತೆ ವೈರುಧ್ಯದ ಪ್ರತಿಕ್ರಿಯೆಗಳಿವೆ. ಅಧ್ಯಯನ ಈ ವೈರುಧ್ಯಗಳನ್ನು ಬಿಟ್ಟು ಕೊಟ್ಟಿದೆ. ಆಧುನಿಕ ಕಾಲದ ಅನೇಕ ಸಮಸ್ಯೆಗಳಿಗೆ, ಸಾಮಾಜಿಕ, ರಾಜಕೀಯ, ಆರ್ಥಿಕ ಬಿಕ್ಕಟ್ಟುಗಳಿಗೆ ಇವರು ಮುಖಾಮುಖಿಯಾಗಿದ್ದಾರೆ. ಹಾಗೆಯೇ ವಿಮುಖರಾದವರೂ ಇದ್ದಾರೆ. ಈ ವೈರುಧ್ಯಗಳಿಗೆ ಏನು ಕಾರಣ? ಅವರು ಜೀವಿಸಿದ ಪರಿಸರವೇ? ಅದನ್ನು ಅರಿಯುವಲ್ಲಿ

ಮೌಖಿಕವಾಗಿರುವ ಇವರ ಸಾಹಿತ್ಯದ ಇಂಥ ರಚನೆಗಳ ಸಂಗ್ರಹ ಹೆಚ್ಚಾಗಿ ನಡೆದಿಲ್ಲದಿರುವುದೇ ಅಧ್ಯಯನಕ್ಕೆ ಈ ಕೊರತೆಗಳು ಮುಖ್ಯವೆಂದು ಕಂಡುಬರುತ್ತವೆ.

ಸಂಸಾರ, ಸುಖ, ಭೋಗ ಜೀವನವನ್ನು ಅನೇಕ ಅನುಭಾವಿಗಳು, ತತ್ವಪದಕಾರರು ನಿರಾಕರಿಸಿದ್ದಾರೆ. ಇದಕ್ಕೆ ಬಡತನವು ಕಾರಣವಾಗಿದೆ ಎಂದು ಚರ್ಚಿಸಲಾಗಿದೆ ನಿಜ. ಆದರೆ ನಿಜಗುಣ ಶಿವಯೋಗಿಗಳಂತವರಿಗೆ ಬಡತನವು ಕಾಡಿಲ್ಲ. ಇವರಿಗೆ ರಾಜಕೀಯ, ಸಾಮಾಜಿಕ ಬೇರೆಯವೇ ಆದ ಕಾರಣಗಳೂ ಇವೆ ಎಂಬುದನ್ನು ಗಮನಿಸಬೇಕಾಗುತ್ತದೆ.

ಈ ಹೊತ್ತಿನ ಸಂದರ್ಭದಲ್ಲಿಯೂ ಬದುಕಿರುವ ತತ್ವಪದಕಾರರನ್ನು ಲೇಖಕರು ಆಧುನಿಕ, ತತ್ವಪದಕಾರರೆಂದು ಕರೆಯಬಹುದೇ ಎನ್ನುತ್ತಾರೆ. ಆದರೆ ಈ ಹೊತ್ತಿನ ತತ್ವಪದಕಾರರ ರಚನೆಗಳು ಹಿಂದಿನ ಅನುಭಾವಿಗಳ ರಚನೆಗಳಂತೆ ಇವೆಯೇ ಅಥವಾ ಭಿನ್ನವಾಗಿವೆಯೇ? ಭಿನ್ನವಾಗಿದ್ದರೆ ಈ ಭಿನ್ನತೆಗೆ ಕಾರಣವಾದ ಅಂಶಗಳೇನು? ಅವುಗಳ ಆಧುನಿಕ ಸಂವೇದನೆಗಳೇನು ಅಥವಾ ಈ ಹಿಂದಿನ ಅನುಭಾವದ ನೆರಳಿನಲ್ಲಿಯೇ ಉಸಿರಾಡಿವೆಯೇ? ತಮ್ಮ ಕಾಲದ ತುರ್ತು, ತಲ್ಲಣಗಳಿಗೆ ಪದಕಟ್ಟಿ ಹಾಡಿದ್ದಾರೆಯೇ? ಬರೀ ಸಾಮರಸ್ಯ ಮೂಡಿಸಲಷ್ಟೇ ಸೀಮಿತರಾಗಿದ್ದಾರೆಯೇ? ಈ ಪ್ರಶ್ನೆಗಳು ಕುತೂಹಲಕರವಾಗಿವೆ.

ರಾಜಕೀಯವಾಗಿ ಮುಸ್ಲಿಂ ಆಳ್ವಿಕೆ ಇದ್ದ ಕಾಲದಲ್ಲಿ ಮುಸ್ಲಿಂ ತತ್ವಪದಕಾರರು ತಮ್ಮದಲ್ಲದ ವೀರಶೈವ ಧರ್ಮಕ್ಕೆ ಬಂದದ್ದು, ಕನ್ನಡ ತತ್ವಪದಗಳನ್ನು ಹಾಡಿದ್ದು, ಶರಣರ ಪ್ರಭಾವ, ಕನ್ನಡದ ಮೇಲಿನ ಪ್ರೀತಿ ಇದಕ್ಕೆ ಕಾರಣವಾಗಿದೆ. ಅಲ್ಲದೆ ವೀರಶೈವರು ಮುಸ್ಲಿಂ ಪ್ರಭಾವಕ್ಕೆ ಒಳಗಾಗಿ ಇಸ್ಲಾಂಗೆ ಅನುಗುಣವಾಗಿ ತತ್ವಪದಗಳನ್ನು ರಚಿಸಿಲ್ಲದಿರುವುದು ಕಂಡುಬರುತ್ತದೆ. ಈ ದೃಷ್ಟಿಯಿಂದ ಕೊಡುಕೊಳ್ಳುವಿಕೆ ಏಕಮುಖವಾಗಿದೆಯೇ ಹೊರತು ಬಹುಮುಖಿಯಾಗಿಲ್ಲದ ಸಂಗತಿಯನ್ನು ಚರ್ಚಿಸಲಾಗಿದೆ.

ತತ್ವಪದಕಾರರು ತಮ್ಮ ಅಧ್ಯಾತ್ಮದ ದಾರಿಗೆ ಮಹಿಳೆ ಅಡ್ಡಿಯಾಗುತ್ತಾಳೆಂಬ ಭಾವನೆ ಅನುಭಾವಿಗಳಿಗೆ ಬಂದದ್ದು 'ಮಹಿಳೆಯ ದುರ್ದೈವವೇ ಸರಿ' ಎಂದು ಚರ್ಚಿಸಲಾಗಿದೆ. ಆದರೆ ಅದು ಮಹಿಳೆಯ ದುರ್ದೈವವಲ್ಲ, ತತ್ವಪದಕಾರರ ಮನಸ್ಸಿನ ದುರಂತವೆಂದು ತಿಳಿಯಬೇಕಾಗಿದೆ.

ಹೆಣ್ಣಿಗೆ ಗೌರವ ಕೊಟ್ಟ ವಚನಕಾರರ ಪ್ರಭಾವದಲ್ಲಿ ಬೆಳೆದ ಅನೇಕ ತತ್ವಪದಕಾರರು ಹೆಣ್ಣನ್ನು ಗೌರವಿಸದೇ, ನಿಷ್ಠುರ ನುಡುಗಳನ್ನಾಡಲು ಆ ಕಾಲದ ಒತ್ತಡಗಳೇನಿರಬಹುದು? ತತ್ವಪದಕಾರರು ಕಾಣಿಸಿಕೊಂಡ ಕಾಲದಲ್ಲಿ ಯಾಕೆ ದೊಡ್ಡ ಪ್ರಮಾಣದಲ್ಲಿ ಮಹಿಳೆಯರು ಕಾಣಿಸಿಕೊಳ್ಳಲಿಲ್ಲ? ಅವರಿಗೆ ಒದಗಿದ ಅವಸ್ಥೆಗೆ ಕಾರಣಗಳೇನು? ಸಮಾಜ ಬಾಹಿರ ಚಟುವಟಿಕೆಗಳಲ್ಲಿ ಗುರುತಿಸಿಕೊಂಡರೆಂದು ಹೇಳುವ 'ವಾಮಮಾರ್ಗ'ದ ವ್ಯವಸ್ಥೆಯ ಬೇರುಗಳು ಎಲ್ಲಿವೆ? ಅದರ ಸ್ವರೂಪ ಯಾವುದು? ಸಾಮಾಜಿಕ ಪಾತ್ರ ಏನು? ಇಂದಿನವರೆಗೂ ಉಳಿದುಕೊಂಡು ಬಂದಿರುವ ಈ ವ್ಯವಸ್ಥೆಯ ಪ್ರಸ್ತುತ ರೂಪಗಳು

ಹೇಗಿವೆ? ಇದು ಯಾಕಿದೆ? ಇಂಥ ಅನೇಕ ಸಂಗತಿಗಳಿಗೆ, ತಾತ್ವಿಕ ಪ್ರಶ್ನೆಗಳಿಗೆ ಈ ಕೃತಿ ತೆರೆದುಕೊಳ್ಳುತ್ತದೆ. ಒಟ್ಟಿನಲ್ಲಿ ಇದೊಂದು ವಿಶ್ಲೇಷಣಾ ಮಾದರಿಯ ಅಧ್ಯಯನವಾಗಿದೆ. ಇಲ್ಲಿನ ಚಾರಿತ್ರಿಕ ಪ್ರಜ್ಞೆಯು ರಚನೆಗಳನ್ನು ಕಾಲ-ದೇಶ ವಿಶಿಷ್ಟ ನೆಲೆಗಳಿಗೆ ಬದ್ಧಗೊಳಿಸುತ್ತದೆ. ಆದರೂ ಇವುಗಳಲ್ಲಿನ ರಾಜಕೀಯ, ಸಾಮಾಜಿಕ, ಆರ್ಥಿಕ ಸಂಗತಿಗಳನ್ನು ಸಂಕೀರ್ಣವಾದ ಆಯಾಮಗಳಿಂದ ಪರಿಶೀಲಿಸಿರುವುದು ಕಂಡುಬರುತ್ತದೆ. ಈ ಎಲ್ಲ ಕಾರಣಗಳಿಗಾಗಿ 'ನುಡಿವ ಬೆಡಗು' ಕೃತಿ ಮುಖ್ಯವಾಗಿದೆ ಮತ್ತು ಗಂಭೀರ ಅಧ್ಯಯನವಾಗಿದೆ.

**೪.೪.೪. ಸರ್ಪಭೂಷಣ ಶಿವಯೋಗಿ**

ಜಿ.ಎಸ್.ಶಿವರುದ್ರಪ್ಪನವರ ಈ ಕೃತಿಯು ಸರ್ಪಭೂಷಣರ ಮೇಲಾದ ಪ್ರಭಾವ, ಅವರ ಜೀವನದ ಇತಿವೃತ್ತ. ಅನುಭಾವದ ವಿಶಿಷ್ಟತೆ ಮತ್ತು 'ಕೈವಲ್ಯ ಕಲ್ಪವಲ್ಲರಿ' ಕೃತಿಯ ವಸ್ತು ವಿಶೇಷವನ್ನು ಕುರಿತು ಚರ್ಚಿಸುತ್ತದೆ.

'ಶರೀರವೆಂಬ ಹೊಲದ' ಮೂಲಕ ಸರ್ಪಭೂಷಣರು ಹೇಗೆ ಅನುಭಾವದ ಕೃಷಿ ಕೈಗೊಂಡರು ಎಂಬುದನ್ನು ಭಗವದ್ಗೀತೆ, ವಚನಕಾರರು ನಂತರದ ಹರಿಹರ, ರಾಮಕೃಷ್ಣಪರಮಹಂಸ, ಬಂಗಾಳಿಯ ರಾಮಪ್ರಸಾದ್ ಮುತಾದವರ ರಚನೆಗಳ ದೃಷ್ಟಾಂತದ ಮೂಲಕ ವಿವರಿಸಿದ್ದಾರೆ. ಅವರ ಅನುಭಾವದ ಆಶಯಕ್ಕೆ ಸರ್ಪಭೂಷಣರೂ ಹೊರತಲ್ಲ ಎಂದು ಅಭಿಪ್ರಾಯ ಪಟ್ಟಿದ್ದಾರೆ. ಅಂಗಡಿಯಲ್ಲಿ ವ್ಯಾಪಾರ ಮಾಡುತ್ತಾ ಕೂಡಬೇಕಾಗಿದ್ದ ವ್ಯಕ್ತಿಯೊಬ್ಬ ಗುರುಕೃಪೆಯಿಂದ ವೈರಾಗ್ಯ ಮೂರ್ತಿಯಾಗಿ ಜನರ ಆರಾಧ್ಯ ದೈವವಾದ ಸರ್ಪಭೂಷಣರ ಸಾಧನೆಯ ವಿವರವೂ ಇದೆ.

ತತ್ವಪದಗಳನ್ನು ವೀರಶೈವ ಸಾಹಿತ್ಯದ ಪಡಿನೆರಳಿನಲ್ಲಿ ಅವುಗಳ ಪ್ರಾಚೀನತೆಯ ವಿವರವನ್ನು ಪರಿಶೀಲಿಸಲಾಗಿದೆ. ಇವು ನಿಜಗುಣರು ಮತ್ತು ದಾಸರಿಗಿಂತ ಹಿಂದಿನ ರಚನೆಗಳಾಗಿರುವುದು ಸಾಧ್ಯವಿದೆ. ಆದರೆ ಕಾವ್ಯಾತ್ಮಕತೆಯಾಗಲೀ, ಭಾವತೀವ್ರತೆಯಾಗಲೀ, ತತ್ವಾರ್ಥ ಸಂಪನ್ನತೆಯಾಗಲೀ ಒಳಗೊಂಡಿಲ್ಲದ ಕಾರಣ ಅವು ಜನಪ್ರಿಯವಾದಂತಿಲ್ಲ. ನಂತರದಲ್ಲಿ ನಿಜಗುಣರಿಂದ ತತ್ವಪದಗಳು ಹೊಸದಾರಿಯನ್ನು ತೋರಿದಂತೆ, ಇದರ ಸಮೃದ್ಧಿಗೆ ಕಾರಣವಾದಂತೆ ತೋರುತ್ತದೆ ಎಂದು ಚರ್ಚಿಸುತ್ತಾರೆ. ಈ ಕುರಿತು ವ್ಯಕ್ತಪಡಿಸಿದ ವಿದ್ವಾಂಸರ ಅಭಿಪ್ರಾಯಗಳನ್ನು ಲೇಖಕರು ತಾತ್ವಿಕ ಸ್ಪಷ್ಟತೆಗಾಗಿ, ಗಮನಿಸಿದ್ದಾರೆ.

ಸರ್ಪಭೂಷಣರ 'ಕೈವಲ್ಯಕಲ್ಪವಲ್ಲರಿ'ಯು ನಿಜಗುಣರ 'ಕೈವಲ್ಯ ಪದ್ಧತಿ' ಹಾಡುಗಳ ಕೃತಿಗೆ 'ಹಬ್ಬಿಸಿದ ಬಳ್ಳಿ' ಎಂಬುದು ಅವರ ವಿನಯವನ್ನು ಸೂಚಿಸುತ್ತದೆಯೇ ಹೊರತು, ನಿಜಗುಣರ ಕೃತಿಯ ಅನುಸರಣವೋ, ಅನುಕರುಣವೋ ಎಂದು ತಿಳಿಯಬೇಕಾಗಿಲ್ಲ[೩೯] ಎನ್ನುತ್ತಾರೆ. ಇದಕ್ಕೆ ಅವರು ಕೊಡುವ ಕಾರಣ ನಿಜಗುಣರ ಕೃತಿಗಿಂತ ಬೇರೆಯದೇ ಆದ ಸ್ವಾನುಭವ ಹಾಗೂ ವ್ಯಕ್ತಿವಿಶಿಷ್ಟತೆ ಈ ಕೃತಿಗಿದೆ. ಯಾಕೆಂದರೆ ಮೂರು ಶತಮಾನಗಳ ಕಾಲದ ಅಂತರವಿದೆಯಾದ್ದರಿಂದ ಇದರ ಗುಣವೇ ಬೇರೆಯಾಗಿದೆ[೩೭]

ಎನ್ನುತ್ತಾರೆ. ಆದರೆ ಸರ್ಪಭೂಷಣರ ಮನಸ್ಸು ನಿಜಗುಣರಿಗಿಂತಲೂ ಹಿಂದಿನ ಕಾಲದ ವಚನಕಾರರ, ದಾಸರ ಸಾಂಪ್ರದಾಯಿಕ ನಿಲುವನ್ನು ಯಾಕೆ ಅಂಗೀಕರಿಸಿತು? ವಸಾಹತುಶಾಹಿ ಕಾಲಮಾನದಲ್ಲಿ ಬದುಕಿದ್ದ ಸರ್ಪಭೂಷಣರು ಆ ಸಮಕಾಲೀನ ವಾಸ್ತವದ ಬರ್ಬರತೆಗಳನ್ನು ಎದುರಿಸಲು ತಕ್ಕ ಮಾರ್ಗ ಹುಡುಕಿಕೊಂಡದ್ದು ಆಧ್ಯಾತ್ಮಿಕ ಚಿತ್ತಬಿತ್ತಿಯನ್ನು ಈ ಮೂಲಕ ಒಂದು ಘಟನೆಯನ್ನು ಸಾಧಿಸಲು ಹೋದ ಸರ್ಪಭೂಷಣರು ಕೂಡ ಸಂಸಾರ, ಹೆಣ್ಣನ್ನು ಕುರಿತಂತೆ ನಿಷ್ಠುರ ಧೋರಣೆಯನ್ನು ತಳೆದಿದ್ದನ್ನು ಲೇಖಕರು ಪ್ರಶ್ನಿಸುತ್ತಾರೆ.

ಸರ್ಪಭೂಷಣರು ಹೆಣ್ಣನ್ನು 'ಭೋಗದ ವಸ್ತು, ಕೇವಲ ಆಕರ್ಷಣೆಯೆಂದು, ಮಾಯೆ' ಎಂದು ಜರಿದಿರುವುದನ್ನು ನೋಡಿದರೆ, ಹೆಣ್ಣಿಗೆ ಜಗತ್ತಿನಲ್ಲಿಯೇ ಮೊದಲ ಬಾರಿಗೆ ಸ್ವಾತಂತ್ರ್ಯವನ್ನು ಕೊಟ್ಟು ಅವರನ್ನು ಆಧ್ಯಾತ್ಮಿಕ, ಸಾಮಾಜಿಕದ ಎಲ್ಲ ವ್ಯವಹಾರಗಳಲ್ಲಿ ತೊಡಗಿಸಿದ ವಚನಕಾರರ ಪರಂಪರೆಗೆ ಹೇಗೆ ಸೇರುತ್ತಾರೆ? ''ಹೆಣ್ಣಿಗಿಚ್ಛೈಸುವರೆ ಮೂಢಾ | ಇದನು, ಕಣ್ಣು ಕಿವಿ ಮೈಮನಗಳಿಂ ಸೋಂಕ ಬೇಡಾ'' ಎಂದು ''ಧರೆಯೊಳೀ ಹೆಣ್ಣು ರಾಕ್ಷಸಿಯಲ್ಲದುಂಟೆ''[೩೭] ಹೀಗೆ ಹೆಣ್ಣನ್ನು ಜರಿಯುವ ಸರ್ಪಭೂಷಣರ ನಿಲುವನ್ನು ಲೇಖಕರು ಒಪ್ಪುವುದಿಲ್ಲ.

ಹಾಗೆ ನೋಡಿದರೆ ಎಲ್.ಬಸವರಾಜು ಅವರು ಹೇಳುವಂತೆ ಹಾಗೆ ನಿಜಗುಣರು(ಬ್ರಾಹ್ಮಣ) ಆರಾಧ್ಯರ ಪ್ರಭಾವ ಇರುವವರು. ಸರ್ಪಭೂಷಣರು, ಬಾಲಲೀಲಾ ಮಹಾಂತರು, ಘನಮಠದಾರ್ಯರು, ಮುಪ್ಪಿನ ಷಡಕ್ಷರಿಗಳು, ನಿಜಗುಣರನ್ನು ಅನುಸರಿಸಿದವರು ಎಂದು ಹೇಳಲಾಗುತ್ತಿದೆ. ಇವರು ವಚನಕಾರರ ಆಶಯವುಳ್ಳವರು ಹೇಗೆ ಆಗುತ್ತಾರೆ ಎಂಬ ಸಂಶಯವೂ ಮೂಡುತ್ತದೆ.

ಈ ತರದ ವೈರುಧ್ಯಗಳು ತತ್ವಪದಕಾರರಲ್ಲಿ ಕಂಡುಬರುತ್ತವೆ. ಇಂಥ ವೈರುಧ್ಯಗಳನ್ನು ಅಧ್ಯಯನ ಗಮನಿಸಬೇಕಾಗಿದೆ. ಮನುಷ್ಯನ ಸಿರಿತನ-ಬಡತನಗಳನ್ನು ಅವನ ಆರ್ಥಿಕ ವ್ಯವಸ್ಥೆಯಲ್ಲಿ, ಸಾಮರ್ಥ್ಯದಲ್ಲಿ ಹುಡುಕದೇ ಪೂರ್ವಜನ್ಮದ ಪಾಪ-ಪುಣ್ಯಗಳಲ್ಲಿ ಹುಡುಕುವುದು ಎಷ್ಟರ ಮಟ್ಟಿಗೆ ಸರಿ? ತತ್ವಪದಕಾರರು ಈ ಪುರಾತನ ನಂಬಿಕೆಗಳನ್ನು ಪ್ರಶ್ನಿಸದೇ ಇರುವುದು ಅವರ ವೈಚಾರಿಕ ನಿಲುವನ್ನು ಗುಮಾನಿಯಿಂದ ನೋಡುವಂತೆ ಮಾಡುತ್ತದೆ. ಎಂಬ ಮುಖ್ಯವಾದ ಸಂಗತಿಗಳನ್ನು ಕೃತಿ ಚರ್ಚಿಸುತ್ತದೆ.

**೪.೪.೫. ಬೀದರ್ ಜಿಲ್ಲೆಯ ತತ್ವಪದಕಾರರು**

ಪ್ರಸ್ತುತ ಕೃತಿಯು ಬೀದರ್ ಜಿಲ್ಲೆಯ ತತ್ವಪದಕಾರರ ಪರಿಚಯಾತ್ಮಕ ಕೃತಿಯಾಗಿದೆ. ಅಧ್ಯಯನದಲ್ಲಿ ಬೀದರ್ ಜಿಲ್ಲೆಯ ಭೌಗೋಳಿಕ, ಐತಿಹಾಸಿಕ, ಸಾಂಸ್ಕೃತಿಕ ಹಿನ್ನೆಲೆಯನ್ನು ಪರಿಚಯಿಸಲಾಗಿದೆ. ಸಾಂಸ್ಕೃತಿಕವಾಗಿ ಮತ್ತು ಐತಿಹಾಸಿಕವಾಗಿಯೂ ಬೀದರ್ ಜಿಲ್ಲೆಯು ಕರ್ನಾಟಕದಲ್ಲಿ ವಿಶಿಷ್ಟ ಸ್ಥಾನವನ್ನು ಪಡೆದಿದೆ. ಸಾಹಿತ್ಯಕವಾಗಿ ಬೀದರ್ ಜಿಲ್ಲೆ ವಚನ ಚಳುವಳಿಯ ಮೂಲಕ ಮಹತ್ವವಾಗಿ ಗುರುತಿಸಿಕೊಂಡಿರುವುದನ್ನು ಚರ್ಚಿಸುತ್ತಾರೆ.

ಲೇಖಕರು ಬೀದರ್ ಜಿಲ್ಲೆಯ ತತ್ವಪದಕಾರರ ಪರಂಪರೆ ೧೮ನೇ ಶತಮಾನದಿಂದ ಪ್ರಾರಂಭವಾಗುತ್ತದೆ ಎಂದು ಹೇಳುತ್ತಾರೆ. ಒಟ್ಟು ೭೪ ತತ್ವಪದಕಾರರನ್ನು ಹೆಸರಿಸಿದ ಈ ಕೃತಿಯು ಮುಖ್ಯವಾಗಿ ೩೦ ಜನ ತತ್ವಪದಕಾರರ ಜೀವನ ಚರಿತ್ರೆಯನ್ನು ಪರಿಚಯಿಸುತ್ತದೆ. ಬೇರೆ ಬೇರೆ ವೃತ್ತಿ, ಜಾತಿ, ಮತ, ಧರ್ಮ ಪಂಗಡಗಳಿಗೆ ಸೇರಿದ ಮರಕುಂದಿ ಬಸವಣ್ಣಪ್ಪ, ಕೊಹಿನೂರ ಹುಸನಾ, ಬೋರಗಿಯ ರೆಹಮಾನಸಾಬ ಪಾಟೀಲ್, ನಿಜಲಿಂಗಭದ್ರೇಶ್ವರ ಮುಂತಾದವರಿಂದ ಹಲಸೂರಿನ ಶಿವಾನಂದ ಸ್ವಾಮಿಯವರೆಗೆ ಚರಿತ್ರೆಯನ್ನು ಕಟ್ಟಿಕೊಡಲಾಗಿದೆ. ಅವರ ಹಾಡುಗಳ ಸಾಹಿತ್ಯಕ ವಿವರವನ್ನು ಪರಿಚಯಾತ್ಮಕವಾಗಿ ನೀಡಲಾಗಿದೆ. ಉಳಿದವರನ್ನು ಹೆಸರಿಸಿ ಕೈಬಿಡಲಾಗಿದೆ.

ಲೇಖಕರು ಈ ಜಿಲ್ಲೆಯ ತತ್ವಪದಗಳ ಮೇಲೆ ೧೨ನೇ ಶತಮಾನದ ಶರಣರು, ನಂತರದ ದಾಸರು ಮತ್ತು ಮರಾಠಿ ಸಂತರ ಪ್ರಭಾವವಾಗಿದೆ ಎಂದು ಗುರುತಿಸುತ್ತಾರೆ. ಆದರೆ ನಿಜಗುಣ ಶಿವಯೋಗಿಗಳಿಂದಲೇ ಹಾಡುಗಳು ಸಿದ್ಧಿಯನ್ನು ಸಾಧಿಸಿದೆ ಎಂದು ಹೇಳುವುದನ್ನು ಮರೆಯುವುದಿಲ್ಲ.

ಆದರೆ ಪ್ರಾದೇಶಿಕ ಹಿನ್ನೆಲೆಯಲ್ಲಿ ಸಾಂಸ್ಕೃತಿಕವಾಗಿ ತತ್ವಪದಕಾರರು ಜನಸಮುದಾಯಗಳಲ್ಲಿ ಬೀರಿದ ಪ್ರಭಾವ ಯಾವುದು? ಕೇವಲ ಭಾಷೆ ಸೌಹಾರ್ದತೆಗೆ ಮಾತ್ರ ಕಾರಣರಾದರೆ? ಅವರು ತಮ್ಮ ರಚನೆಗಳ ಮೂಲಕ ಪ್ರಭುತ್ವವನ್ನು ಎದುರಿಸಿದ ಬಗೆ ಯಾವುದು? ವಸಾಹತುಶಾಹಿ ಮತ್ತು ನಿಜಾಮರ ಆಡಳಿತಕ್ಕೆ ರಾಜಕೀಯವಾಗಿ, ಆರ್ಥಿಕವಾಗಿ, ಸಾಮಾಜಿಕವಾಗಿ, ಸಾಂಸ್ಕೃತಿಕವಾಗಿ ತೋರಿದ ಪ್ರತಿಕ್ರಿಯೆ ಏನು? ವಚನಕಾರರ ದಟ್ಟ ಪ್ರಭಾವವಿರುವ ಈ ಭಾಗದ ತತ್ವಪದಕಾರರಲ್ಲಿ ಮಹಿಳಾ ತತ್ವಪದಕಾರರು ಕಾಣಿಸಿಕೊಳ್ಳದ ಒತ್ತಡಗಳೇನು? ಇಂಥ ಪ್ರಶ್ನೆಗಳಿಗೆ ಈ ಕೃತಿ ಪರೋಕ್ಷವಾಗಿ ಮುಖಾಮುಖಿಯಾಗಿದೆ.

**೪.೪.೬. ಬಿಂಬದೊಳಗಣ ಪ್ರಾಣ**

ಪ್ರಸ್ತುತ ಕೃತಿಯು ತತ್ವಪದಗಳ ಕುರಿತ ಅಧ್ಯಯನವಾಗಿದೆ. ಲೇಖಕರು ಇದೊಂದು ತತ್ವಪದಗಳ ತಾತ್ವಿಕ ಅನುಸಂಧಾನಗೈದ ಕೃತಿಯೆಂದು ಹೇಳಿದ್ದಾರೆ. ಐದು ಅಧ್ಯಾಯಗಳಲ್ಲಿ ತತ್ವಪದಗಳನ್ನು ವಿಶ್ಲೇಷಣೆಗೆ ಒಳಪಡಿಸಲಾಗಿದೆ. ಪ್ರಧಾನವಾಗಿ ಮೈಸೂರು ಮತ್ತು ಕೊಡಗು ಜಿಲ್ಲೆಗಳಲ್ಲಿ ದೊರೆತಿರುವ ಕೆಲವು ತತ್ವಪದಗಳನ್ನು ಈ ಕೃತಿಯಲ್ಲಿ ವಿಶ್ಲೇಷಣೆಗೆ ಬಳಸಿಕೊಳ್ಳಲಾಗಿದೆ. ಅಂಥ ೧೩ ಪದಗಳನ್ನು ಅನುಬಂಧದಲ್ಲಿ ಕೊಡಲಾಗಿದೆ. ಮುಖ್ಯವಾಗಿ ಈ ಕೃತಿಯು ತತ್ವಪದಗಳು ರೂಪುಗೊಂಡ ಸಂದರ್ಭ, ಪರಂಪರೆ, ಆಧ್ಯಾತ್ಮಿಕತೆ, ವಿವಿಧತೆ, ಐಕ್ಯತೆ ಮತ್ತು ಅಲಕ್ಷಿತರ ನೆಲೆಯಿಂದ ವಿವರಿಸಿರುವುದು ಕಂಡುಬರುತ್ತದೆ.

ಇಲ್ಲಿ ಪ್ರಧಾನವಾಗಿ ಅಧ್ಯಾತ್ಮ, ಸಿದ್ಧಿ, ಯೋಗಿಗಳ, ಅನುಭಾವಿಗಳ ಮತ್ತು ವಿರಕ್ತವಂತರ ಸಂಸ್ಕೃತಿ ಚರಿತ್ರೆಯನ್ನು ಗುನುಗಿಕೊಂಡು ಮುಂದೆ ನಡೆಯುವುದಾಗಿದೆ. ಈ ಹಿನ್ನೆಲೆಯಲ್ಲಿ ಕೆಲವು ತಾತ್ವಿಕ ಪ್ರಶ್ನೆಗಳು ಈ ಕೃತಿಯಲ್ಲಿ ಕಾಣಿಸಿಕೊಂಡಿವೆ.

ಎರಡು ಪ್ರಬಲ ಸಂಸ್ಕೃತಿಗಳು ಮೌನ ಮುರಿದಾಗ ಒಂದು ತೆರನಾದ ಸಂದು ಏರ್ಪಡುತ್ತದೆ. ಇದನ್ನು 'ಸಂಕರಶೀಲತೆ' ಅಥವಾ 'ಯುಗಧರ್ಮ'ವೆಂತಲೂ ಕರೆಯಬಹುದು. ಈ ಎರಡು ಸಂಸ್ಕೃತಿಗಳನ್ನು ಬೆರೆಸುವ ಕೆಲಸವನ್ನು ತತ್ವಪದಕಾರರು ಮಾಡಿದರು ನಿಜ. ಆದರೆ ಸಾಂಸ್ಕೃತಿಕವಾಗಿ 'ಮುಸ್ಲಿಂ ಅರಸರ ಕಾಲದಲ್ಲಿ ಮತ್ತು ಹಿಂದೂ ರಾಜರುಗಳ ಆಡಳಿತದ ಅವಧಿಯಲ್ಲಿ ಆಯಾಯ ಜನವರ್ಗಗಳಿಗೆ ಪುಷ್ಠಿ ನೀಡಿತ್ತು. ಬೇರೆ ಜನ ವರ್ಗಗಳು ಶೋಚನೀಯ ಸ್ಥಿತಿಯಲ್ಲಿದ್ದವು.[೩೮] ಎಂದು ಚರ್ಚಿಸುತ್ತಾರೆ.

ಆದರೆ 'ಹಿಂದೂ' ಮತ್ತು 'ಮುಸ್ಲಿಂ' ಆಡಳಿತದ ಸಂದರ್ಭದಲ್ಲಿ ಜನಸಮುದಾಯಗಳಲ್ಲಿ ಮೂಲಭೂತವಾದಿಗಳಿಗೆ ವಿರುದ್ಧವಾಗಿ ಮುಕ್ತ ಮನಸ್ಸುಗಳು ಕಾಣಿಸಿಕೊಂಡವು. ಈ ಮುಕ್ತತೆಯಿಂದ ಹಲವು ಮತಧರ್ಮಗಳನ್ನು ಗೌರವದಿಂದ ನೋಡಲು ಸಾಧ್ಯವಾದವು. ಇದಕ್ಕೆ ಹಲವು ರಾಜಕೀಯ, ಆರ್ಥಿಕ, ಸಾಮಾಜಿಕ ಕಾರಣಗಳಿವೆ ಎಂಬುದನ್ನು ಗಮನಿಸುವುದಿಲ್ಲ. ಅಬ್ದುಲ್ಲಾಖಾನ್ ಎನ್ನುವ ಮೊಗಲ್ ಮಂತ್ರಿಯು, ಸಿರಾಜುದೌಲ್ ಮತ್ತು ಮೀರ್‌ಜಾಫರ್ ಇವರು 'ಬಸಂತ್ ಮತ್ತು ಹೋಳಿಹಬ್ಬ'ಗಳಲ್ಲಿ ಭಾಗವಹಿಸುವುದು. ಮೀರ್‌ಜಾಫರ್ ಸಾಯುವ ಕೊನೆಯ ಸಂದರ್ಭದಲ್ಲಿ 'ಕಿರೀಟೇಶ್ವರಿಯ ತೀರ್ಥ' ಕುಡಿಯವುದು, ದೌಲತ್‌ರಾವ್ ಶಿಂಧೆ ಹಸುರಂಗಿಗಳನ್ನು ತೊಟ್ಟು 'ಮೊಹರಂ'ಗಳಲ್ಲಿ ಭಾಗಿಯಾಗುವುದು. ಮೊಗಲರು ಸಂಭ್ರಮದಿಂದ ಅರಮನೆಯಲ್ಲಿ 'ದುರ್ಗಾಪೂಜೆ' ನಡೆಸುತ್ತಿದ್ದುದು. ವಿಜಯನಗರದ ಅರಸರು 'ಕುರ್‌ಆನ್' ಗ್ರಂಥವನ್ನು ಗೌರವಿಸುತ್ತಿದ್ದುದು. ಇವೆಲ್ಲ ಜನಸಮುದಾಯಗಳ ಮೇಲೆ ತೀವ್ರ ಪರಿಣಾಮವನ್ನು ಬೀರಿವೆ. ಇಂಥ ಸಂಗತಿಗಳು ಏಕಮುಖಿ ವಿಶ್ಲೇಷಣೆಯಿಂದ ಹೊರಗುಳಿಯುತ್ತವೆ.

'ಮುಸ್ಲಿಂ' ರಾಜರ ಆಡಳಿತದಲ್ಲಿ ಅವರ ಸಮುದಾಯವೆಲ್ಲ ನೆಮ್ಮದಿಯ ಜೀವನ ಸಾಗಿಸಿದರು. ಹಾಗೇ 'ಹಿಂದೂ' ರಾಜರ ಆಡಳಿತದಲ್ಲಿ (ಅವರ ಸಮುದಾಯವೆಲ್ಲ) ಹಿಂದೂಗಳು ಸುಖದಿಂದ ಇದ್ದರು. ಇವೆಲ್ಲ ವಿಶ್ಲೇಷಣೆಯಲ್ಲಿ ಸರಳವಾದ ಹೇಳಿಕೆಗಳಾಗುತ್ತವೆ.

ಲೇಖಕರು 'ಸಂಕರಶೀಲತೆ' ಪರಿಕಲ್ಪನೆಯನ್ನು ಕೇವಲ ಎರಡು ಸಮೃದ್ಧ ಸಂಸ್ಕೃತಿಯ ತುಮುಲಗಳ ಮಧ್ಯೆ ಸೃಷ್ಟಿಯಾಗುತ್ತದೆ ಎಂದು ಸೀಮಿತಗೊಳಿಸುತ್ತಾರೆ. ಆದರೆ 'ಸಂಕರಶೀಲತೆ' ಎನ್ನುವುದು ಜನಸಮುದಾಯಗಳ, ಪ್ರದೇಶಗಳ ಎಲ್ಲ ಸಾಂಸ್ಕೃತಿಕ ಸಂಬಂಧಗಳನ್ನು ಒಳಗೊಂಡಿರುವಂತದು. ಅಂದರೆ ಹಲವು ಭಾಷೆ, ವಿವಿಧ ಜಾತಿ, ಜನವರ್ಗಗಳು, ಅವರ ವಿವಿಧ ರೀತಿಯ ಆಚರಣೆ, ವಿಧಿ-ನಿಷೇಧಗಳು, ಮತ-ಧರ್ಮಗಳು, ರಾಜಕೀಯ ಸಂಬಂಧಗಳು ಒಳಗೊಂಡಿವೆ ಎಂಬ ವಿಶಾಲ ಕಲ್ಪನೆಯಿಂದ ನೋಡುವುದಿಲ್ಲ.

ತತ್ವಪದಕಾರರಿಗೆ ಗುರು ಪಡೆಯುವುದೇ ದೊಡ್ಡ ಸಾಧನೆಯಾಗಿತ್ತು ನಿಜ. ಆದರೆ ಲೇಖಕರು, ಲೋಕದ ಅನುಭವಗಳನ್ನು ಕರಗತ ಮಾಡಿಕೊಂಡು ಬರೆಯುವ ಕವಿಗಳಂತೆ ತತ್ವಪದಕಾರರನ್ನು

ಗ್ರಹಿಸುತ್ತಾರೆ. ತತ್ವಪದಗಳು ಘಟಿತ ಘಟನೆಗಳಿಗೆ ಸಹಜವಾಗಿ ಹುಟ್ಟಿದ ಹಾಡುಗಳು ಎಂಬುದನ್ನು ಗ್ರಹಿಸುವುದಿಲ್ಲ.

'ತತ್ವಪದಕಾರರು ಯಾವುದೇ ಜಾತಿ, ಮತ, ಕುಲಧರ್ಮದ ಭೋನಿನೊಳಗೆ ಬರುವವರಲ್ಲ'[೩೯] ಎನ್ನುವ ಲೇಖಕರು 'ತೃತೀಯ ಜಗತ್ತಿನ ತತ್ವಪದಕಾರರು ಇತರೆ ತತ್ವಪದಕಾರರಿಗಿಂತ ಕಡಿಮೆ ಇಲ್ಲ''[೪೦] ಎಂದು ಅವರನ್ನು ಜಾತಿಗೆ ಸೀಮಿತಗೊಳಿಸಿ ನೋಡುತ್ತಾರೆ. ತೃತೀಯ ಜಗತ್ತಿನ ತತ್ವಪದಕಾರರು ಮತ್ತು ಇತರೆ ತತ್ವಪದಕಾರರು ಎಂದು ವಿಂಗಡಿಸಿ ಚರ್ಚಿಸುತ್ತಾರೆ. ಅನುಭಾವಿಗಳನ್ನು ಹೀಗೆ ಗ್ರಹಿಸುವುದರಿಂದ ಯಾವ ಸ್ವರೂಪದ ಪ್ರಯೋಜನಗಳಿವೆ? ಇವರ ಸಾಂಸ್ಕೃತಿಕ ಭಿನ್ನತೆಗಳೇನು? ಇವೆಲ್ಲ ಪ್ರಶ್ನೆ ಮುಖ್ಯವಾಗುತ್ತವೆ.

'ತತ್ವಪದಕಾರರು ತಮ್ಮೊಳಗಿನ' ಅರಿವನ್ನೇ ಗುರು'ವನ್ನಾಗಿ ಸ್ವೀಕರಿಸಿ ತತ್ವಗಳನ್ನು ಕಟ್ಟಿ ಹಾಡಿದ್ದಾರೆ'[೪೧] ಎಂದು ವಚನಕಾರರ ಪ್ರಭಾವದ ನೆರಳಲ್ಲಿ ಚರ್ಚಿಸುತ್ತಾರೆ. ಮತ್ತೊಂದು ಕಡೆ 'ವಚನ ಸಾಹಿತ್ಯದ ಇನ್ನೊಂದು ರೂಪ ತತ್ವಪದವಲ್ಲ ವಚನ-ದಾಸ ಸಾಹಿತ್ಯದ ಕಾಲಘಟ್ಟದ ವಸ್ತುಸ್ಥಿತಿಯೇ ಬೇರೆ'[೪೨] ಎನ್ನುತ್ತಾರೆ. ಹಾಗೆಯೇ ತತ್ವಪದಗಳನ್ನು ಅವಲೋಕಿಸಿದರೆ ಬಸವನ ಚಿಂತನೆಗಳು ಅಡಗಿರುವಂತದನ್ನು ಮರೆಯುವ ಹಾಗಿಲ್ಲ'[೪೩] ಎಂದು ಉಲ್ಲೇಖಿಸುತ್ತಾರೆ. ಈ ವಿರೋಧಾತ್ಮಕ ಹೇಳಿಕೆಯಲ್ಲಿ ತತ್ವಪದಗಳ ಕುರಿತ ಚರ್ಚೆಯಲ್ಲಿ ಯಾವೊಂದು ಸ್ಪಷ್ಟ ನಿಲುವನ್ನು ಲೇಖಕರು ವ್ಯಕ್ತಪಡಿಸಿಲ್ಲ.

ಒಟ್ಟಾರೆ ತತ್ವಪದಗಳ ನೆಪದಲ್ಲಿ ಲೇಖಕರು ಒಂದು ಸಮುದಾಯದ ಆತ್ಮಕಥನವನ್ನೋ, ಜೀವನ ಕಥನವನ್ನೋ ಬರೆಯ ಹೊರಟಂತೆ ತೋರುತ್ತದೆ. ವೈಯಕ್ತಿಕ ಅನುಭವಗಳ ಮೂಲಕ ತತ್ವಪದಗಳ ಪ್ರವೇಶ ಮಾಡಿದ್ದಾರೆ. ಕೊನೆಗೆ ಏನೊಂದು ಹೇಳದ ಸ್ಥಿತಿಗೆ ತಲುಪಿದ್ದಾರೆ. ಯಾವ ಕಾಲದ ಸಂದರ್ಭವನ್ನು ಕುರಿತು ಚರ್ಚಿಸಿದ್ದಾರೆ ಎನ್ನುವ ಸ್ಪಷ್ಟತೆ ಕೃತಿಯಲ್ಲಿ ಕಾಣಿಸಿಲ್ಲ. ಆದರೆ ಇಂಥದ್ದೊಂದು ಅಧ್ಯಯನದ ಮೂಲಕ ತತ್ವಪದಗಳ ವ್ಯಾಖ್ಯಾನಕ್ಕೋ, ವಿಶ್ಲೇಷಣೆಗೋ ತೊಡಗಿದ ಲೇಖಕರು ಮಲ್ಲೇಪುರಂ ಜಿ.ವೆಂಕಟೇಶ ಅವರು ಮುನ್ನುಡಿಯಲ್ಲಿ ಹೇಳಿದಂತೆ ಅನಂತವನ್ನು ಗುರುತಿಸಿಕೊಂಡಂತೆ ಕಾಣುವುದಿಲ್ಲ.

**೪.೪.೭. ತತ್ವಪದಕಾರರು ಮತ್ತು ವಸಾಹತುಶಾಹಿ ವ್ಯವಸ್ಥೆ**

ಪ್ರಸ್ತುತ ಕೃತಿಯು 'ತತ್ವಪದಗಳು' ವಸಾಹತುಶಾಹಿ ವ್ಯವಸ್ಥಗೆ ಹೇಗೆ ಪ್ರತಿಕ್ರಿಯಿಸಿವೆ ಎಂಬುದನ್ನು ಕುರಿತು ಚರ್ಚಿಸುತ್ತದೆ. ಈ ಕೃತಿಯ ಕರ್ತೃವಾದ ಡಿ.ರಘುನಾಥರಾವ್ ಅವರು ೧೭, ೧೮ ಮತ್ತು ೧೯ನೇ ಶತಮಾನಗಳಲ್ಲಿ ರಚನೆಯಾದ ತತ್ವಪದಗಳನ್ನು ಮಾತ್ರ ತಮ್ಮ ಅಧ್ಯಯನದ ವ್ಯಾಪ್ತಿಗೆ ಒಳಪಡಿಸಿಕೊಂಡಿದ್ದಾರೆ. ವಿವಿಧ ಶೀರ್ಷಿಕೆಗಳ ಆರು ಅಧ್ಯಾಯಗಳಲ್ಲಿ ತತ್ವಪದಗಳನ್ನು ಚರ್ಚಿಸಲಾಗಿದೆ.

ವಸಾಹತುಶಾಹಿಯ ಸ್ವರೂಪ, ಅದರ ಕಾರ್ಯವಿಧಾನ, ಅದು ತಂದ, ತರಲೆಣಿಸಿದ ಬದಲಾವಣೆಗಳು, ಅದಕ್ಕೆ ಬಂದ ಪ್ರತಿಕ್ರಿಯೆ, ತತ್ವಪದಗಳು ಆ ಸಂದರ್ಭಕ್ಕೆ ಪ್ರತ್ಯಕ್ಷವಾಗಿಯೋ, ಪರೋಕ್ಷವಾಗಿಯೋ ಸಾಂಕೇತಿಕವಾಗಿಯೋ ಪ್ರತಿಕ್ರಿಯಿಸಿದ ಬಗೆಯನ್ನು ಕುರಿತು ಹೇಳಲಾಗಿದೆ. ಅಲ್ಲದೆ ತತ್ವಪದಕಾರರು ತಮ್ಮ ಕಾಲದ ರಾಜಕೀಯ, ಆರ್ಥಿಕ, ಸಾಮಾಜಿಕ, ವಿದ್ಯಮಾನಗಳಿಗೆ, ಒತ್ತಡಗಳಿಗೆ ಹೇಗೆ ಮುಖಾಮುಖಿಯಾದರು ಎನ್ನುವುದನ್ನು ಗುರುತಿಸುವ ಮುಖ್ಯ ಪ್ರಯತ್ನವೂ ಈ ಕೃತಿಯದಾಗಿದೆ.

ಬ್ರಿಟಿಷರ ಆಧುನಿಕ ಶಿಕ್ಷಣದ ಪ್ರಭಾವಕ್ಕೆ ಒಳಗಾದ ಆಧುನಿಕ ಕನ್ನಡ ಲೇಖಕರು ತತ್ವಪದಗಳನ್ನು ಉಪೇಕ್ಷೆಗೆ ಗುರಿಪಡಿಸಿದ್ದನ್ನು ಕುರಿತು ಚರ್ಚಿಸಲಾಗಿದೆ. ಲಿಖಿತ ಸಾಹಿತ್ಯವೇ ಶ್ರೇಷ್ಠವೆಂದು ಉಪಲಬ್ದ ಮಾಹಿತಿಗಳ ಮೇಲೆ ಕನ್ನಡ ಸಾಹಿತ್ಯ ಚರಿತ್ರೆ ಬರೆದ ಲೇಖಕರು ಮೌಖಿಕವಾದ ತತ್ವಪದಗಳನ್ನು ಚರಿತ್ರೆಯಲ್ಲಿ ದಾಖಲುಗೊಳಿಸದೇ ಇದ್ದುದಕ್ಕೆ 'ಭಾಷಾ ಶುದ್ಧಿಯಿಲ್ಲವೆಂದೋ ಪದಗಳ ಗ್ರಾಮ್ಯ ರೂಪಗಳನ್ನು ಸಂಕೋಚವಿಲ್ಲದೆ ಬಳಸಿದ್ದರಿಂದಲೋ, ಅಶ್ಲೀಲ ಪದರಚನೆಗಳೆಂದೂ, ಬರೀ ಅಧ್ಯಾತ್ಮ ತತ್ವ ಪ್ರತಿಪಾದನೆಯೆಂದೋ, ನಿರಾಕರಿಸಿದ್ದನ್ನು ಮತ್ತವರು ಅದೇ ಕಾಲದ ದಾಸರು ಉಲ್ಲೇಖಿಸಿದ್ದನ್ನು ಈ ಅಧ್ಯಯನ ಪ್ರಶ್ನಿಸುತ್ತದೆ.

ತತ್ವಪದಗಳು ಸೃಷ್ಟಿಯಾದ ೧೭, ೧೮ ಮತ್ತು ೧೯ನೇ ಶತಮಾನಗಳು ಕನ್ನಡ ಸಾಹಿತ್ಯದ ಮಟ್ಟಿಗೆ ಉಜ್ವಲವಾದ ಯುಗವಾಗಿದೆ. ಆದರೆ ಈ ಸಾಹಿತ್ಯ ಚರಿತ್ರೆಕಾರರಿಗೆ ಮಾತ್ರ 'ಕತ್ತಲಯುಗ' ಯಾಕೆ ಆಯಿತು? ಶುದ್ಧ ಸಾಹಿತ್ಯದ ಪರಿಕಲ್ಪನೆ ಈ ವಸಾಹತುಶಾಹಿ ಸೃಷ್ಟಿಸಿದ ಕೂಸು. ಇದನ್ನೇ ನಮ್ಮ ಸಾಹಿತ್ಯ ಚರಿತ್ರೆಕಾರರು ಬೆಳೆಸಿದರು. ಇದನ್ನು ಅರಿಯದೇ ಹೋದದ್ದು, ಈ ದಾರಿಯಲ್ಲಿಯೇ ನಮ್ಮ ಅನೇಕ ಕನ್ನಡ ಸಾಹಿತ್ಯ ಚರಿತ್ರೆಯ ಸಂಪುಟಗಳು ಸೃಷ್ಟಿಯಾದದ್ದೊಂದು ವಿಪರ್ಯಾಸ ಎನ್ನುತ್ತಾರೆ. ಆದರೆ ರಾನಡೆ, ಕಪಟರಾಳ ಅಂಥವರು ತತ್ವಪದಗಳನ್ನು ಇತರೆ ಅನುಭಾವಿ ಪಂಥಗಳ ಜೊತೆ ಸೇರಿಸಿ ಚರ್ಚಿಸಲು ಸಾಧ್ಯವಾಗಿರುವುದು ಮಹತ್ವದ ವಿಷಯವಾಗಿದೆ. ಈ ವೈರುಧ್ಯಕ್ಕೆ ವಸಾಹತುಶಾಹಿ ಸಂದರ್ಭ ಮುಖ್ಯವಾಗಿದೆ ಎಂದು ಗುರುತಿಸುತ್ತಾರೆ.

ಲೇಖಕರು ಕಳೆದ ೭೦೦-೮೦೦ ವರ್ಷಗಳ ರಚನೆಗಳನ್ನು (ತತ್ವಪದಗಳನ್ನು ಅಥವಾ ಸ್ವರ ವಚನಗಳನ್ನು) ಒಂದೇ ಗುಂಪಿಗೆ ಸೇರಿಸಿ ಮಾಡುವ ಅಧ್ಯಯನವನ್ನು ಪ್ರಶ್ನಿಸುತ್ತಾರೆ. ಆದರೆ ಅವುಗಳ ಸ್ವರೂಪ ವಿಶಿಷ್ಟತೆ, ಕಾಲದ ಸಂದರ್ಭ, ಒತ್ತಡಗಳ ಹಿನ್ನೆಲೆಯಲ್ಲಿ ಚರ್ಚಿಸಬೇಕೆಂದು ಹೇಳುತ್ತಾರೆ. ಆದರೆ ನಿರ್ದಿಷ್ಟ ಆಶಯ ಮತ್ತು ಗ್ರಹಿಕೆಗಳ ಆಧಾರದಲ್ಲಿ ಅಧ್ಯಯನದ ಅನುಕೂಲಕ್ಕೆ ಹೀಗೆ ಗ್ರಹಿಸಬಹುದಾದರೂ ದೀರ್ಘಕಾಲದ ಅನೇಕ ಅನುಭಾವಿಗಳ ಪ್ರೇರಣೆ-ಪ್ರಭಾವದಿಂದ ಬೆಳೆದುಬಂದ ಅನುಭಾವ ಸಾಹಿತ್ಯವನ್ನು ಏಕಾಕಾರದಲ್ಲಿ ನೋಡದೇ ಹೀಗೆ ಒಡೆದು ನೋಡುವುದು ಸರಿಯೇ? ಇದರಿಂದ ಪಡೆಯುವ ಫಲಿತ ಯಾವುದು ಎಂಬುದು ಗಮನಿಸಬೇಕಾಗಿದೆ.

ರಘುನಾಥರಾವ್ ಅವರು ಬಹುತೇಕ ತತ್ವಪದಗಳ ಸಂಕಲನಗಳು ೭೦ರ ದಶಕದ ನಂತರ ಬಂದವು ಎಂದು ಚರ್ಚಿಸುತ್ತಾರೆ. ಆದರೆ ಅದಕ್ಕೂ ಮೊದಲು ೧೯೧೫ರ 'ದೇವಾಂಗದ ತತ್ವಪದಗಳು' ದಿಂದ ೧೯೬೯ರ 'ಕೈವಲ್ಯ ಪದ್ಧತಿ'ವರೆಗೆ ಸುಮಾರು ೧೫ ತತ್ವಪದ ಕೃತಿಗಳು ಪ್ರಕಟವಾಗಿವೆ. ನಿಜಗುಣ ಶಿವಯೋಗಿ, ಆದಿ ಆಮಾತ್ಯೆಪ್ಪ, ಮೈಲಾರಬಸವಲಿಂಗ, ಕರಿವೃಷಭೇಂದ್ರ, ಸರ್ಪಭೂಷಣರು, ನೀರಲಕೆರೆ ಬಸವಲಿಂಗ, ಶರೀಫ ಸಾಹೇಬ ಮುಂತಾದವರ ಮಹತ್ವದ ತತ್ವಪದ ಕೃತಿಗಳು ಬಂದಿವೆ. ಇವುಗಳ ಗಂಭೀರ ಅಧ್ಯಯನ ಮಾತ್ರ ನಡೆದಿಲ್ಲ.

ತತ್ವಪದಕಾರರಿಗೆ ವಸಾಹತುಶಾಹಿ ಆಕ್ರಮಣ, ಸವಾಲು ಮತ್ತು ಒತ್ತಡಗಳನ್ನು ಎದುರಿಸಲು ನಾಥ, ಸಿದ್ಧರು, ವಚನಕಾರರು, ಸೂಫಿಗಳು ಪ್ರಭಾವ ಪ್ರೇರಣೆ ಬೀರಿದರು ಎಂದು ವಿವರಿಸಿದ್ದಾರೆ. ವಸಾಹತುಶಾಹಿ ಆಡಳಿತ ವ್ಯವಸ್ಥೆ ಸಾಮಾಜಿಕ, ಸಾಂಸ್ಕೃತಿಕ ಜೀವನದಲ್ಲಿ ದೊಡ್ಡ ಸಂಚಲನವನ್ನು ಉಂಟು ಮಾಡಿತು. ಆದರೆ ಅದು ಆತಂಕ ಮತ್ತು ದಿಗಿಲಿಗೆ ಕಾರಣವಾಯಿತು ಎಂದು ಚರ್ಚಿಸುತ್ತಾರೆ. ಆದರೆ ಅನೇಕ ತತ್ವಪದಕಾರರಿಗೆ ವಸಾಹತುಶಾಹಿ ಆಡಳಿತ ಅಷ್ಟೊಂದು ದಿಗಿಲು ಹುಟ್ಟಿಸಿಲ್ಲ. ಬದಲಿಗೆ ದೇಶೀಯ ಅರಸರ ಆಡಳಿತ, ವೈದಿಕರ ಚಾತುರ್ವರ್ಣ ವ್ಯವಸ್ಥೆ ಅವರ ದಿಗಿಲಿಗೆ ಕಾರಣ. ವಸಾಹತುಶಾಹಿ ಕುರಿತು ಕಡಕೋಳ ಮಡಿವಾಳಪ್ಪನವರು, ಶಿಶುನಾಳ ಶರೀಫರು ನೇರವಾಗಿ ಪ್ರತಿಕ್ರಿಯಿಸಿದರೂ ಇಬ್ಬಂದಿಯ ನಿಲುವನ್ನು ತಳೆದಿರುವುದು ಅವರ ರಚನೆಗಳಿಂದ ತಿಳಿಯುತ್ತದೆ.

ತತ್ವಪದಗಳನ್ನು ಹೀಗೆ ವಸಾಹತುಶಾಹಿ ವಿರೋಧಿ ನೆಲೆಯಲ್ಲಿಟ್ಟೇ ವ್ಯಾಖ್ಯಾನಿಸುವ ಈ ತರದ ಅಧ್ಯಯನಗಳು ರಹಮತ್ ತರೀಕೆರೆ ಅವರು ಗುರುತಿಸುವಂತೆ 'ಭಾರತದ ಕೆಳಜಾತಿಗಳ ವಿಷಯದಲ್ಲಿ ಇದೇ ವಸಾಹತುಶಾಹಿಯು ಸಾಮಾಜಿಕ ಚಲನಶೀಲತೆಗೆ ಬೇಕಾದ ಅನೇಕ ಶಕ್ತಿಗಳನ್ನು ಬಿಡುಗಡೆಗೊಳಿಸಿತು ಎಂಬುದನ್ನು ಮರೆಯುತ್ತವೆ' ಎನ್ನುತ್ತಾ 'ಇವತ್ತು ವಸಾಹತುಶಾಹಿ ಆಳ್ವಿಕೆಯ ಭಾಗವಾಗಿ ಬಂದ ಆಧುನಿಕತೆ, ವಿಜ್ಞಾನ, ವೈಚಾರಿಕತೆ, ತಂತ್ರಜ್ಞಾನ, ಉದಾರ ಮಾನವತಾವಾದ ಮತ್ತು ಸಮಾನತೆ ಪರಿಕಲ್ಪನೆಗಳನ್ನು ಕುರಿತು ಭಾರತೀಯ ಸಮಾಜದ ಬೇರೆ ಬೇರೆ ಸ್ತರಗಳು ಮಾಡಿರುವ ಸೋಜಿಗ ಮತ್ತು ಸಂತೋಷದ ಪ್ರತಿಕ್ರಿಯೆಗಳಿವೆ. ಬಳ್ಳಾರಿ ಸೀಮೆಯಲ್ಲಿ ಥಾಮಸ್ ಮನ್ರೋ ಬಗ್ಗೆ, ಸುರಪುರ ಭಾಗದಲ್ಲಿ ಟೇಲರ್ ಬಗ್ಗೆ ಇಂತಹ ಜಾನಪದವಿದೆ. ಅವನ್ನೂ ಜತೆಗಿಟ್ಟುಕೊಂಡು ಅಧ್ಯಯನ ಮಾಡಿದರೆ ಕೇವಲ ವಸಾಹತುಶಾಹಿ ವಿರೋಧದಲ್ಲಿ ಕಟ್ಟುವ ಸಿದ್ಧಾಂತಗಳ ಏಕಮುಖತನ ಕಡಿಮೆಯಾದೀತು'[೪೪] ಎನ್ನುವ ಮಾತನ್ನು ಈ ಅಧ್ಯಯನಗಳು ಗಮನಿಸಬೇಕು.

ತತ್ವಪದಕಾರರ ವಿಕ್ಷಿಪ್ತ, ವಿಚಿತ್ರ ನಡವಳಿಕೆಗಳು ಯಜಮಾನ ಸಂಸ್ಕೃತಿಯನ್ನು ಮತ್ತು ವಸಾಹತು ಶಾಹಿಯನ್ನು ಎದುರಿಸುವ ಮಾರ್ಗವಾಗಿದೆ ಎನ್ನುತ್ತಾರೆ. ಇದು 'ಪಶ್ಚಿಮದ ಎರವಲು ಪರಿಕಲ್ಪನೆ' ಎಂದೂ ಚರ್ಚಿಸುತ್ತಾರೆ. ಆದರೆ ಕೆಲವೇ ತತ್ವಪದಕಾರರು ಈ ವಿಕ್ಷಿಪ್ತ ನಡವಳಿಕೆಯಲ್ಲಿ ತೊಡಗಿದವರು

ನಿಜ. ಇದು ಪಶ್ಚಿಮದ ಪರಿಕಲ್ಪನೆಯಲ್ಲ. ಸೂಫಿಗಳಲ್ಲಿ ಈ ಹುಚ್ಚಿನ ಪರಿಕಲ್ಪನೆ ಇದೆ. ಮರುಳ, ಮರುಳಸಿದ್ಧ ಎನ್ನುವ ಹೆಸರುಗಳು ಈ ಹಿಂದಿನ ಅನುಭಾವಿ ಪರಂಪರೆಯಲ್ಲಿ ಕಂಡುಬಂದಿರುವುದನ್ನು ವಿದ್ವಾಂಸರು ಗುರುತಿಸಿದ್ದಾರೆ.

ಈ ಹಿನ್ನೆಲೆಯಲ್ಲಿ ವಸಾಹತುಶಾಹಿಯ ಕುರಿತು ಈ ಕೃತಿಯಲ್ಲಿ ಕಾಣಿಸಿದ ಕೆಲವು ತಾತ್ವಿಕ ಪ್ರಶ್ನೆಗಳು ಈ ರೀತಿ ಇವೆ.

- ತತ್ವಪದಕಾರರು ತಮ್ಮ ಪರಿಸರದ ಆಚರಣೆ, ರೀತಿ, ರಿವಾಜು, ಹಬ್ಬ ಮುಂತಾದವುಗಳನ್ನು ಯಜಮಾನ ಸಂಸ್ಕೃತಿಯ ಮಾದರಿಗಳಿಗೆ ಸಮಾನವಾಗಿ ನಿಲ್ಲಿಸುವ ತುರ್ತು ಏನಿತ್ತು? ಏಕೆಂದರೆ ಯಜಮಾನ ಸಂಸ್ಕೃತಿಗೆ, ಸಾಂಸ್ಥಿಕತೆಗೆ ವಿರೋಧ ಒಡ್ಡಿದ ಅವರನ್ನು ಹೀಗೆ ಗ್ರಹಿಸುವುದು ಸರಿಯೇ? ಇದಕ್ಕೆ ವಸಾಹತುಶಾಹಿಯು ಹೇಗೆ ಕಾರಣವಾಗಿದೆ?

- ಶರೀಫರು ಹೆಚ್ಚಾಗಿ ವಸಾಹತು ಸಂಸ್ಕೃತಿಗೆ ಪ್ರತಿಕ್ರಿಯಿಸಿರುವಂತೆ, ಈತನ ಕಾಲದಲ್ಲಿ ಬದುಕಿದ್ದ ಉಳಿದ ತತ್ವಪದಕಾರರು ಅಷ್ಟಾಗಿ ಪ್ರತಿಕ್ರಿಯಿಸದೇ ಇರುವುದಕ್ಕೆ ಕಾರಣವೇನು? ವಸಾಹತುಶಾಹಿ ಸಂದರ್ಭ ಇವರಿಗೆ ಯಾವ ರೀತಿಯ ಪ್ರಭಾವ ಬೀರಿತು?

- ವಾಣಿಜ್ಯ ವ್ಯಾಪಾರ ಹಿಂದಿನಿಂದಲೂ ಇರುವಂತದೇ ಆದರೂ ವಸಾಹತುಶಾಹಿಯ ವ್ಯಾಪಾರ ನೀತಿಯನ್ನು ಸ್ವಾಗತಿಸುವ ಇಲ್ಲವೇ ನಿರಾಕರಿಸುವ ಧಾಟಿಯ ರಚನೆಗಳು ಅವರಲ್ಲಿ ಯಾಕೆ ಕಾಣಿಸಿಕೊಂಡಿವೆ? ಅವರ ನ್ಯಾಯ ವ್ಯವಸ್ಥೆಯನ್ನು ಹೀಗೆಯೇ ಯಾಕೆ ನೋಡುತ್ತಾರೆ?

- ರೂಢಿಗತ ವ್ಯವಸ್ಥೆಯನ್ನು ಪ್ರಶ್ನಿಸುವ ಬಂಡುಕೋರತನ ವಿಕ್ಷಿಪ್ತತೆಗೂ ಮತ್ತು ವಸಾಹತುಶಾಹಿಗೂ ಸಂಬಂಧವಿರುವುದಾದರೆ ವಸಾಹತುಶಾಹಿಯು ತರಲಾರಂಭಿಸಿದ ಬದಲಾವಣೆಗಳಿಗೆ ಪ್ರತಿಭಟನೆಯನ್ನು ಮಾಡಿರುವುದು ಅಪ್ರಜ್ಞಾಪೂರ್ವಕವಾದುದು ಎನ್ನುತ್ತಾರೆ. ಇದನ್ನು ಒಪ್ಪಲಾಗದು. ಬದಲಿಗೆ ಅವರು ಆತಂಕಿತರಾಗಿಯೂ ಸ್ವೀಕರಿಸುತ್ತಲೇ ಅದನ್ನು ದೇಶಿ ವಿನ್ಯಾಸಗಳಿಗೆ ಬಳಸಿಕೊಳ್ಳುವ ಆಶಯವು ಮುಖ್ಯವಾಗಿ ಕಾಣುವುದನ್ನು ಶೋಧಿಸಬೇಕಾಗಿದೆ.

ಒಟ್ಟಿನಲ್ಲಿ ಎಲ್ಲ ಕಾಲದ ಸಾಹಿತ್ಯವು ತನ್ನ ಕಾಲದ ವಿದ್ಯಮಾನಗಳಿಗೆ, ಒತ್ತಡಗಳಿಗೆ, ತವಕ ತಲ್ಲಣಗಳಿಗೆ, ಆಶಯಗಳಿಗೆ ಅನಿವಾರ್ಯವಾದ ಆಕೃತಿಗಳನ್ನು ಕಂಡುಕೊಳ್ಳುವ ಪ್ರಯತ್ನ ಮಾಡುತ್ತಿರುತ್ತದೆ. ತತ್ವಪದಗಳೂ ಇದಕ್ಕೆ ಹೊರತಲ್ಲ. ಇದನ್ನು ಅರಿಯುವ ದೃಷ್ಟಿಯಿಂದ ಈ ಅಧ್ಯಯನಗಳು ಮಹತ್ವವಾಗಿವೆ.

ಈ ಮೇಲೆ ಚರ್ಚಿಸಲಾದ ಕೃತಿಗಳಲ್ಲಿ 'ಕನ್ನಡದಲ್ಲಿ ಕೈವಲ್ಯ ಸಾಹಿತ್ಯ, ಸರ್ಪಭೂಷಣ ಶಿವಯೋಗಿ, ಬೀದರ್ ಜಿಲ್ಲೆಯ ತತ್ವಪದಕಾರರು ಹಾಗೂ ಇದೇ ನೆಲೆಯಲ್ಲಿರುವ ಕಾರಣಕ್ಕೆ ಇಲ್ಲಿ ಚರ್ಚಿಸದೇ ಇರುವ

ಎಡದೊರೆ ನಾಡಿನ ಅನುಭಾವಿ ಕವಿಗಳು, ಸ್ವರವಚನಗಳು : ಒಂದು ವಿವೇಚನೆ ಜನಪದ ಕವಿಚರಿತೆ ಈ ಕೃತಿಗಳೆಲ್ಲ ಅನುಭಾವಿ ಕವಿಯನ್ನು, ಅವರ ಸಾಹಿತ್ಯವನ್ನು ಮೂಲಮಾನವಾಗಿಸಿಕೊಂಡ ಅಧ್ಯಯನಗಳಾಗಿವೆ. ಇವು ಪರಿಚಯಾತ್ಮಕವಾಗಿವೆ. ಆಯಾ ಕವಿಯ ಜೀವನ, ಕಾಲ ವಿಚಾರ, ಪ್ರಾದೇಶಿಕತೆ, ಅವನ ಹಾಡುಗಳ ವಸ್ತು, ಭಾಷಾ ಶೈಲಿ, ಪ್ರಭಾವ ಈ ವಿಷಯಗಳನ್ನು ಬಿಡದೆ ಚರ್ಚಿಸಲಾಗಿದೆ. ಕೆಲವೊಮ್ಮೆ ಆ ಕವಿಯ ರಚನೆಗಳಲ್ಲಿ ಕಂಡುಬರುವ ಚಾರಿತ್ರಿಕ, ಸಾಮಾಜಿಕ ಮತ್ತು ಸಾಹಿತ್ಯ ಸಂಬಂಧೀ ಸಂಗತಿಗಳನ್ನು ಒಟ್ಟು ಅಧ್ಯಯನದ ವ್ಯಾಪ್ತಿಯಲ್ಲಿ ತರುವುದುಂಟು.

ಈ ಕವಿಕೇಂದ್ರಿತ ಅಧ್ಯಯನಗಳ ಹಿಂದಿನ ತಾತ್ವಿಕ ದೃಷ್ಟಿಕೋನ ತೆಳುವಾದದ್ದು. ನೇರವಾಗಿ ಕವಿಯ ಜೀವನ ವಿವರಗಳಿಗೂ ರಚನೆಗಳಿಗೂ ಇರುವ ಸಂಬಂಧವನ್ನು ಗುರುತಿಸುವ ಸಂದರ್ಭಗಳು ಕಡಿಮೆ. ಆದರೂ ಕವಿಯ ವ್ಯಕ್ತಿತ್ವದ ಭಾಗವಾಗಿ ಅವನ ಹಾಡುಗಳನ್ನು ಪರಿಗಣಿಸುವ ಕಡೆಗೆ ಇವುಗಳಲ್ಲಿ ಒಲವು ಕಾಣಿಸುತ್ತದೆ.

'ನುಡಿವ ಬೆಡಗು, ಬಿಂಬದೊಳಗಣ ಪ್ರಾಣ ಹಾಗೂ ತತ್ವಪದಕಾರರು ಮತ್ತು ವಸಾಹತುಶಾಹಿ ವ್ಯವಸ್ಥೆ : ಒಂದು ಅಧ್ಯಯನ' ಈ ಕೃತಿಗಳು 'ವಸ್ತು ಕೇಂದ್ರಿತ'ವಾಗಿವೆ. ಈ ಬಗೆಯ ಅಧ್ಯಯನಗಳು ಒಬ್ಬನೇ ಕವಿಯನ್ನು, ಅವನ ರಚನೆಗಳನ್ನು ಕುರಿತಿರದೆ, ಒಟ್ಟಾರೆ ಕಾವ್ಯ ಪರಂಪರೆಯನ್ನು ಅನುಲಕ್ಷಿಸಿ ನಡೆದಿರುತ್ತವೆ. ತತ್ವಪದಗಳ ಕುರಿತ ಇಂಥ ಅಧ್ಯಯನಗಳು ನಡೆದಿರುವುದು ಕಡಿಮೆ.

ಈ ತರದ ಅಧ್ಯಯನಗಳು ಹಾಡುಗಳ ವಸ್ತು, ಹಿಂದಿನ ಪರಂಪರೆ ಹಾಗೂ ಸಮಕಾಲೀನ ಸಂಗತಿಗಳಿಗೆ ಮಹತ್ವ ಕೊಡುತ್ತವೆ. ಹಾಡುಗಳ ವಸ್ತುವನ್ನು ಅದರ ಅನನ್ಯತೆಯಲ್ಲಿ ಪರಿಗಣಿಸುತ್ತವೆ. ಆದರೆ ವೈರುಧ್ಯಗಳನ್ನು ಬಿಟ್ಟುಕೊಟ್ಟಿವೆ. ವೈರಾಗ್ಯ, ಸಂಸಾರ, ಹೆಣ್ಣಿನ ಬಗ್ಗೆ ತಳೆದ ನಿಲುವು, ಆಧುನಿಕತೆ/ವಸಾಹತುಶಾಹಿಗೆ ತೋರಿದ ಪ್ರತಿಕ್ರಿಯೆ ಈ ಅಂಶಗಳ ಕುರಿತು ಮೇಲಿನ ಕೃತಿಗಳು ಚರ್ಚಿಸಿವೆ. ಈ ನಿಟ್ಟಿನಲ್ಲಿ ತತ್ವಪದಗಳ ಕುರಿತ ಗಂಭೀರ ಅಧ್ಯಯನ ನಡೆಯಬೇಕಾಗಿರುವುದನ್ನು ಪರೋಕ್ಷವಾಗಿ ಸೂಚಿಸುತ್ತವೆ.

**೪.೫. ಪಿಎಚ್.ಡಿ. ಮಹಾಪ್ರಬಂಧಗಳು**

ತತ್ವಪದಗಳು ಮತ್ತು ತತ್ವಪದಕಾರರನ್ನು ಕುರಿತ ಅಧ್ಯಯನಗಳು ೭೦ರ ದಶಕದಿಂದೀಚೆಗೆ ನಡೆದಿವೆ. ಬಹುತೇಕ ಅಧ್ಯಯನಗಳು ತತ್ವಪದಕಾರರ ಜೀವನ ಅವರ ಸಾಹಿತ್ಯ ಕುರಿತು ನಡೆದಿವೆ. ಕಳೆದ ೪೦ ವರ್ಷಗಳಿಂದ ಈ ಅಧ್ಯಯನಗಳು ಸಾಗಿಬಂದಿವೆ. ತತ್ವಪದ ಸಾಹಿತ್ಯದ ಮೂಲಕ(ತತ್ವಪದಕಾರರ) ಅವರ ಜೀವನ ಕ್ರಮವನ್ನು ಅರಿಯುವ ಪ್ರಯತ್ನ ಮಾಡಲಾಗಿದೆ. ಅವರು ಬದುಕಿದ ಊರು, ಊರಾಡಿಕೊಂಡಿದ್ದ ಪ್ರದೇಶ, ಜನಸಮುದಾಯಗಳಲ್ಲಿ ಅವರು ಬೀರಿದ ಪ್ರಭಾವವನ್ನು ತಿಳಿಯಲಾಗಿದೆ.

ಅವರ ಶಿಷ್ಯರ, ನಿಕಟ ಸಂಬಂಧಿಗಳ, ಜನಸಮುದಾಯಗಳ ಮೂಲಕ, ಕ್ಷೇತ್ರಕಾರ್ಯದಿಂದ ಸಂಗ್ರಹಿಸಿದ ಮಾಹಿತಿಗಳಿಂದ ಚರಿತ್ರೆಯನ್ನು ಕಟ್ಟುವ ಕಾರ್ಯ ನಡೆದಿದೆ. ಅಲ್ಲದೆ ತತ್ವಪದಕಾರರ ಕುರಿತು, ಪ್ರದೇಶಕ್ಕೆ ಮತ್ತು ಜಿಲ್ಲೆಗೆ ನಿಷ್ಠಗೊಳಿಸಿದ ಅಧ್ಯಯನಗಳೂ ಇವೆ. ದಲಿತ, (ಸಮುದಾಯ) ಜಾತಿ ಹಿನ್ನೆಲೆಯಲ್ಲಿಯೂ ನಿಷ್ಠವಾಗಿ ಅಧ್ಯಯನಗಳು ನಡೆದಿವೆ.

ಕಳೆದ ದಶಕದಿಂದೀಚೆಗೆ ಮಾತ್ರ ತತ್ವಪದಗಳ ಕುರಿತ ಗಂಭೀರ ಅಧ್ಯಯನ ಸಾಗಿದೆ. ಅದನ್ನು ಕೆಲವು ಲೇಖನಗಳಲ್ಲಿ, ಅಧ್ಯಯನ ಗ್ರಂಥಗಳಲ್ಲಿ ಕಾಣಬಹುದು. ಬಹುತೇಕ ಅಧ್ಯಯನಗಳಲ್ಲಿ ತತ್ವಪದಗಳ ಮೂಲವನ್ನು ಸ್ವರವಚನಗಳಲ್ಲಿಯೇ ಹುಡುಕುವ ಪ್ರಯತ್ನ ಮಾಡಲಾಗಿದೆ. ಹೀಗಾಗಿ ಅಧ್ಯಯನದ ಆಸಕ್ತಿಗಳು ಸಂಪ್ರದಾಯವಾದಿ ನೆಲೆಯಲ್ಲಿ ನಡೆದಿವೆ. ಮಧ್ಯಕಾಲೀನ ಭಕ್ತಿ ಸಾಹಿತ್ಯವನ್ನು ಬಹುತೇಕ ಸ್ವರವಚನಗಳು ಎಂದು ವೀರಶೈವ ಪರಿಭಾಷೆಯ ತಾತ್ವಿಕ ಚೌಕಟ್ಟಿನಲ್ಲಿ, ಆ ಕಾಲದ ಸಾಹಿತ್ಯಕ ಸಂಗತಿಗಳನ್ನು ಕಟ್ಟಿಕೊಡುವ ಪ್ರಯತ್ನವನ್ನು ಮಾಡಿವೆ. ಗುರು ಲಿಂಗ, ಜಂಗಮ, ಸತಿ-ಪತಿ ಭಾವ, ಅನುಭಾವ ಮುಂತಾದ ಪಾರಂಪರಿಕ, ದಾರ್ಶನಿಕ ಪರಿಕಲ್ಪನೆಯ ನೆಲೆಗಳನ್ನು ಪುನರ್‌ಪರಿಶೀಲನೆಗೆ ಗುರಿ ಮಾಡಲಾಗಿದೆ. ಭಕ್ತರನ್ನು ವ್ರತಪ್ರಧಾನವಾಗಿ ಕಾಣುವುದಕ್ಕಿಂತ ಭಿನ್ನವಾಗಿ ಕ್ರಿಯೆಪ್ರಧಾನವಾಗಿ ಅರಿಯಲಾಗಿದೆ. ಅರಿವು ಮತ್ತು ಕ್ರಿಯೆಗಳ ಸಾಂಘೀಕರಣವನ್ನು ಪ್ರತಿಪಾದಿಸಿ ಮೌಲ್ಯವಾಗಿಸಿದ್ದನ್ನು ಚರ್ಚಿಸುತ್ತವೆ. ದುಡಿವ ವರ್ಗದ ಅಥವಾ ಅವರ ಕುಲಕಸುಬುಗಳ ನೆಲೆಯಿಂದ ನೋಡುವ ಅಧ್ಯಯನ ಕ್ರಮ ಕುತೂಹಲಕರವಾದದ್ದು. ಆದರೆ ಹೆಚ್ಚು ವೀರಶೈವೀಕರಣಗೊಂಡ ನೆಲೆಯಲ್ಲಿಯೇ ಅಧ್ಯಯನಗಳು ನಡೆದಿವೆ.

ಕಳೆದ ನಲವತ್ತು ವರ್ಷಗಳಲ್ಲಿ ಈ ಮೇಲಿನ ಬಹುತೇಕ ಅಧ್ಯಯನ ವಿಧಾನಗಳು ಕೆಲವು ಒಳನೋಟಗಳನ್ನು ಸೂಚಿಸಿದರೆ ಮತ್ತೆ ಕೆಲವೊಮ್ಮೆ ಬಹುತೇಕ ಹೇಳಿದ್ದನ್ನೇ ಮತ್ತೆ ಮತ್ತೆ ಬೇರೆ ಮಾತುಗಳಲ್ಲಿ ಹೇಳುವ ಪ್ರಯತ್ನಗಳಾಗಿವೆ. ಇದಕ್ಕೆ ಎರಡು ಮುಖ್ಯ ಕಾರಣಗಳು ಅನಿವಾರ್ಯವೆಂಬಂತೆ ಕಂಡುಬಂದಿವೆ. ಒಂದು : ಲಿಖಿತ ಮತ್ತು ಮೌಖಿಕವಾಗಿರುವ ಈ ಹಾಡುಗಳ ಚಟುವಟಿಕೆ ವ್ಯಾಪಕವಾದುದು. ಇವುಗಳಲ್ಲಿ ಅನುಭಾವ, ಧಾರ್ಮಿಕ ಪ್ರಾಧಾನ್ಯತೆ ಮತ್ತು ಕಾವ್ಯಾನುಭವಪರ ದೃಷ್ಟಿಕೋನ ಸಹಜವಾಗಿಯೇ ಗೋಚರಿಸುತ್ತದೆ. ಹಾಗಾಗಿ ವಿವಿಧ ಮಠಗಳು ಇಂತಹ ಬರಹಗಳು ಪ್ರಕಟಣೆಗೆ ಮುಂದಾದಂತೆ ತೋರುತ್ತದೆ. ಎರಡು : ಈವರೆಗೆ ನಡೆದ ಅಧ್ಯಯನಗಳನ್ನು ಪೂರ್ವಭಾವಿಯಾಗಿ ಸಮೀಕ್ಷಿಸದೇ ಮಾಡಿರುವ ಈ ಮಾದರಿಯ ಅಧ್ಯಯನಗಳಲ್ಲಿ ಈಗಾಗಲೇ ಹೇಳಲಾದ ವಿಚಾರಗಳು ಮತ್ತೆ ಚರ್ವಿತ, ಚರ್ವಣವಾಗುತ್ತಾ ನಡೆದಿವೆ.

ಈ ಪ್ರಬಂಧಗಳು ಅಧ್ಯಯನದ ವಿಧಿ-ವಿಧಾನಗಳನ್ನು ಕುರಿತಂತೆ ನಿರ್ದಿಷ್ಟ ಮಾದರಿಗಳನ್ನು ಹೊಂದಿವೆ. ಈ ಮಾದರಿಗಳು ಕೆಲವೊಮ್ಮೆ ಪ್ರಚಲಿತ ಮಾದರಿಗಳ ಮುಂದುವರಿಕೆಯಾಗಿದ್ದರೆ ಮತ್ತೆ ಕೆಲವು ನೆಲೆಗಳನ್ನು ರೂಪಿಸುವ ಪ್ರಯತ್ನಗಳಲ್ಲಿ ಆಸಕ್ತಿಯನ್ನು ತೋರುತ್ತವೆ. ಕವಿಗಳನ್ನು ಕೇಂದ್ರವಾಗಿ

ಮತ್ತು ಅವರ ಸಾಹಿತ್ಯವನ್ನು ಸಮಗ್ರವಾಗಿ ಅಧ್ಯಯನ ಮಾಡುವ ಮಹಾಪ್ರಬಂಧಗಳೇ ಹೆಚ್ಚಾಗಿವೆ. ಅವುಗಳ ಸ್ವರೂಪವನ್ನು ಈ ಕೆಳಗಿನಂತೆ ನೋಡಬಹುದು.

**೪.೫.೧. ಕವಿಕೇಂದ್ರಿತ ಅಧ್ಯಯನಗಳು**

ಈ ಅಧ್ಯಯನಗಳ ಒಟ್ಟು ಚೌಕಟ್ಟು ಬಹುಮಟ್ಟಿಗೆ ಖಚಿತವಾಗಿದೆ. ಆಯಾ ಕವಿಯ ಜೀವನ, ಸಾಧನೆ, ಕಾಲ ವಿಚಾರ, ಮತಧರ್ಮ, ವ್ಯಕ್ತಿತ್ವ, ಸಮಕಾಲೀನ ಅನುಭಾವಿಗಳ ಪ್ರಭಾವ, ಕೃತಿಗಳ ವಸ್ತು, ಸಾಹಿತ್ಯಕ ಮೌಲ್ಯ, ಭಾಷಾಶೈಲಿ, ಸಾಹಿತ್ಯ ಪರಂಪರೆ, ಗುರುಪರಂಪರೆ, ಕನ್ನಡ ಸಾಹಿತ್ಯದಲ್ಲಿ ಇವರ ಸ್ಥಾನ ಈ ಸಂಗತಿಗಳ ಹಿನ್ನೆಲೆಯಲ್ಲಿ ಪ್ರಧಾನವಾಗಿ ನಿರೂಪಿಸಿ ಚರ್ಚಿಸಲಾಗಿದೆ. ಕೆಲವೊಮ್ಮೆ ಆ ಕವಿಗಳ ಸಾಹಿತ್ಯದಲ್ಲಿ ಕಂಡುಬರುವ ಚಾರಿತ್ರಿಕ, ಧಾರ್ಮಿಕ, ಸಾಮಾಜಿಕ ಮತ್ತು ಕಾವ್ಯಸಂಬಂಧೀ ಸಂಗತಿಗಳನ್ನು ಒಟ್ಟು ಅಧ್ಯಯನದ ವ್ಯಾಪ್ತಿಯಲ್ಲಿ ತರುವ ಪ್ರಯತ್ನವೂ ಇದೆ. ಹಲವು ಆಕರಗಳನ್ನು ಬಳಸಿಕೊಂಡು ಕ್ಷೇತ್ರಾಧ್ಯಯನ ಮಾಡಿ ಕವಿಗಳ ಕಾಲ-ದೇಶಗಳನ್ನು ಚಾರಿತ್ರಿಕವಾಗಿ ಶೋಧಿಸುವ ವಿಧಾನಗಳು ಇವೆ. ಈ ಅಧ್ಯಯನಗಳಲ್ಲಿ ನೀತಿಪರ, ಮೌಲ್ಯಸಂಬಂಧೀ ಮತ್ತು ಕಾವ್ಯಾನುಭವ ಪ್ರಧಾನ ದೃಷ್ಟಿಕೋನ, ಪರಂಪರೆ ಮತ್ತು ಪ್ರಭಾವಗಳು ಕೆಲಸ ಮಾಡಿವೆ.

**ಮೌಲ್ಯಸಂಬಂಧೀ ದೃಷ್ಟಿಕೋನ :** ಈ ಅಧ್ಯಯನ ವಿಧಾನವು ತತ್ವಪದ ಸಾಹಿತ್ಯದಲ್ಲಿ ಮಂಡಿತವಾಗಿರುವ ಮೌಲ್ಯಪ್ರಜ್ಞೆಯನ್ನು ಪ್ರಧಾನಗೊಳಿಸುವ ಹಾಗೂ ಆ ಮೌಲ್ಯಪ್ರಜ್ಞೆಯನ್ನು ಈ ಹೊತ್ತಿಗೆ ಜರೂರುಗೊಳಿಸುವ ಉದ್ದೇಶದಿಂದ ಈ ಬಗೆಯ ನೋಟಗಳು ಕಾಣಿಸಿದಂತೆ ತೋರುತ್ತದೆ. ರಚನೆಗಳಲ್ಲಿ ಕಂಡುಬರುವ ಮಾನವೀಯ ಸಂಬಂಧಗಳ ಚಿತ್ರಣ, ಕಾಲದೇಶಾತೀತ ಮಾನವಾಸಕ್ತಿಗಳ ಸೂಚನೆ. ಧರ್ಮನಿರಪೇಕ್ಷ ವಿಚಾರ ಇವೆಲ್ಲವುಗಳನ್ನು ನಿದರ್ಶನವಾಗಿ ತೆಗೆದುಕೊಂಡು ಅವುಗಳ ಮೂಲಕ ಒಂದು ಕಾಣ್ಕೆಯನ್ನು ಕಟ್ಟಿಕೊಡುವ ಪ್ರಯತ್ನ ಇಲ್ಲಿ ನಡೆಯುತ್ತದೆ. ಪಿ.ಎಂ.ಸಿದ್ಧಯ್ಯ ಅವರ 'ನಿಜಗುಣರ ಕೃತಿಗಳ ದಾರ್ಶನಿಕ ಹಾಗೂ ಸಾಹಿತ್ಯಕ ಮೌಲ್ಯಗಳು' ಎಂಬ ಪ್ರಬಂಧವು ಸಾಹಿತ್ಯಕ ಮೌಲ್ಯ ಕುರಿತಂತೆ ಐದು ಭಾಗಗಳಲ್ಲಿ ವಿವರಿಸುತ್ತದೆ. ಸಾಹಿತ್ಯದ ರಚನೆ, ವ್ಯಾಪ್ತಿ, ಉದ್ದೇಶ, ಮೌಲ್ಯ ಕುರಿತು ಚರ್ಚಿಸಲಾಗಿದೆ. ಸಾಹಿತ್ಯ ಮನರಂಜನೆಯನ್ನು ನೀಡಬೇಕೆ? ನೀತಿ, ಉಪದೇಶ, ಬೋಧನೆ ನೀಡಬೇಕೆ? ಎಂಬ ವಾದಗಳನ್ನು ಪರಿಶೀಲಿಸಿ ಈ ಎರಡೂ ಸಮನ್ವಿತಗೊಳ್ಳುವ ಸಾಹಿತ್ಯವೆ ಶ್ರೇಷ್ಠ ಎನ್ನುತ್ತಾರೆ. ಆದರ್ಶಗಳನ್ನು ಒಳಗೊಂಡ ಸಾಹಿತ್ಯವೇ ತಾನು ಹೊಂದುವ ಮೌಲ್ಯವಾಗಿದೆ ಎಂದು ಸಾಹಿತ್ಯಮೌಲ್ಯವನ್ನು ನಿರ್ಧರಿಸುತ್ತಾರೆ. ತತ್ವ ಮತ್ತು ಅಧ್ಯಾತ್ಮ ವಿಚಾರಗಳೇ ನಿಜಗುಣರ ಮೌಲ್ಯ ವಿಶೇಷವಾಗಿವೆ ಎಂದು ಚರ್ಚಿಸಲಾಗಿದೆ. ಮೋಕ್ಷವೇ ಇವರ ಸಾಹಿತ್ಯದ ಮುಖ್ಯ ಉದ್ದೇಶ ಎಂದೂ ಹೇಳಿದ್ದಾರೆ. ಈ ಮೋಕ್ಷ ಪಡೆಯುವುದರಿಂದ ಮಾನವ ಜೀವನ ಸಾರ್ಥಕ ಎಂದು ಭಕ್ತಿ, ಗೌರವದ ಕಾರಣವಾಗಿ ಭಾವುಕ ವಿವೇಚನೆಯಿಂದ ಆಧುನಿಕ ಬದುಕಿನ ಒತ್ತಡ ಮತ್ತು ಆತಂಕದ ಹಿನ್ನೆಲೆಯಲ್ಲಿ ಚರ್ಚಿಸುತ್ತಾರೆ.

ಎಮ್.ಎನ್.ಸಿಂಧಗಿ ಅವರ 'ಶಿಶುನಾಳ ಶರೀಫ್ ಅವರ ಜೀವನ ಕೃತಿಗಳು ಮತ್ತು ದರ್ಶನ' ಈ ಪ್ರಬಂಧವು ಜನಸಮುದಾಯಗಳಲ್ಲಿ ಸಂತರು ಪವಾಡ ಪುರುಷರಾಗಿ, ಪುರಾಣ ವ್ಯಕ್ತಿಗಳಾಗಿ, ಲೀಲಾಮಹಿಮರಾಗಿ ಇವರನ್ನು ಕುರಿತು ರೋಚಕ ಕಥೆ ಇರುವುದನ್ನು ಆತಂಕ ವ್ಯಕ್ತಪಡಿಸಿದರೂ, ಅವರ ತತ್ವಗಳು ಜನ ಸಮುದಾಯಗಳಲ್ಲಿ ಹೇಗೆ ದೈವಿಕತೆಯ, ಶ್ರದ್ಧೆಯ ಸಾಂಸ್ಕೃತಿಕ ಪ್ರಜ್ಞೆಯ ಕೇಂದ್ರವಾಗಿವೆ ಎನ್ನುವುದನ್ನು ಚರ್ಚಿಸುತ್ತಾರೆ. ಅವರ ಕೃತಿಗಳಲ್ಲಿ ಬಳಕೆಯಾದ ಸಂಕೇತಗಳು, ಕೋಳಿ, ಕೋಗಿಲೆ, ಗಿಡಗ ಮುಂತಾದವುಗಳನ್ನು ಅವುಗಳ ಹಿನ್ನೆಲೆಯ ಮೌಲಿಕ ಕಥೆಗಳನ್ನು ಕುರಿತು ವಿಶ್ಲೇಷಿಸುತ್ತಾರೆ.

ಇಂತಹ ಅಧ್ಯಯನಗಳು ಆಯ್ದ ರಚನೆಗಳನ್ನು ಜೀವನ ಸಂದರ್ಭದಲ್ಲಿ ಇರಿಸಿ ನೋಡುತ್ತವೆ. ಜೀವನದ ಬಗೆಗಿನ ಮೌಲ್ಯಕೇಂದ್ರಿತ ದೃಷ್ಟಿಕೋನವೊಂದನ್ನು ಕೃತಿಯಿಂದ ಪಡೆಯಲು ಯತ್ನಿಸುತ್ತವೆ. ಜೀವನ ಮತ್ತು ಕೃತಿಗಳ ನಡುವೆ ಸೂತ್ರ-ಉದಾಹರಣೆಗಳ ಸಂಬಂಧವೊಂದನ್ನು ಸ್ಥಾಪಿಸಬಯಸುತ್ತವೆ. ಆದರೆ ಉಳಿದ ರಚನೆಗಳನ್ನು ಸಾಂಸ್ಕೃತಿಕ ಪರಿಶೀಲನೆಗೆ ಒಡ್ಡಲು ಇವುಗಳಿಂದ ಸಾಧ್ಯವಾಗುವುದಿಲ್ಲ. ಈ ಲಕ್ಷಣಗಳಿಂದಾಗಿ ಮೌಲ್ಯಸಂಬಂಧೀ ದೃಷ್ಟಿಕೋನದ ವಿಮರ್ಶೆಗಳಿಗೆ ಸಾಹಿತ್ಯಕವಾಗಿ ಮಿತಿಗಳು ಇವೆ ಅನಿಸುತ್ತದೆ.

**ನೀತಿಪರ ದೃಷ್ಟಿಕೋನ :** ಸಾಹಿತ್ಯ ಅಧ್ಯಯನದಲ್ಲಿ ಈ ನೀತಿಪರ ದೃಷ್ಟಿಕೋನ ಸಾಕಷ್ಟು ಬಲವಾಗಿಯೇ ಬೆಳೆದುಬಂದಿದೆ. ಒಟ್ಟು ಸಂಸ್ಕೃತಿಯ ಚರ್ಚೆಯಲ್ಲಿ ಸಾಹಿತ್ಯ ಕೃತಿಗಳ ಜೀವನೋಪಯೋಗಿ ಗುಣಗಳು ಮತ್ತು ವಾಸ್ತವವಾದಿತನಕ್ಕೆ ಹೆಚ್ಚು ಒತ್ತುಕೊಡಲಾಗುತ್ತದೆ. ಈ ದೃಷ್ಟಿಯಿಂದ ನೋಡಿದರೆ ತತ್ವಪದ ಸಾಹಿತ್ಯವನ್ನು ಕಳೆದೊಂದು ದಶಕದಿಂದ ಮತ್ತು ಇತ್ತೀಚೆಗೂ ಶೈಕ್ಷಣಿಕ ಚೌಕಟ್ಟಿನ ಒಳಗೆ ತಂದಿದ್ದು, ಭಾಷಾ ಶೈಕ್ಷಣಿಕ ಚೌಕಟ್ಟಿನ ಒಳಗೆ ಇರಿಸತೊಡಗಿದ್ದು ಕಾಣುತ್ತೇವೆ. ಇದು ಆನುಷಂಗಿಕವಾದರೂ ಮುಖ್ಯವಾಗಿ ಅವುಗಳಲ್ಲಿನ ನೀತಿಯನ್ನು ಬಳಸಿಕೊಳ್ಳಲು ಅಥವಾ ನೀತಿಪರ ವ್ಯಾಖ್ಯಾನಕ್ಕೆ ಗುರಿಪಡಿಸಲು ನಮ್ಮ ಶಿಕ್ಷಣಕ್ರಮ ತವಕಿಸಿದಂತೆ ತೋರುವುದು ಕಾಣುತ್ತೇವೆ.

ತತ್ವಪದಕಾರರ ಅಧ್ಯಯನಗಳು, ರಚನೆಗಳಲ್ಲಿನ ಧಾರ್ಮಿಕ, ಸಾಮಾಜಿಕ, ಚಾರಿತ್ರಿಕ ವಿವರಣೆಗಳು ಮತ್ತು ಅವು ಹೇಳುವ ಭಾವೈಕ್ಯತೆ, ಮೌಢ್ಯತೆ, ಸಾಮರಸ್ಯ, ಜಾತ್ಯತೀತತೆ ಮುಂತಾದ ನೀತಿಪರವಾದ ಅಂಶಗಳನ್ನು ಚರ್ಚಿಸುತ್ತವೆ. ಶ್ರೀಮತಿ ಪಿ.ಬಿ.ದೊಡ್ಡಮನಿ ಅವರ 'ಶಿಶುನಾಶ ಶರೀಫ್ ಸಾಹೇಬರ ಗೀತೆಗಳು : ಒಂದು ಸಾಂಸ್ಕೃತಿಕ ಅಧ್ಯಯನ' ಈ ಹಿನ್ನೆಲೆಯಲ್ಲಿ ಗಮನಿಸುವಂತದು.

ಕವಿಯ ಕಾವ್ಯದಿಂದ ಉಲ್ಲೇಖಗಳನ್ನು ತೆಗೆದುಕೊಂಡು ವಿವರಿಸುವ ಆ ಮೂಲಕ ನೀತಿಪರ ವ್ಯಾಖ್ಯೆಗೆ ನೆರವಾಗುವ ಪ್ರಯತ್ನಗಳು ನಡೆದಿವೆ. ಈ ನೀತಿಪರ ವ್ಯಾಖ್ಯೆಗಳು, ಕಾವ್ಯದ ಉಕ್ತಿಯ ಸಂದರ್ಭವನ್ನು, ಘಟನೆಯನ್ನು ಏಕಮುಖಿ ನೆಲೆಯಲ್ಲಿ ಚರ್ಚಿಸುತ್ತವೆ. ಅವುಗಳ ಬಹುಮುಖಿ ಆಯಾಮಗಳನ್ನು ಬಿಟ್ಟು ಕೊಡುತ್ತವೆ.

ಆದರೆ ನೀತಿಪರ ಧಾರ್ಮಿಕ ದೃಷ್ಟಿಕೋನ ಮಾತ್ರ ಬೇರೊಂದು ನೆಲೆಯನ್ನು ಪಡೆದುಕೊಳ್ಳುತ್ತದೆ. ಈ ಎಲ್ಲ ಅನುಭಾವಿಗಳ ಗುರಿ ಜಗತ್ತಿನ ದುಃಖದಿಂದ ಜೀವಿಗಳನ್ನು ಬಿಡುಗಡೆ ಮಾಡುವುದೇ ಆಗಿದೆ ಎಂದು ನಂಬುತ್ತವೆ. ಇದನ್ನು ಮೋಕ್ಷವೆಂದು ಪ್ರತಿಪಾದಿಸಿದ್ದನ್ನು ಭಾರತೀಯ ದರ್ಶನಗಳ ಮುಖಾಂತರ ಚಾರ್ವಾಕ ದರ್ಶನ, ಸಂಖ್ಯಾದರ್ಶನ, ಬೌದ್ಧದರ್ಶನ, ನ್ಯಾಯ ದರ್ಶನ, ವೈಶೇಷಿಕ ದರ್ಶನ, ಜೈನದರ್ಶನ, ಯೋಗದರ್ಶನ, ವೇದಾಂತ ದರ್ಶನ, ಅದ್ವೈತ ವಿಶಿಷ್ಟಾದ್ವೈತ ದರ್ಶನ, ಶಕ್ತಿವಿಶಿಷ್ಟಾದ್ವೈತ ದರ್ಶನಗಳ ಹಿನ್ನೆಲೆಯಲ್ಲಿ ಹಾಗೂ ಭಾರತೀಯ ಭಕ್ತಿ ಪರಂಪರೆಗಳ ಹಿನ್ನೆಲೆಯಲ್ಲಿಯೂ ಚರ್ಚಿಸುತ್ತವೆ. ಪಿ.ಎಂ.ಸಿದ್ದಯ್ಯ ಅವರ 'ನಿಜಗುಣರ' ಕುರಿತ ಅಧ್ಯಯನ ಮತ್ತು ಸಿ.ಎಸ್.ದ್ವಾರಕಾನಾಥ್ ಅವರ 'ಕೈವಾರ ನಾರಾಯಣಪ್ಪ' ಕುರಿತ ಅಧ್ಯಯನ ಈ ನಿಟ್ಟಿನಲ್ಲಿ ಗಮನಿಸುವಂತವು. ಧರ್ಮಸಹಿಷ್ಣುತೆ ಎಂಬ ಜೀವನನೀತಿಗೆ ಅನುಗುಣವಾಗಿ ಚರ್ಚಿಸುವ ಇವು, ಅವುಗಳ ದೋಷಗಳನ್ನು ಚರ್ಚಿಸುವ ಗೋಜಿಗೆ ಹೋಗುವುದಿಲ್ಲ. ಅವುಗಳ ಗುಣಗಣನೆಯೇ ಮುಖ್ಯವಾಗಿ ಗ್ರಹಿಸುತ್ತವೆ.

**ಕಾವ್ಯಾನುಭವಪರ ದೃಷ್ಟಿಕೋನ :** ವರ್ಣನಾಪ್ರಧಾನ ವಿಮರ್ಶೆಗಳು ಹಲವೊಮ್ಮೆ ಕಾವ್ಯದ ಆಯ್ದ ಭಾಗಗಳನ್ನು ವಿವರಣೆಗೆ ಗುರಿಪಡಿಸಿ ಆ ಮೂಲಕ ಕಾವ್ಯಾನುಭವ ಸ್ವರೂಪವನ್ನು ತಿಳಿಸಲು ಯತ್ನಿಸುತ್ತವೆ. ರಚನೆಗಳಲ್ಲಿನ ಕಾವ್ಯಾಂಶವನ್ನು ಹೊರತೆಗೆದು ಆ ಭಾಗದಲ್ಲಿ ಕವಿಯ ಪ್ರತಿಭೆಯ ಸಾಧನೆಯ ಮಹತ್ವವನ್ನು ಸ್ಪಷ್ಟಪಡಿಸುವ ಉದ್ದೇಶವನ್ನು ಹೊಂದಿರುತ್ತವೆ. ತತ್ವಪದ ಅಧ್ಯಯನಗಳ ಕೆಲವು ಅಧ್ಯಾಯಗಳ ಭಾಗದಲ್ಲಿ ಕಡ್ಡಾಯವೆಂಬಂತೆ ಸಾಹಿತ್ಯದ ವಿಶ್ಲೇಷಣೆಗಳು ನಡೆದಿವೆ.

ಮೀನಾಕ್ಷಿಬಾಳಿಯವರ 'ಕಡಕೋಳ ಮಡಿವಾಳಪ್ಪ ಮತ್ತು ಅವರ ಶಿಷ್ಯರು' ಎಂಬ ಈ ಅಧ್ಯಯನವು ಕಡಕೋಳರು ರಚಿಸಿದ ತತ್ವಪದಗಳ ಸಂಖ್ಯಾನಿರ್ಣಯವನ್ನು, ಅವರು ಬಳಸಿದ ಅಂಕಿತಗಳ ವೈವಿಧ್ಯತೆಗಳನ್ನು ಚರ್ಚಿಸುತ್ತದೆ. ಹಸ್ತಪ್ರತಿಗಳ ನೆರವಿನಿಂದ ಅವುಗಳ ಖಚಿತ ನಿರ್ಣಯಕ್ಕೆ ಬರುತ್ತಾರೆ. ಆದರೆ ಮೌಖಿಕವಾಗಿರುವ ಈ ಹಾಡುಗಳು ಸಹಜವಾಗಿ ಬೇರೆ ಬೇರೆ ಅಂಕಿತಗಳಲ್ಲಿ ಸೇರಿಹೋಗಿವೆ. ವಚನಗಳು, ಸ್ವರವಚನಗಳು, ಹಾಡುಗಳು ಎಂದೆಲ್ಲ ಕೆಲವು ಸಂಗ್ರಹಕಾರರು ಇವುಗಳನ್ನು ಕರೆದಿರುವುದೂ ಕಾಣುತ್ತೇವೆ. ಆಶಯದ ಹಿನ್ನೆಲೆಯಿಂದ ಭಿನ್ನಾಭಿಪ್ರಾಯವಿರುವ ಈ ಹಾಡುಗಳ ಸಂಖ್ಯೆಯ ಖಚಿತತೆಗೆ ಹಾತೊರೆಯುವುದು ವ್ಯರ್ಥ ಪ್ರಯತ್ನವಾಗಿದೆ. ಸಿಕ್ಕ ಹಸ್ತಪ್ರತಿಗಳು ಕೂಡ ಎಷ್ಟು ನಂಬಲರ್ಹ ಎಂಬ ಪ್ರಶ್ನೆ ಕೂಡ ಕಾಡುತ್ತದೆ.

ತತ್ವಪದಗಳ ರಸ, ಧ್ವನಿ, ಅಲಂಕಾರ, ಕಾವ್ಯತತ್ವ, ಛಂದಸ್ಸು, ಸಂಗೀತ, ಭಾಷೆ ಕುರಿತು ಚರ್ಚಿಸಲಾಗಿದೆ. ಸಾಲುಗಳ ನಿಯಮ, ನಿರ್ದಿಷ್ಟತೆ, ಇವೆಲ್ಲವನ್ನು ಶಾಸ್ತ್ರೀಯ ಛಂದಸ್ಸಿನ ನಿಯಮಗಳಿಗೆ ಒಗ್ಗಿಸುವ ಪ್ರಯತ್ನ ಮಾಡಲಾಗಿದೆ. ಆದರೂ ಕೆಲವು ರಚನೆಗಳು ಶಾಸ್ತ್ರೀಯ ಛಂದಸ್ಸಿನ ನಿಯಮಗಳನ್ನು ಮೀರುತ್ತವೆ ಎನ್ನುವುದನ್ನು ಈ ಅಧ್ಯಯನಗಳು ಮರೆಗೆ ಸರಿಸಿವೆ. ಮೋಡಿ, ಹಿಂದಿ, ಉರ್ದು, ಮರಾಠಿ,

ತೆಲುಗು, ಕನ್ನಡ ಮೊದಲಾದ ಬಹುಭಾಷೆಯನ್ನು ಬಳಸಿದ ತತ್ವಪದಕಾರರ ರಚನೆಗಳನ್ನು ಹೇಗೆ ಛಂದಸ್ಸಿಗೆ ಅನ್ವಯಿಸುವುದು? ಇದು ಸರಿಯಾದುದೇ ಎಂದು ಯೋಚಿಸಬೇಕಾಗಿದೆ.

**ಪ್ರಭಾವ ಮತ್ತು ಪರಂಪರೆ :** ಕವಿಯಲ್ಲಿ ನಿರಂತರವಾಗಿ ಮರುಜೀವ ಪಡೆಯುವ ಭೂತಕಾಲವನ್ನು ಹಾಗೂ ಅವನ ಮೂಲಕ ಮುಂದಿನ ಸೃಜನಶೀಲರಿಗೆ ರವಾನೆಯಾಗುವ ಭೂತ-ವರ್ತಮಾನಗಳನ್ನು ಪರಂಪರೆ ಎನ್ನಲಾಗುತ್ತಿದೆ. ಕವಿ ತನ್ನ ಕಾವ್ಯ ರಚನೆಯಲ್ಲಿ ಅನುಸರಿಸುವ ತಂತ್ರಗಳಲ್ಲಿ ಎಷ್ಟೋ ಸಂಗತಿಗಳು 'ಸಾಂಪ್ರದಾಯಿಕ' ಚೌಕಟ್ಟಿಗೆ ಸೇರ ತೊಡಗಿದವು. ಧಾರ್ಮಿಕ ನೀತಿ, ತತ್ವಗಳು, ಜೀವನ ವಿಧಾನ ಇವೆಲ್ಲ ಅಧ್ಯಯನಕಾರನಿಗೆ ಸಾಂಪ್ರದಾಯಿಕ ಸಂಗತಿಗಳಾಗಿವೆ. ಇದರಲ್ಲಿ ಕಾವ್ಯ ಪರಿಕರ, ನೀತಿ, ತತ್ವಗಳು, ಭಾಷಾವಿನ್ಯಾಸ ಇವೆಲ್ಲವೂ ಸೇರುತ್ತವೆ. ಇವುಗಳನ್ನು ಸಾಂಪ್ರದಾಯಿಕವೆಂಬಂತೆ ಕಡ್ಡಾಯವಾಗಿ ಅಧ್ಯಯನ ಮಾಡಲಾಗಿದೆ.

ತತ್ವಪದ ಪರಂಪರೆಯನ್ನು ಅದರ ಬೆಳವಣಿಗೆಯನ್ನು ವೀರಶೈವ, ವೈದಿಕ(ದಾಸರು), ಮುಸ್ಲಿಂ (ಸೂಫಿಗಳು) ಮುಂತಾದ ಅನ್ಯಮತದ ಪ್ರಭಾವಗಳ ಮೂಲಕ ಗುರುತಿಸುತ್ತಾರೆ. ಧಾರ್ಮಿಕ ಹಿನ್ನೆಲೆಯಲ್ಲಿ ಹೀಗೆ ಗುರುತಿಸುವಾಗ, ಅವರಲ್ಲಿನ ಸಮಾನ ಸಂಗತಿಗಳನ್ನು ವಿವರಿಸಲಾಗಿದೆ. ಮಹಿಳೆಯ ವಿಷಯದಲ್ಲಿ, ಕಾಯಕದ ವಿಷಯದಲ್ಲಿ ಕೆಳಜಾತಿಗಳ ಆಚರಣೆ ಸಂಸ್ಕೃತಿಗಳ ವಿಷಯದಲ್ಲಿ ಇವರ ನಡುವೆ ಪರಸ್ಪರ ಕೆಲವು ಭಿನ್ನತೆ, ವೈರುಧ್ಯಗಳಿವೆ. ಅಧ್ಯಯನಗಳು ಇವುಗಳನ್ನು ಗಮನಿಸುವುದಿಲ್ಲ. 'ಕೈವಾರ ನಾರಾಯಣಪ್ಪ ಕುರಿತ ಅಧ್ಯಯನ', ಕೌಜಲಗಿ ಸುಭಾಷ್ಚಂದ್ರ ಅವರ 'ಮೋಟ್ನಳ್ಳಿ ಹಸನ ಸಾಹೇಬನ' ಅಧ್ಯಯನ, ಪಿ.ಎಂ.ಸಿದ್ಧಯ್ಯ ಅವರ 'ನಿಜಗುಣರ ಕೃತಿಗಳ ದಾರ್ಶನಿಕ, ಸಾಹಿತ್ಯಕ ಮೌಲ್ಯ'ಗಳ ಕುರಿತ ಅಧ್ಯಯನ, ಎಸ್.ಶಾಂಭವಿ ಅವರ 'ಶ್ರೀ ಸರ್ಪಭೂಷಣರ ಕುರಿತ ಅಧ್ಯಯನ' ಈ ನಿಟ್ಟಿನಲ್ಲಿವೆ.

ಒಟ್ಟಾರೆ ಅಧ್ಯಯನಗಳಲ್ಲಿ ತತ್ವಪದಕಾರರನ್ನು ಸಮಕಾಲೀನ ಅನುಭಾವಿಗಳು ಅವರ ಹಿಂದಿನ ಪರಂಪರೆ ಮತ್ತು ಮಧ್ಯಕಾಲೀನ ಭಕ್ತಿಪಂಥಗಳು ಹಾಗೂ ದೇಸಿಜ್ಞಾನ ಪರಂಪರೆಗಳ ಹಿನ್ನೆಲೆಯಲ್ಲಿ ಚಾರಿತ್ರಿಕವಾಗಿ ನಿರೂಪಿಸುವುದು ಮುಖ್ಯ ಆಶಯವಾಗಿ ಕಂಡುಬರುತ್ತದೆ. ಹಾಗೆಯೇ ಸಾಹಿತ್ಯದಲ್ಲಿನ ಮೌಲ್ಯಗಳನ್ನು, ಧಾರ್ಮಿಕ ನೀತಿ ತತ್ವಗಳನ್ನು ವಿವರಿಸುವ ಉದ್ದೇಶಗಳೂ ಕಾಣಿಸುತ್ತವೆ. ತನ್ನ ಕಾಲದ ಯಾವುದೇ ಒತ್ತಡಗಳಿಗೆ ಮುಖಾಮುಖಿಯಾಗದೆ ವಿಶ್ಲೇಷಣೆ ಮಾಡಲಾಗಿದೆ. ಇದು ನಿರ್ದಿಷ್ಟ ಕಾಲವನ್ನು ತಿಳಿಯುವ ಅಧ್ಯಯನ ದೃಷ್ಟಿಕೋನವಾಗಿದೆ. ಗತವನ್ನು ಪುನರ್‌ರಚಿಸುವುದು ಈ ಅಧ್ಯಯನಗಳ ವಿಧಾನವಾಗಿದೆ. 'ಕವಿಗಳ ಕಾಲ-ದೇಶಗಳನ್ನು ಖಚಿತಪಡಿಸಲು ಹಾತೊರೆಯುವ ಈ ವಿಧಾನವು ಕೃತಿ ರಚನಾವಿನ್ಯಾಸವನ್ನು ಇಟ್ಟುಕೊಂಡು ಸೂಕ್ಷ್ಮ ಅನುಸಂಧಾನಕ್ಕೆ ಇಳಿಯುವುದು ಕಡಿಮೆ. ಒಂದೊಮ್ಮೆ ಇಳಿದರೂ ಅದಕ್ಕೆ ಆಸಕ್ತಿ ಇರುವುದು ಕೃತಿ ಕೊಡುವ ಅನುಭವದಲ್ಲಲ್ಲ, ಅದರಲ್ಲಿರುವ ನಿರ್ದಿಷ್ಟ ಸಂಗತಿಯು ಯಾವ ಚಾರಿತ್ರಿಕ ಕಾರಣದಿಂದ ಬಂದಿತು ಎನ್ನುವುದರಲ್ಲಿ''[೯] ಆದರೂ ಇದಕ್ಕೊಂದು

ಚಾರಿತ್ರಿಕ ಕಾರಣವಿದ್ದಂತೆ ತೋರುತ್ತದೆ. ನಮ್ಮ ಚರಿತ್ರೆಯನ್ನು ನಾವು ಕಟ್ಟಿಕೊಳ್ಳಬೇಕೆಂಬ ಅದಮ್ಯ ಉತ್ಸಾಹದಿಂದ ಕವಿಗಳ ಕಾಲ-ದೇಶಗಳು ಮುಖ್ಯವಾದವು. ನಂತರದಲ್ಲಿ ಇದು ಸಾಂಸ್ಕೃತಿಕ ಐಡೆಂಟಿಟಿಯ ಪ್ರಶ್ನೆಯಾಗಿ ಮುಖ್ಯವಾಗತೊಡಗಿದ್ದು ಕಾಣುತ್ತವೆ. ಆದರೂ ಅನುಭಾವಿಗಳನ್ನು ಹೀಗೆ ನೋಡುವುದು ಸರಿಯೇ ಎಂಬ ಪ್ರಶ್ನೆ ಕೂಡ ಇಲ್ಲಿ ಮುಖ್ಯವಾಗುತ್ತದೆ.

ಈ ಎಲ್ಲ ಅಂಶಗಳು ಕೃತಿಯ ಅನನ್ಯತೆಯನ್ನು ಗೌಣಗೊಳಿಸಿ, ಚರಿತ್ರೆಯನ್ನು ಮುಂದು ಮಾಡಿದವು. ರಾಜಕೀಯ, ಸಾಮಾಜಿಕ, ಆರ್ಥಿಕ ಸಂಗತಿಗಳನ್ನು ಸಂಕೀರ್ಣವಾದ ಆಯಾಮಗಳಿಂದ ಪರಿಶೀಲಿಸಲು ಹಿಂದೇಟು ಹಾಕಿದವು. ಇದರಿಂದ ವರ್ತಮಾನದಲ್ಲಿ ಕೃತಿಯ/ಹಾಡುಗಳ ಅನುಸಂಧಾನ ಮಾಡುವ ಹೊಸ ವಿಧಾನಗಳನ್ನು ಹುಡುಕುವುದು ಸಾಧ್ಯವಾಗುವುದಿಲ್ಲ.

### ೪.೫.೨. ಪ್ರಾದೇಶಿಕ ಅಧ್ಯಯನಗಳು

ಒಂದು ಪ್ರದೇಶದ ಸಾಂಸ್ಕೃತಿಕ ಚರಿತ್ರೆಯ ಅನಾವರಣ ಮಾಡುವ ಮತ್ತು ಆ ಪ್ರದೇಶದ ಸಾಹಿತ್ಯ ರಚನೆಕಾರರ ಅನನ್ಯತೆಯನ್ನು ಗುರುತಿಸುವ ಉದ್ದೇಶದಿಂದ ಪ್ರಾದೇಶಿಕ ಅಧ್ಯಯನಗಳು ನಡೆದಿವೆ. ತಮ್ಮತನವನ್ನು ಗುರುತಿಸಿಕೊಳ್ಳುವ ಭಾಗವಾಗಿ ನಡೆಯುವ ಈ ಅಧ್ಯಯನಗಳು ದೇಸಿಜ್ಞಾನ ಪರಂಪರೆಯನ್ನು ಹುಡುಕುವ ಮಾದರಿಯಂತೆ ತೋರುತ್ತವೆ. ದೇಸಿ ಎಂದರೆ ಒಂದು ಭಾಷೆ, ಪ್ರದೇಶ, ಆ ಪ್ರದೇಶದ ಸಮುದಾಯ, ಅದರ ವಿಶಿಷ್ಟ ಚಹರೆ, ಸಂಸ್ಕೃತಿಯನ್ನು ಗುರುತಿಸುವ ವಿವೇಕವೇ ಆಗಿದೆ. ಇದೇ ನಿಲುವಿನಲ್ಲಿ ಅಧ್ಯಯನಗಳು ಪ್ರಾದೇಶಿಕತೆಯ ಸಾಂಸ್ಕೃತಿಕ ಅಂಶಗಳನ್ನು ಶೋಧಿಸುತ್ತವೆ. ಇವುಗಳ ಮುಖ್ಯ ಉದ್ದೇಶವೂ ಇದೇ ಆಗಿದೆ.

ಪ್ರಸ್ತುತ ಪ್ರಾದೇಶಿಕ ನೆಲೆಯಲ್ಲಿ ಬಂದ 'ರಾಯಚೂರು ಜಿಲ್ಲೆಯ ತತ್ವಪದಕಾರರು' (ಸರ್ವಮಂಗಳ ಸಕ್ರಿ) ಮತ್ತು 'ಬೀದರ್ ಜಿಲ್ಲೆಯ ಅನುಭಾವಿಗಳು' (ಗುರುಲಿಂಗಪ್ಪ ಧಬಾಲೆ) ಈ ಅಧ್ಯಯನಗಳು ಮಾತ್ರ ಆ ಪ್ರದೇಶದ ಚಾರಿತ್ರಿಕ ಹಿನ್ನೆಲೆ, ತತ್ವಪದಕಾರರು ಮತ್ತು ಅವರ ಪರಂಪರೆ, ಅವರ ಸಾಹಿತ್ಯಕ ವಿವೇಚನೆ, ಭಕ್ತಿಯ ಹಾಡು, ಕಾವ್ಯರೂಪದ ಹಾಡುಗಳು, ಸ್ವರವಚನ, ಕೈವಲ್ಯ ಈ ಸಾಹಿತ್ಯಗಳ ಭಿನ್ನತೆ, ಅವುಗಳ ಲಕ್ಷಣ, ಗೇಯತೆ ಮುಂತಾದ ಅಂಶಗಳನ್ನು ಗುರುತಿಸುವಲ್ಲೇ ವಿರಮಿಸಿವೆ. ತತ್ವಪದಗಳಲ್ಲಿನ ದಾರ್ಶನಿಕ ಚಿಂತನೆ, ಅನುಭಾವದ ಸ್ವರೂಪ, ತತ್ವ ಮುಂತಾದವುಗಳ ಚರ್ಚೆ. ಆರೂಢ, ಅವಧೂತ, ಸೂಫಿ ಮುಂತಾದ ಪಂಥಗಳ ಪರಂಪರೆಯ ಜೊತೆಗೆ ತತ್ವಪದಕಾರರ ಸ್ಥಾನ ನಿರ್ದೇಶನವೂ ಮಾಡಲಾಗಿದೆ. ತತ್ವಪದಗಳ ಜಾನಪದೀಯ ಸಂಬಂಧಗಳನ್ನು, ಇತರೆ ರೂಪಗಳಿಗಿರುವ ಸಂಬಂಧಗಳನ್ನು ಚರ್ಚಿಸಲಾಗಿದೆಯೇ ಹೊರತು ಜನಸಮುದಾಯಗಳ ಬದುಕಿನ ಸಾಮಾಜಿಕ, ಸಾಂಸ್ಕೃತಿಕ, ಸಂಗತಿಗಳನ್ನು, ಆಚರಣಾತ್ಮಕ ನೆಲೆಯ ಮೂಲಕ ದೇಸಿ ಪ್ರಜ್ಞೆಯನ್ನು ಹುಡುಕುವ ಪ್ರಯತ್ನದಲ್ಲಿ ಈ ಅಧ್ಯಯನಗಳು ಸೋಲುತ್ತವೆ.

ಒಟ್ಟಿನಲ್ಲಿ ಪ್ರದೇಶದ ಅನನ್ಯತೆಯನ್ನು ಅದರ ಎಲ್ಲ ಸಾಂಸ್ಕೃತಿಕ ಆಯಾಮಗಳಿಂದ ಶೋಧಿಸುವಲ್ಲಿ ಈ ಪ್ರಾದೇಶಿಕ ಅಧ್ಯಯನಗಳು ಹಿಂದೆ ಸರಿದಿವೆ. ಆದರೆ ಪ್ರಾಚೀನ ಕಾಲದ ಪಂಪನ ಕಾವ್ಯದಲ್ಲಿ, ನಂತರದ ವಚನಕಾರರಲ್ಲಿ ಪ್ರಾದೇಶಿಕ ಅನನ್ಯತೆಯನ್ನು ಗುರುತಿಸುವ ಪ್ರಯತ್ನ ನಡೆದಿದೆ. ಆ ಮೂಲಕ ಕನ್ನಡತನವನ್ನು ಅದರ ಅನನ್ಯತೆಯನ್ನು ಕಟ್ಟುವ ಪ್ರಯತ್ನವೂ ಮಾಡಿದ್ದಾರೆ. ಆದರೆ ತತ್ವಪದಕಾರರು ತಮ್ಮ ರಚನೆಗಳಲ್ಲಿ ಈ ರೀತಿಯ ಪ್ರಾದೇಶಿಕ ಅನನ್ಯತೆಯನ್ನು ಗುರುತಿಸಿಕೊಳ್ಳುವ ಪ್ರಯತ್ನ ಮಾಡಿದರೆ? ಬಹುಭಾಷೆಯಲ್ಲಿ ಹಾಡಿದ ಅವರು ಕನ್ನಡಕ್ಕಿಂತ ಹೆಚ್ಚಾಗಿ ಕರ್ನಾಟಕತ್ವದ ಬಗ್ಗೆ ಮಾತನಾಡುತ್ತಾರೆ. ಈ ಸಂಗತಿಗಳನ್ನು ಪ್ರಾದೇಶಿಕ ಅಧ್ಯಯನಗಳು ಗಮನಿಸಬೇಕಾಗಿದೆ.

ತತ್ವಪದ ಸಾಹಿತ್ಯವನ್ನು ಕೇಂದ್ರವಾಗಿಟ್ಟುಕೊಂಡ ಅಧ್ಯಯನವೂ ನಡೆದಿದೆ. ತತ್ವಪದ ಮತ್ತು ಸ್ವರವಚನಗಳು ಒಂದೇ ಎನ್ನುವ ಚರ್ಚೆಗಳು ಇವೆ. ಆದರೆ ಈಶ್ವರಯ್ಯಮಠ ಅವರು ತಮ್ಮ 'ಸ್ವರವಚನ-ಸಾಹಿತ್ಯ ಅಧ್ಯಯನದಲ್ಲಿ 'ಸ್ವರವಚನ'ಗಳನ್ನು ಒಂದು ಪ್ರತ್ಯೇಕ ಸಾಹಿತ್ಯ ಪ್ರಕಾರವೆಂದು ನೋಡುತ್ತಾರೆ. ಸ್ವರವಚನಗಳಲ್ಲಿ ತತ್ವಪದಗಳು ಇವೆ. ಅವು ವೀರಶೈವ ತತ್ವಸಿದ್ಧಾಂತವನ್ನು ಹೊಂದಿದ ರಚನೆಗಳಾಗಿವೆ ಎನ್ನುತ್ತಾರೆ. ೧೨ನೆಯ ಶತಮಾನದಿಂದ ೧೭-೧೮ನೆಯ ಶತಮಾನದವರೆಗೆ ಬೆಳವಣಿಗೆಯಾದ ಇವುಗಳ ನಿಜ ಸ್ವರೂಪ ಅರಿಯುವುದು, 'ಏಕದಾರ್ಶನಿಕ ಪರಂಪರೆಯವೆಂದು' ಅಧ್ಯಯನ ಮಾಡುವುದು ಈ ನಿಬಂಧದ ಮುಖ್ಯ ಉದ್ದೇಶವೆಂದುಕೊಳ್ಳಲಾಗಿದೆ.[೪೬] ಈ ಹಿನ್ನೆಲೆಯಲ್ಲಿ ಸ್ವರವಚನಗಳ ಉಗಮ, ಸ್ವರೂಪ, ಪ್ರೇರಣೆ, ಧೋರಣೆ, ಚರಿತ್ರೆ, ದಾರ್ಶನಿಕತೆ, ಸಾಮಾಜಿಕತೆ, ಸಾಹಿತ್ಯ, ಛಂದಸ್ಸು, ಸಂಗೀತ ಇತ್ಯಾದಿ ಅಂಶಗಳು ಅಧ್ಯಯನದಲ್ಲಿ ಸಹಜವಾಗಿಯೇ ಚರ್ಚೆಗೆ ಒಳಪಟ್ಟಿವೆ.

ಸ್ವರವಚನದ ಒಡಲಲ್ಲಿ 'ಕೀರ್ತನೆ, ಭಜನೆ, ಕೈವಲ್ಯಪದ, ತತ್ವಪದ, ಭಕ್ತಿಯ ಹಾಡು' ಇವೆಲ್ಲವೂ ಇವೆ ಎನ್ನುತ್ತಾರೆ. ಮುಖ್ಯವಾಗಿ ಇಲ್ಲಿ ಶಿವಶರಣರ ಅಥವಾ ವೀರಶೈವದ ತಾತ್ವಿಕ ಚೌಕಟ್ಟನ್ನು, ತತ್ವಸಿದ್ಧಾಂತವನ್ನು ಹೊಂದಿರುವ ರಚನೆಗಳನ್ನು ಪ್ರತ್ಯೇಕಗೊಳಿಸಿ ಧಾರ್ಮಿಕ ಪರಿಭಾಷೆಯ ಕಣ್ಣಳತೆಯಲ್ಲಿ 'ಸ್ವರವಚನ'ಗಳೆಂದು ಅಧ್ಯಯನ ಮಾಡಲಾಗಿದೆ. ಅದಕ್ಕಾಗಿ ಅವರು 'ಗದ್ಯ-ಪದ್ಯಸಹಿತ'ವಾದ ಶಿವಶರಣರ ರಚನೆಗಳನ್ನು ವಚನಗಳೆಂದೂ ಯಾವುದೇ ಸಾಂಸ್ಥಿಕ ಧರ್ಮದ ಚೌಕಟ್ಟನ್ನು ಒಳಗೊಳ್ಳದ, ಆಚಾರ ವಿಚಾರಗಳಲ್ಲಿ ಭಿನ್ನವಾದ ಶರಣರ ಮತ್ತು ದಾಸರ ಹಾಡುಗಳನ್ನು ಮೇಲುರಚನೆಯಲ್ಲಿ ಹೋಲುವ ಇತರರ ಕೃತಿಗಳನ್ನು 'ತತ್ವಪದ'ಗಳೆಂದೂ ಕರೆದುಕೊಳ್ಳುತ್ತಾರೆ. ಅಲ್ಲದೇ 'ತಾತ್ವಿಕವಾಗಿ ವಚನಗಳ ಆಶಯವನ್ನು ಹೊಂದಿದ, ರಾಚನಿಕವಾಗಿ ಕೀರ್ತನೆ ಮತ್ತು ತತ್ವಪದಗಳನ್ನು ಹೋಲುವ ಶಿವಶರಣರ ಹಾಡಿನ ರಚನೆಗಳನ್ನು ಪ್ರತ್ಯೇಕವಾಗಿ 'ಸ್ವರವಚನ'ಗಳೆಂದು ಕರೆದುಕೊಳ್ಳುತ್ತಾರೆ. ಅಂದರೆ ವೀರಶೈವ ಅನುಭಾವಿಗಳು ರಚಿಸಿದ ತಾತ್ವಿಕ, ಬೋಧನಾತ್ಮಕ ಗೀತ-ಪದ-ತತ್ವಪದಗಳಿಗೆ 'ಸ್ವರವಚನ'ವೆಂದು ಸ್ಪಷ್ಟಪಡಿಸಿಕೊಳ್ಳುತ್ತಾರೆ.[೪೭] ಆದರೆ ಉದ್ಧರಣೆಗಳನ್ನು ಉಲ್ಲೇಖ ಮಾಡುವಾಗ 'ಸ್ವರವಚನ ಮತ್ತು

ತತ್ವಪದಗಳು’ ಒಂದೇ ಆಗಿ ಭಾವಿಸಿದ ವಿವರಣೆಗಳನ್ನು ಬಳಸಿಕೊಳ್ಳುತ್ತಾರೆ(ಪು.೭೧). ವಚನ ಮತ್ತು ಸ್ವರವಚನಗಳಿಗೆ ಪ್ರತ್ಯೇಕ ಕರ್ತೃತ್ವವಿರುವುದನ್ನು ಸಮರ್ಥಿಸುತ್ತಾರೆ. ಆದರೆ ವಚನಗಳೇ ಕಾಲಾಂತರದಲ್ಲಿ ಸ್ವರವಚನಗಳಾಗಿವೆ ಎಂಬುದನ್ನು ಈ ಅಧ್ಯಯನ ಒಪ್ಪುವುದಿಲ್ಲ. ಕೀರ್ತನೆ-ಸ್ವರವಚನಗಳು ಬೇರೆ ಬೇರೆಯೇ ಎನ್ನುವ ಇವರು ‘ರೂಪದ ದೃಷ್ಟಿಯಿಂದ ಹಾಡು ಅಥವಾ ಭಜನೆ ಪದ. ವಸ್ತುವಿನ ದೃಷ್ಟಿಯಿಂದ ತತ್ವಪದ ಅಥವಾ ಅನುಭಾವ ಪದ, ಆತ್ಯಂತಿಕ ಗುರಿಯ ದೃಷ್ಟಿಯಿಂದ ಕೈವಲ್ಯಪದ’ ಎಂದು ಬಗೆಬಗೆಯಾಗಿ ಕರೆಯಿಸಿಕೊಳ್ಳುವ ಶರಣರ ಈ ‘ಗೀತಸಾಹಿತ್ಯ’ ಪ್ರಕಾರವು ಸೂತ್ರರೂಪದಲ್ಲಿ ‘ಸ್ವರವಚನ’ ಎಂಬ ಪರಿಭಾಷೆಯೊಳಗೆ ಅಡಕಗೊಂಡಿದೆ’[೪೮] ಎಂದು ಇವೆಲ್ಲವನ್ನು ಒಂದೇ ಆಗಿ ಭಾವಿಸುತ್ತಾರೆ.

ವೀರಶೈವ ತತ್ವಸಿದ್ಧಾಂತ ಹೇಳುವ ರಚನೆಗಳು ಮಾತ್ರ ಸ್ವರವಚನ ಸಾಹಿತ್ಯವೆನ್ನುತ್ತಾರೆ. ಆದರೆ ವೀರಶೈವರಲ್ಲದವರು ಅವರ ತತ್ವಸಿದ್ಧಾಂತ, ಆಚಾರ-ವಿಚಾರಗಳಲ್ಲಿ ಭಿನ್ನರಾದವರೂ, ವೀರಶೈವರ ಪ್ರಭಾವಕ್ಕೆ ಒಳಗಾದ, ಅವರ ಪರಿಭಾಷೆ ಒಳಗೊಂಡ ಇತರೆ ದಲಿತ ಮುಸ್ಲಿಂ, ಕೆಳಜಾತಿ, ಹಿಂದುಳಿದ ವರ್ಗದವರ ರಚನೆಗಳು ತತ್ವಪದಗಳಾಗಿವೆ. ಅವು ‘ಸ್ವರವಚನಗಳಲ್ಲ’ ಎನ್ನುವ ತೀರ್ಮಾನಕ್ಕೆ ಬರುತ್ತಾರೆ.[೪೯] ಅಧ್ಯಯನಕಾರರು ವೀರಶೈವ ತತ್ವ ಸಿದ್ಧಾಂತದ ಚೌಕಟ್ಟಿನಲ್ಲಿ ನೋಡುವುದರಿಂದ ಸ್ವರವಚನ, ತತ್ವಪದ, ಕೀರ್ತನೆಗಳನ್ನು ಬೇರೆಯಾಗಿ ನೋಡಲು ಸಾಧ್ಯವಾಗಿದೆ. ಆದರೆ ಕತೃನಿಷ್ಠವಾಗಿ ರಚಿತವಾದ ಕಾಲ ದೇಶಗಳಿಗೆ, ಧಾರ್ಮಿಕ ಚೌಕಟ್ಟಿಗೆ ಬದ್ಧಗೊಳಿಸಿ ಅಧ್ಯಯನ ಮಾಡಲಾಗಿದೆ. ಅದರ ಆಚೆಗೆ ಈ ರಚನೆಗಳನ್ನು ನೋಡಲು ಸಾಧ್ಯವಾಗಿಲ್ಲ. ಸ್ವರವಚನಗಳ ಸ್ವರೂಪವನ್ನು ವಿವರಿಸಿಕೊಳ್ಳುವಾಗ ಕೆ.ವಿ.ನಾರಾಯಣ ಅವರು ಅಭಿಪ್ರಾಯಪಡುವಂತೆ ಅವುಗಳ ನಿಜಪಾಠಗಳ ಬಗ್ಗೆ ಒತ್ತು ನೀಡಿಲ್ಲ (ಮುನ್ನುಡಿ). ಯಾಕೆಂದರೆ ಮೌಖಿಕವಾಗಿರುವ ಈ ರಚನೆಗಳು ಅಂಕಿತ ಬದಲುಗೊಳ್ಳುವ ಮೂಲಕ ಅನೇಕರ ಹೆಸರಿನಲ್ಲಿ ಸೇರಿಹೋಗಿವೆ. ಕಡಕೋಳ, ರಾಮಪುರದ ಬಕ್ಕಪ್ಪ, ಕೂಡಲೂರು ಇವರ ರಚನೆಗಳನ್ನು ಅಧ್ಯಯನದಲ್ಲಿ ಬಳಸಿಕೊಂಡಿದ್ದಾರೆ. ಕಡಕೋಳರ ರಚನೆಗಳು ಧಾರ್ಮಿಕ ಪರಿಭಾಷೆಯನ್ನು ಮೀರಿ ನಿಲ್ಲುತ್ತವೆ. ಕೆಲವು ರಚನೆಗಳ ಮೂಲದಿಂದ ಇವರನ್ನು ವೀರಶೈವರೆನ್ನಬಹುದು. ಹೀಗೆ ಕರೆದರೆ ಸರಳೀಕರಿಸಿದಂತೆ ಆಗುತ್ತದೆ. ಇವರು ಬೆಳೆದ ಹಿನ್ನೆಲೆ, ಇವರ ರಚನೆಗಳಲ್ಲಿನ ವೈಚಾರಿಕ ಮನೋಭಾವ, ಬಹುಮುಖಿ ವ್ಯಕ್ತಿತ್ವ, ಮಾನವೀಯ ಪ್ರಜ್ಞೆ, ಈಗಾಗಲೇ ಹೇಳಿದಂತೆ ಧಾರ್ಮಿಕ ಪರಿಭಾಷೆಯ ಚೌಕಟ್ಟನ್ನು ಮೀರಿವೆ. ಇಂಥ ಅನುಭಾವಿಗಳ ಅಧ್ಯಯನದಲ್ಲಿ ಎದುರಿಸಬೇಕಾದ ಸಮಸ್ಯೆಗಳಿವೆ. ‘ಧಾರ್ಮಿಕ ಮೂಲಭೂತವಾದವು ಮನುಷ್ಯಲೋಕದ ಅಂತಃಕರಣದ ಮೇಲೆ ಹಲ್ಲೆ ನಡೆಸುತ್ತಿರುವ ಸಂದರ್ಭದಲ್ಲಿ ಧರ್ಮ, ಧಾರ್ಮಿಕತೆ, ಆಧ್ಯಾತ್ಮಿಕತೆ ಮುಂತಾದ ಪರಿಭಾಷೆಯೇ ಅನುಮಾನ ಹುಟ್ಟಿಸುತ್ತದೆ. ಆದ್ದರಿಂದ ಖಚಿತ ಗ್ರಹಿಕೆ ಮತ್ತು ನಿಚ್ಚಳ ನಿಲುವುಗಳ ಬಿತ್ತಿಯಿಲ್ಲದೆ ಹೋದರೆ ಅರ್ಥರಹಿತ

ಉದ್ಘೋಷಗಳು ವಿಜೃಂಭಿಸುವ ಅಪಾಯವೇ ಹೆಚ್ಚು. ಇದು ಧಾರ್ಮಿಕ ಮೂಲಭೂತವಾದೀ ಪರಿಭಾಷೆಗೂ ಅನ್ವಯಿಸುತ್ತದೆ. ಒಕ್ಕಣ್ಣ ನೋಟದ ಇಕ್ಕಟ್ಟಿನಲ್ಲಿ ಚಾರಿತ್ರಿಕ ಸಂದರ್ಭದ ಸತ್ಯಾನ್ವೇಷಣೆಯು ಸೆರೆ ಸಿಕ್ಕಿ ನರಳದಂತೆ ನೋಡಿಕೊಳ್ಳುವ ಜವಾಬ್ದಾರಿಯನ್ನು'[೫೦] ಅಧ್ಯಯನಗಳು ಹೊರಬೇಕಾಗಿದೆ.

**೪.೫.೩. ಜಾತಿ/ಸಮುದಾಯ ಅಧ್ಯಯನಗಳು**

ಸಂತರನ್ನು ಕುರಿತ ಈ ನೆಲೆಯ ಅಧ್ಯಯನಗಳು ಇತ್ತೀಚೆಗೆ ನಡೆಯುತ್ತಿವೆ. ಪ್ರಾದೇಶಿಕವಾಗಿ ದಲಿತರ ಆಚಾರ, ವಿಚಾರ, ಸಂಸ್ಕೃತಿ, ಸಂಪ್ರದಾಯಗಳನ್ನು, ಲೌಕಿಕ ಮತ್ತು ಅಲೌಕಿಕಗಳೆರಡನ್ನು ಏಕಕಾಲಕ್ಕೆ ಸಾಧಿಸಿರುವ ದಲಿತ ತತ್ವಪದಕಾರರ ಜೀವನ, ಸಾಧನೆಗಳನ್ನು ಪರಿಶೀಲಿಸಲಾಗುತ್ತಿದೆ. ಸಮಕಾಲೀನ ಸಮಾಜಕ್ಕೆ ಸ್ಪಂದಿಸಿದ ರೀತಿ-ನೀತಿಗಳನ್ನು ವಾಸ್ತವ ನೆಲೆಯಲ್ಲಿ ನಿಕಷಕ್ಕೆ ಒಡ್ಡುವ, ಆ ಮೂಲಕ ಅನನ್ಯತೆಯನ್ನು, ತಮ್ಮ ಅಸ್ಮಿತೆಯ ಚರಿತ್ರೆಯನ್ನು ಕಟ್ಟಿಕೊಳ್ಳುವ ಮುಖ್ಯ ಗುರಿಯಿರಿಸಿ ಕೊಳ್ಳಲಾಗಿದೆ.

ಜಿಲ್ಲೆಗೆ ಸೀಮಿತಗೊಳಿಸಿದ ಈ ಅಧ್ಯಯನಗಳಲ್ಲಿ ತತ್ವಪದಕಾರರ ಪರಂಪರೆ, ಅದರಲ್ಲಿ ದಲಿತ ತತ್ವಪದಕಾರರ ಸ್ಥಾನ, ಜೀವನ ಪರಿಚಯ, ಸಾಹಿತ್ಯಕ ಪರಂಪರೆ, ರಚನೆಗಳಲ್ಲಿ ಕಾಣುವ ಭಾವ, ಸಾಹಿತ್ಯಕ ವ್ಯತ್ಯಾಸಗಳು, ಪರಸ್ಪರರು ಬಳಸಿಕೊಂಡ ರೂಪಕಗಳ ಮೂಲಕ ಸಮಾನ ಅಂಶಗಳನ್ನು ಗುರುತಿಸಲಾಗಿದೆ. ಗುರು-ನೀತಿಬೋಧೆ, ಲಿಂಗ, ಭಾಷೆ, ಹೆಣ್ಣಿನ ಬಗೆಗಿನ ನಿಲುವು, ಕಾಯಕ, ಸಮಾಜನಿಷ್ಠೆ, ಅಂತರಂಗದ ಶುದ್ಧತೆ ಈ ಮುಂತಾದ ಅಂಶಗಳ ಅರಿಯುವುದೇ ಆಗಿದೆ.

ಈ ಹಿನ್ನೆಲೆಯಲ್ಲಿ 'ಗುಲಬರ್ಗಾ ಮತ್ತು ಬೀದರ ಜಿಲ್ಲೆಯ ದಲಿತ ತತ್ವಪದಕಾರರ' ಕುರಿತ ಪ್ರತ್ಯೇಕವಾದ ಅಧ್ಯಯನ ಮಾಡಲಾಗಿದೆ. ಸಾಂಸ್ಕೃತಿಕ ಅಧ್ಯಯನವೆಂದು ಹೇಳಲಾಗಿದ್ದರೂ ಅನೇಕ ರಾಜಕೀಯ ಸ್ಥಿತ್ಯಂತರಗಳಿಗೆ ಒಳಗಾದ ಈ ಪ್ರದೇಶಗಳಲ್ಲಿ ಆ ಸಂದರ್ಭದಲ್ಲಿ ದಲಿತರು ಯಾವ ರೀತಿಯಲ್ಲಿ ತಮ್ಮ ಅಸ್ತಿತ್ವಕ್ಕಾಗಿ ಹೋರಾಡಿದರು? ಬಸವಣ್ಣನ ಕಾಲದ ಚಾರಿತ್ರಿಕತೆಯಲ್ಲಿ ಇಲ್ಲಿನ ದಲಿತರ ಪಾತ್ರ, ನಂತರದ ಬದಲಾದ ರಾಜಕೀಯ ಕಾಲದಲ್ಲಿ ಜನಸಮುದಾಯಗಳು ಬದುಕಿನ ಅಸ್ತಿತ್ವಕ್ಕೆ ಹೋರಾಡಿದ ಚಾರಿತ್ರಿಕ, ಸಾಂಸ್ಕೃತಿಕ ವಿವರಗಳನ್ನು ಈ ಅಧ್ಯಯನಗಳು ಮರೆಗೆ ಸರಿಸಿವೆ. ಸರ್ವಧರ್ಮ ಸಮನ್ವಯವಿರುವ ಪ್ರದೇಶದಲ್ಲಿ ಯಾಕಾಗಿ ಇಂಥ ಬಿಕ್ಕಟ್ಟುಗಳು ಸೃಷ್ಟಿಯಾದವು? ವಾಸ್ತವಾದಿ ನೆಲೆಯಲ್ಲಿ ವಿವರಿಸುವ ಈ ಅಧ್ಯಯನಗಳು ಮೇಲ್ವರ್ಗದ ಜನತೆ ಈ ಹೊತ್ತು ದಲಿತರು ಅಥವಾ ಇತರೆ ಕೆಳ ಸಮುದಾಯಗಳು ಹಾಡುತ್ತಿರುವ ತತ್ವಪದಗಳನ್ನು ಹೇಗೆ ಸ್ವೀಕರಿಸುತ್ತದೆ? ಇದಕ್ಕೆ ದಲಿತರ ಪ್ರತಿಕ್ರಿಯೆ ಏನು? ಇವನ್ನೆಲ್ಲ ಚರ್ಚಿಸುವುದಿಲ್ಲ.

ಈ ಅಧ್ಯಯನಗಳು ತತ್ವಪದಕಾರರನ್ನು ಹುಟ್ಟಿನ ಹಿನ್ನೆಲೆಯಿಂದ ತಮ್ಮ ಸಾಂಸ್ಕೃತಿಕ ನಾಯಕರಾಗಿ ಒಂದು ಜಾತಿಗೆ ಸೀಮಿತಗೊಳಿಸಿಕೊಳ್ಳುತ್ತವೆ. ಆದರೆ ಅವರ ರಚನೆಗಳನ್ನು ಮಾತ್ರ ದಲಿತ, ವೀರಶೈವ

ಸಾಹಿತ್ಯವೆಂದು ಒಡೆದು ಸೀಮಿತಗೊಳಿಸಿ ನೋಡುವುದು ಕಷ್ಟವಾಗುತ್ತದೆ. ಜಾತ್ಯತೀತ ನೆಲೆಯ ಅವರ ರಚನೆಗಳು ಈ ತರದ ಅಧ್ಯಯನಗಳಿಗೆ ಸವಾಲಾಗುತ್ತವೆ. ಜಾತಿ ಮತದ ಹಂಗನ್ನು ಹರಿದು ಮುಕ್ತವಾದ ವಾತಾವರಣದಲ್ಲಿ ಬದುಕಲು ಹವಣಿಸಿದ ಇವರನ್ನು ಜಾತಿಯ ಬಿಗಿಬಂಧದಲ್ಲಿ ಬಲವಂತವಾಗಿ ಕಟ್ಟಿಹಾಕಲಾಗುತ್ತಿದೆ. ಸಾಂಸ್ಕೃತಿಕ ಐಡೆಂಟಿಡಿಯ ಭಾಗವಾಗಿ ನಡೆಯುವ ಈ ಅಧ್ಯಯನಗಳು ಅದನ್ನು ಉಳಿಸಿಕೊಳ್ಳುವ ಇಕ್ಕಟ್ಟಿಗೆ ಒಳಗಾಗಿ ಇಂತಹ ಸಂಗತಿಗಳನ್ನು ವಿವರಿಸುವಲ್ಲಿ ವಿಮರ್ಶಾತ್ಮಕ ದೃಷ್ಟಿಯನ್ನು ಕಳೆದುಕೊಂಡಿವೆ.

**೪.೫.೪. ತೌಲನಿಕ ಅಧ್ಯಯನ**

ತತ್ವಪದಕಾರರನ್ನು ಕುರಿತ ತೌಲನಿಕ ಅಧ್ಯಯನಗಳು ಅಷ್ಟೇನು ನಡೆದಿಲ್ಲ. ಆರ್.ಪಿ.ಹೆಗಡೆ ಅವರ 'ಶಿಶುನಾಳ ಶರೀಫ್ ಮತ್ತು ಸಂತ ಕಬೀರ್ : ತೌಲನಿಕ ಅಧ್ಯಯನ' ಈ ಪ್ರಬಂಧವು ಅನ್ಯಭಾಷಾ ಕವಿ ಕೃತಿಗಳೊಡನೆ ಹೋಲಿಸಿ ಮಾಡಿದ ತೌಲನಿಕ ಅಧ್ಯಯನವಾಗಿದೆ. ಮೀನಾಕ್ಷಿಬಾಳಿಯವರು 'ಕಡಕೋಳ ಮಡಿವಾಳಪ್ಪ ಮತ್ತು ಶಿಶುನಾಳ ಶರೀಫ್'ರನ್ನು ತೌಲನಿಕವಾಗಿ ವಿಶ್ಲೇಷಿಸಿದ ಲೇಖನವನ್ನು ಹೊರತುಪಡಿಸಿ, ಮತ್ಯಾವ ತತ್ವಪದಕಾರರ ತೌಲನಿಕ ಅಧ್ಯಯನಗಳು ನಡದೇ ಇಲ್ಲ.

ಸಾಹಿತ್ಯ ಅಧ್ಯಯನವು ಒಂದು ಭಾಷೆ, ಸಾಹಿತ್ಯ ಪರಂಪರೆಗೆ ಮಾತ್ರ ಸೀಮಿತವಾಗದೇ ಇನ್ನೊಂದು ಭಾಷಾ ಸಾಹಿತ್ಯ ಪರಂಪರೆಯ ಕಡೆಗೂ ಹೋಗುವುದಕ್ಕೆ ಹಲವು ಸಾಂಸ್ಕೃತಿಕ ಕಾರಣಗಳಿರುತ್ತವೆ. ಬಹುಶಃ ಇದಕ್ಕೆ ಮೂರು ಕಾರಣಗಳನ್ನು ವಿದ್ವಾಂಸರು ಗುರುತಿಸಿರುವುದನ್ನು ಕಾಣಬಹುದು.

ಒಂದು : ಮುಖ್ಯವಾಗಿ ಪ್ರಭಾವಕ್ಕೆ ಒಳಗಾಗಿರುವುದು, ರಾಜಕೀಯವಾಗಿ ಸಾಂಸ್ಕೃತಿಕವಾಗಿ ನಡೆದ ಕೊಡು-ಕೊಳೆಗಳು. ಅನುಭಾವಿಗಳು ಹೆಚ್ಚಾಗಿ ಚಾರಣ ಕವಿಗಳು. ಒಂದು ಪ್ರದೇಶದಿಂದ ಮತ್ತೊಂದು ಪ್ರದೇಶಕ್ಕೆ ಬಂದು ನೆಲಸಿ ಅವರ ತತ್ವಜಿಜ್ಞಾಸೆಯನ್ನು ಮಾಡಿರುವುದು ನಮ್ಮ ಚರಿತ್ರೆಯಲ್ಲಿದೆ. ಈ ಪ್ರಭಾವದ ಸ್ವರೂಪ, ಸಂಬಂಧ, ವಾಗ್ವಾದಗಳನ್ನು ನಿರಾಕರಿಸಲು ಆಗದು.

ಎರಡು : ಬೇರೆ ಬೇರೆ ಭಾಷಾ ಸಾಹಿತ್ಯ ಪರಂಪರೆಗಳು ತಮಗೆ ತಾವೇ ಸ್ವತಂತ್ರವಾಗಿ ಬೆಳೆಯುತ್ತಿದ್ದರೂ ಒಂದು ಇನ್ನೊಂದರೊಡನೆ ಕನಿಷ್ಟ ಸಂಪರ್ಕ ಹೊಂದಿದ್ದರೂ ಆ ಭಾಷಾ ಸಾಹಿತ್ಯ ಪರಂಪರೆಗಳ ಸಾಂಸ್ಕೃತಿಕ ಸಮಾನ ಅಂಶಗಳನ್ನು ಗುರುತಿಸಲು.

ಮೂರು : ಒಂದು ಭಾಷಾ ಕ್ಷೇತ್ರದ ಸೀಮಿತ ವಲಯದಾಚೆಗೆ ಹೋಗಿ ಭೌಗೋಳಿಕವಾಗಿ, ಸಾಂಸ್ಕೃತಿಕವಾಗಿ, ಸಾಮಾಜಿಕವಾಗಿ, ಜನಾಂಗಿಕವಾಗಿ ಮತ್ತು ಭಾಷಿಕವಾಗಿ ಕೂಡ ಭಿನ್ನ ಸಾಹಿತ್ಯದ ತೌಲನಿಕ ಅಧ್ಯಯನ ಸಾಧ್ಯವಾಗುವುದರಿಂದ ಅನೇಕ ಹೊಸ ಸಂಗತಿಗಳು ಬೆಳಕಿಗೆ ಬರಲು ಸಾಧ್ಯವಿದೆ ಎನ್ನುವ ಉದ್ದೇಶಗಳೂ ಈ ಅಧ್ಯಯನಗಳ ಹಿಂದಿದೆ.

ಈ ಹಿನ್ನೆಲೆಯ ಸಂಪೂರ್ಣ ಆಶಯಗಳನ್ನು ಒಳಗೊಳ್ಳದಿದ್ದರೂ, ಕೆಲವೊಂದು ಸಂಗತಿಗಳ ಅರಿಯುವ ಉದ್ದೇಶದಿಂದ ಆರ್.ಪಿ.ಹೆಗಡೆಯವರ 'ಶರೀಫ್ ಮತ್ತು ಸಂತ ಕಬೀರ' ಕುರಿತ ತೌಲನಿಕ ಅಧ್ಯಯನವು ನಡೆದಿದೆ. ಸಂತರು ವಿವಿಧ ಕಾಲಘಟ್ಟಗಳಲ್ಲಿ, ಪ್ರದೇಶಗಳಲ್ಲಿ, ಪರಿಸರದಲ್ಲಿ ಬದುಕಿದ ಅವರ ಜೀವನ, ಕಾವ್ಯ, ಧಾರ್ಮಿಕ ಪರಿಸರ, ಅದರ ಸೃಷ್ಟಿಗೆ ಕಾರಣವಾದ ಐತಿಹಾಸಿಕ ಘಟನೆ, ಮನೋಧರ್ಮ, ತತ್ವವಿಚಾರಗಳು, ಕಾವ್ಯಮಾರ್ಗದ ತತ್ವಗಳು, ಪ್ರಭಾವ, ಪ್ರೇರಣೆ, ಭಾಷೆ-ಶೈಲಿ ಇವುಗಳ ಗ್ರಹಿಕೆಯ ಅಭಿವ್ಯಕ್ತಿಯಲ್ಲಿ ವಿಭಿನ್ನತೆ ಇರುತ್ತದೆ. ಸಮಾನ ಗ್ರಹಿಕೆಗಳು ಇರುತ್ತವೆ. ಆದರೆ ಪ್ರಸ್ತುತ ಅಧ್ಯಯನವು ಇವುಗಳ ಪರಿಣಾಮ, ಬೆಲೆ ಕಟ್ಟುವಿಕೆ ಮುಂತಾದ ಅಂಶಗಳನ್ನು 'ಧರ್ಮಸಾಧನೆಯ ಪ್ರಭಾವ'ದ ಮೂಲಕ ಅಧ್ಯಯನ ಮಾಡಲಾಗಿದೆ. ಇದೊಂದು ಸಾಮರಸ್ಯದ ಹಾದಿಯಲ್ಲಿ ನಡೆದ ಅಧ್ಯಯನವಾಗಿದೆ. ಸಮಕಾಲೀನ ಸಂದರ್ಭದಲ್ಲಿ ಆ ತತ್ವಗಳ ಪ್ರಸ್ತುತತೆ ಕುರಿತಂತೆಯೂ ಚರ್ಚಿಸಲಾಗಿದೆ. ಆ ಇಬ್ಬರು ಸಂತರ ಚಿಂತನೆಗಳ ಉದ್ದೇಶ, ಗುರಿ ಒಂದೇ ಎಂಬಂತೆ ಗ್ರಹಿಸಲಾಗಿದೆ. ಆದರೆ ಧರ್ಮ ಸಾಧನೆಯ ಆಚೆಗಿನ ಸಾಮರಸ್ಯಕ್ಕೆ ಕಾರಣವಾದ ಅದರ ಹಿಂದಿನ ರಾಜಕೀಯ, ಸಾಂಸ್ಕೃತಿಕ ಅಂಶಗಳನ್ನು, ಇಕ್ಕಟ್ಟು, ಸ್ಥಿತ್ಯಂತರಗಳನ್ನು ಪರಿಶೀಲಿಸಿಲ್ಲ. ಯಾಕೆಂದರೆ ೪೦೦ ವರ್ಷಗಳ ಕಾಲದ ಅಂತರವಿರುವ ಶರೀಫ ಮತ್ತು ಕಬೀರರು ಮೂಲತಃ ಮುಸ್ಲಿಂ ಸಂತರು. ಆದರೆ ಇಬ್ಬರೂ ಅದನ್ನು (ಧರ್ಮವನ್ನು) ಮೀರಿದ ನೆಲೆಯಲ್ಲಿ ಬದುಕಿದವರು.

೪೦೦ ವರ್ಷಗಳಿಗೂ ಹೆಚ್ಚಿನ ಅಂತರವಿರುವ ಈ ಸಂತರ ತತ್ವ ಚಿಂತನೆಗಳು ಯಾಕೆ ಒಂದೇ ಆಗಿ ಕಾಣಿಸುತ್ತವೆ? ಬೇರೆ ಬೇರೆ ಪ್ರದೇಶ, ಕಾಲದಲ್ಲಿ ಬದುಕಿದ ಈ ಸಂತರು ಕಾಲ-ದೇಶಾತೀತ ಚಿಂತನೆಗಳನ್ನು ರೂಪಿಸಿಕೊಳ್ಳಲು ಕಾರಣವಾದ ಪರಿಸರ, ಸಾಂಸ್ಕೃತಿಕ ಸಂದರ್ಭ ಎಂಥದ್ದು? ಇಂದಿನ ಸಂಕ್ರಮಣದ ಸ್ಥಿತಿಯಲ್ಲಿ ಇವರ ಸಾಮರಸ್ಯವಾದಿ ನಿಲುವು ನೆಮ್ಮದಿಯ ನಾಳೆಗಳನ್ನು ತರಬಹುದೇ? ಆದರೆ ಮಹಿಳೆಯರ ಬಗ್ಗೆ ಇವರು ಹೊಂದಿದ ನಿಲುವು ಈ ನೆಲೆಯಲ್ಲಿ ಯೋಚಿಸಲು ಬಿಡುತ್ತದೆಯೇ? ಈ ದೃಷ್ಟಿಯಿಂದ ಇವರ ಬಗ್ಗೆ ಗುಮಾನಿಯಂತೂ ಇದೆ. ಇಂತಹ ಸಂಗತಿಗಳು ಅಧ್ಯಯನದ ದೃಷ್ಟಿಯಿಂದ ಮಹತ್ವವಾದವು.

ರಾಜಕೀಯವಾಗಿ ಯೋಚಿಸುವುದಾದರೆ ೧೪೪೮ರಲ್ಲಿ ದಿಲ್ಲಿಯ ಶಾಸನ ಸೂತ್ರ ಹಿಡಿದ ತೈಮೂರ್ ಬೇಕಾದಂತೆ ಅಧಿಕಾರ ನಡೆಸಿದ. ತುಘಲಕ್ ಹಾಗೂ ಸೈಯದ್ ಲೂಧಿವಂಶದ ಮುಸ್ಲಿಂ ದೊರೆಗಳು ನಡೆಸಿದ ಆಕ್ರಮಣಗಳು, ಈ ನಿರಂತರ ಯುದ್ಧದಿಂದುಂಟಾದ ಸಾಮಾಜಿಕ ಅಶಾಂತತೆ ಇವೆಲ್ಲ ಅಂದಿನ ಜನಸಮುದಾಯಗಳ ಮೇಲೆ ತೀವ್ರವಾದ ಪರಿಣಾಮ ಬೀರಿವೆ. ಹಾಗೆಯೇ ೧೯ನೆಯ ಶತಮಾನದಲ್ಲಿ ಕರ್ನಾಟಕದಲ್ಲಿ ಹಿಂದೂಗಳ ಆಡಳಿತ, ಮುಸ್ಲಿಂ ಆಡಳಿತ ಇವರ ನಡುವೆ ನಡೆದ ಯುದ್ಧಗಳು ಇಂಗ್ಲಿಷರ ಒಡೆದು ಆಳುವ ನೀತಿ ಅವರ ಕುಟಿಲ ರಾಜಕಾರಣದಿಂದ ಹರಿದು ಹಂಚಿ ಹೋಗಿದ್ದ ಭಾರತದ ಈ

ಪ್ರಾಂತ ವಿಚಿತ್ರತರ ಸಂಕಟಗಳನ್ನು ಅನುಭವಿಸಿದೆ. ಇದರ ಬಿಸಿ ಶರೀಫ್ ಮತ್ತು ಕಬೀರರ ಜೀವನಕ್ಕೂ, ಬದುಕಿಗೂ ತಟ್ಟಿದೆ. ಇದನ್ನು ಅವರ ರಚನೆಗಳಲ್ಲಿ ಕಾಣಬಹುದು. ಸಂತರ ಕುರಿತು ಈ ಹಿನ್ನೆಲೆಯಲ್ಲಿ ಅರಿಯುವ ಪ್ರಯತ್ನವನ್ನು ಅಧ್ಯಯನಗಳು ಮಾಡುವುದಿಲ್ಲ. ಯೋಗ, ಭಕ್ತಿ, ಜ್ಞಾನಗಳ ದೃಷ್ಟಿಯಿಂದ ಈ ಸಂತರನ್ನು ಸಮನ್ವಯವಾದಿಗಳೆಂದು ಹೇಳುವುದು ಸುಲಭ. ಇದಕ್ಕೆ ಕಾರಣವಾದ ಸಾಂಸ್ಕೃತಿಕ ಅಂಶಗಳು ಬೇರೆಯೇ ಆಗಿವೆ. ಅವು ವೈರುಧ್ಯಗಳನ್ನು ಸೃಷ್ಟಿಸಿವೆ. ಸಂದಿಗ್ಧ ಕಾಲದಲ್ಲಿ ಬಾಳಿ ಬದುಕಿದ ಈ ಸಂತರು ತಮ್ಮ ಎಲ್ಲ ತಾತ್ವಿಕ ಬದ್ಧತೆಗೆ ಅನೇಕ ಧರ್ಮತತ್ವಗಳನ್ನು ಅರಗಿಸಿಕೊಳ್ಳುವುದು ಮುಖ್ಯವಾಗಿತ್ತು ಎಂಬುದನ್ನು ಅಧ್ಯಯನಗಳು ಮರೆಯುತ್ತವೆ. ಸಂತರು ಬೌದ್ಧ, ಸಿದ್ಧ, ನಾಥ, ಇಸ್ಲಾಂ, ಸೂಫಿ, ಶಾಕ್ತ, ವಾರಕರಿ, ವೈದಿಕ ಸಂಸ್ಕೃತಿಗೆ ಮುಖಾಮುಖಿಯಾಗಿ ಜನ ಸಮುದಾಯಗಳಲ್ಲಿ ಸಾಮರಸ್ಯ ನೆಮ್ಮದಿ ತರುವುದು ಅವರ ಧ್ಯೇಯವಾಗಿತ್ತು. ಇದಕ್ಕೆ ಅನೇಕ ರಾಜಕೀಯ ಕಾರಣಗಳೂ ಇವೆ. ಈ ಮೂಲಕ ಕಂಡುಕೊಳ್ಳುವ ಅಧ್ಯಯನದ ಫಲಿತಗಳು ಬೇರೆ. ಧಾರ್ಮಿಕ ಪರಿಭಾಷೆಯಿಂದ/ಧರ್ಮಸಾಧನೆಯ ಪ್ರಭಾವಗಳ ಮೂಲಕ ಸಾಮರಸ್ಯವಾದಿ ನಿಲುವಿನಿಂದ ಪಡೆಯುವ ಅಧ್ಯಯನದ ಫಲಿತಗಳು ಬೇರೆ. ಈ ಹಿನ್ನೆಲೆಯಲ್ಲಿನ ಅಧ್ಯಯನಗಳು ಮುಖ್ಯವಾದವು.

ಒಟ್ಟಾರೆ ೭೦ರ ದಶಕದಿಂದ ತತ್ವಪದಕಾರರ ಕುರಿತ ಅಧ್ಯಯನಗಳು ಶುರುವಾಗಿವೆ. ಶೈಕ್ಷಣಿಕ ಅವಶ್ಯಕತೆಗಾಗಿಯೇ ಬಹುತೇಕ ಅಧ್ಯಯನಗಳು ನಡೆದಿವೆ. ನಡೆದ ಬಹುತೇಕ ಅಧ್ಯಯನಗಳು ಕವಿ-ಕಾಲ, ಕೃತಿಗಳ ಅಧ್ಯಯನವನ್ನು ಮಾಡಿವೆ. ಅನೇಕ ತತ್ವಪದಕಾರರ ಕಾಲ ಸಂದೇಹಾಸ್ಪದವಾಗಿದೆ. ಯಾಕೆಂದರೆ ಈ ಕವಿಗಳು ತಮ್ಮನ್ನು ಕುರಿತು ತಮ್ಮ ಪೂರ್ವಕವಿಗಳಂತೆ ಕಾವ್ಯದಲ್ಲಿ ತಮ್ಮ ಇತಿವೃತ್ತವನ್ನು ಹೇಳಿಕೊಂಡವರಲ್ಲ. ಇವರ ಗುರುಗಳ ಬಗ್ಗೆ ಮಾತ್ರ ಕೆಲವು ತತ್ವಪದಕಾರರು ಉಲ್ಲೇಖಿಸಿರುವುದು ಕಾಣಸಿಗುತ್ತದೆ. ಮೇಲಾಗಿ ಇವರು ಚಾರಣ ಕವಿಗಳಾದ್ದರಿಂದ ನೆಲೆನಿಂತ ಪ್ರದೇಶ ಒಂದೇಯಾಗಿರುವುದಿಲ್ಲ. ಎಲ್ಲೋ ಹುಟ್ಟಿ ಮತ್ತೆಲ್ಲೋ ನೆಲೆ ನಿಲ್ಲುವ ಇವರ ಕಾಲ ದೇಶಾದಿಗಳನ್ನು ಖಚಿತಪಡಿಸುವ ಅಧ್ಯಯನಗಳು ಅಷ್ಟೇನೂ ಮಹತ್ವದವೆನಿಸುವುದಿಲ್ಲ.

ಇತ್ತೀಚಿಗೆ ಜಾತಿ ನೆಲೆಯಲ್ಲಿ ತತ್ವಪದಕಾರರ ಅಧ್ಯಯನಗಳು ನಡೆದಿವೆ. ಸಮುದಾಯನಿಷ್ಠ ಈ ಅಧ್ಯಯನಗಳು ಬರೀ ಪರಂಪರೆ, ಅವರ ಜೀವನ, ಕೃತಿಗಳನ್ನು ಚಾರಿತ್ರಿಕವಾಗಿ ಅಧ್ಯಯನದ ವ್ಯಾಪ್ತಿಗೆ ಒಳಪಡಿಸಿ ನೋಡಿವೆ. ಸಾಂಸ್ಕೃತಿಕ ಐಡೆಂಟಿಟಿಯ ಭಾಗವಾಗಿ ನೋಡಿದರೂ, ದಲಿತ ಬಂಡಾಯದ ಚಿಂತನೆಗಳ ಹಿನ್ನೆಲೆಯಲ್ಲಿ ಕೆಳವರ್ಗದ ಜನರ ಆಸೆ ಆಶೋತ್ತರಗಳನ್ನು ಅವರ ಅನನ್ಯತೆಯನ್ನು ಗುರುತಿಸುವ ಮಹತ್ವದ ಅಂಶಗಳೇನೂ ಚರ್ಚಿಸಿಲ್ಲ.

ಪ್ರಾದೇಶಿಕ ಅನನ್ಯತೆಯಿಂದ ಮಾಡಲಾದ ಅಧ್ಯಯನಗಳಲ್ಲಿಯೂ ಮೇಲಿನ ಅಂಶಗಳೇ ಇವೆಯಾದರೂ ಪ್ರದೇಶದ ಒಟ್ಟಾರೆ ಸಂಗತಿಗಳನ್ನು ದಾಖಲು ಮಾಡಿ ವಿರಮಿಸಿವೆ. ತತ್ವಪದಕಾರರನ್ನು,

ತತ್ವಪದಗಳನ್ನು ಅವರ ಕಾಲದ ರಾಜಕೀಯ, ಧಾರ್ಮಿಕ, ಆರ್ಥಿಕ, ಸಾಮಾಜಿಕವಾಗಿ ಒಟ್ಟಂದದಲ್ಲಿ ನೋಡುವ ಕ್ರಮಗಳ ಅಧ್ಯಯನ ನಡೆದಿಲ್ಲ.

ಈ ಎಲ್ಲ ಅಧ್ಯಯನಗಳಲ್ಲಿ ತತ್ವಪದಕಾರರ ಕುರಿತ ಆಚರಣಾತ್ಮಕ ಆರಾಧನೆಯ ನೆಲೆಯನ್ನು ನೋಡಿಲ್ಲ. ಕರ್ನಾಟಕದ ಅನೇಕ ಭಾಗಗಳಲ್ಲಿ ಹಲವು ತತ್ವಪದಕಾರರ, ಅವಧೂತರ, ಸಂತರ ಜಾತ್ರೆ, ಉರುಸು, ಹಬ್ಬ ಮುಂತಾದ ಕಾರ್ಯಗಳು ಜರುಗುತ್ತಿವೆ. 'ಬಳ್ಳಾರಿ ಜಿಲ್ಲೆಯ ಅವಧೂತರು', 'ಬಬಲಾದಿ ಚಿಕ್ಕಯ್ಯನವರ' ಕುರಿತ ಅಧ್ಯಯನಗಳಲ್ಲಿ ಮಾತ್ರ ಜಾತ್ರೆ, ಆಚರಣೆಯ ಅಂಶಗಳನ್ನು ಪರಿಚಯಾತ್ಮಕವಾಗಿ ದಾಖಲಿಸಿದ್ದರೂ ಆ ಆಚರಣೆಗಳ ಹಿಂದೆ ಇರುವ ಧಾರ್ಮಿಕ, ರಾಜಕೀಯ, ಸಾಮಾಜಿಕ, ಆರ್ಥಿಕ ಸಂಗತಿಗಳು, ಜನಸಮುದಾಯಗಳ ನಡುವಿನ ಅಂತರ್ ಸಂಬಂಧಗಳನ್ನು ಅಧ್ಯಯನಕ್ಕೆ ಒಳಪಡಿಸಿಲ್ಲ. ಪ್ರಭುತ್ವದ ಹಿಂದಿನ ಆರ್ಥಿಕ ಹುನ್ನಾರಗಳನ್ನು 'ಬಬಲಾದಿ ಚಿಕ್ಕಯ್ಯ'ನವರ ಜಾತ್ರೆಯ ಮೂಲಕ ಅರಿಯಬಹುದು. ಇವುಗಳನ್ನು ಗಮನಿಸಿಲ್ಲ.

ಇತರ ಸಂತರ ಜೊತೆ ಹೋಲಿಸಿ ಮಾಡಿದ ತೌಲನಿಕ ಅಧ್ಯಯನವು ಧಾರ್ಮಿಕ ತತ್ವಗಳಲ್ಲಿ ಸಮಾನವಾದ ಆಶಯ ಉಳ್ಳವರಾಗಿಯೂ, ಸಾಮರಸ್ಯವಾದಿಯಾಗಿಯೂ ನೋಡಲಾಗಿದೆ. ಆದರೆ ಅವರ ಚಿಂತನೆಗಳ ಬಹುಮುಖಿ ನೆಲೆಯನ್ನು ಅರಿಯುವ ಪ್ರಯತ್ನ ಅಧ್ಯಯನದಲ್ಲಿ ಮಾಡಲಾಗಿಲ್ಲ.

**ಅಡಿಟಿಪ್ಪಣಿಗಳು**

೧. ನಾಗಭೂಷಣಸ್ವಾಮಿ ಓ.ಎಲ್.(ಸಂ), ೨೦೦೪, **ವಚನ ಸಾವಿರ,** ಪ್ರಸ್ತಾವನೆ

೨. ಚಂದ್ರಶೇಖರ ಟಿ.ಆರ್., ೨೦೦೪, **ವಚನ ಸಂಸ್ಕೃತಿ : ಸಾಮಾಜಿಕ ಆಯಾಮಗಳು,** ಪು.೧೦೩

೩. ಅನಂದಮೂರ್ತಿ ಜಿ.ವಿ.(ಸಂ), ೧೯೯೬, **ತತ್ವಪದಕಾರರು,** ಪ್ರಸ್ತಾವನೆ

೪. ಶಾಂತರಸ, ೨೦೦೦, **ತತ್ವಪದಗಳು,** ನಾಗಭೂಷಣಸ್ವಾಮಿ(ಸಂ), ಪು.xvi

೫. ಪೂಜಾರ ವಿ.ಜಿ. ಮತ್ತು ಈಶ್ವರಯ್ಯಮಠ(ಸಂ), ೨೦೦೪, **ಆಯ್ದ ಸ್ವರವಚನಗಳು,** ಪು.೬

೬. ನಾಗಭೂಷಣಸ್ವಾಮಿ ಓ.ಎಲ್.(ಸಂ), ೨೦೦೦, **ತತ್ವಪದಗಳು,** ಪ್ರಸ್ತಾವನೆ

೭. ಶ್ರೀ ಶಿವರಾತ್ರೀಶ್ವರ ಸ್ವಾಮಿಗಳು(ಸಂ),, ೧೯೮೭, **ಮುಪ್ಪಿನ ಷಡಕ್ಷರಿಗಳ ಕೈವಲ್ಯಪದ,** ಪ್ರಸ್ತಾವನೆ, ಪು.xxxi

೮. ಬಸವಲಿಂಗ ಸೊಪ್ಪಿಮಠ(ಸಂ), ೧೯೯೯, **ನೀರಲಕೆರೆ ಬಸವಲಿಂಗ ಶಿವಯೋಗಿಗಳ ಸ್ವರವಚನಗಳು,** ಪ್ರಸ್ತಾವನೆ, ಪು.೧೩

೯. ಬಸವನಾಳ ಶಿ.ಶಿ.(ಸಂ), ೧೯೪೮, **ಕೈವಲ್ಯ ಕಲ್ಪವಲ್ಲರಿ,** ಪ್ರಸ್ತಾವನೆ.

೧೦. ವೀರಣ್ಣ ರಾಜೂರು(ಸಂ), ೧೯೮೬, **ಹಾಗಲವಾಡಿ ಮುದ್ದೀರ ಸ್ವಾಮಿಯ ಸ್ವರವಚನಗಳು,** ಪ್ರಸ್ತಾವನೆ

೧೧. ವೆಂಕಟೇಶ ಇಂದ್ವಾಡಿ, ೨೦೦೭, **ಸೂತಕವೆಂಬ ರೂಪಕ,** ಪು.೫೬

೧೨. ನಾಗಭೂಷಣಸ್ವಾಮಿ ಓ.ಎಲ್.(ಸಂ), ೨೦೦೦, **ತತ್ವಪದಗಳು ಪ್ರಾತಿನಿಧಿಕ ಸಂಕಲನ**, ಪು.೫೦೦

೧೩. **ಶಿವಪ್ರಕಾಶ್** ಎಚ್.ಎಸ್., ೧೯೯೩, **ಕನ್ನಡ ತತ್ವಪದಕಾರರು**, ಬರಗೂರು ರಾಮಚಂದ್ರಪ್ಪ(ಸಂ), ಪು.೭ ೮

೧೪. **ಕಾಳೇಗೌಡ** ನಾಗವಾರ(ಸಂ), ೨೦೦೦, **ಹಲವು ತೋಟದ ಹೂಗಳು**, ಪ್ರಸ್ತಾವನೆ

೧೫. ರಾಮಚಂದ್ರೇಗೌಡ ಹಿ.ಶಿ., ೧೯೯೩, **ಕನ್ನಡ ತತ್ವಪದಕಾರರು**, ಬರಗೂರು ರಾಮಚಂದ್ರಪ್ಪ(ಸಂ), ಪು.೪೮

೧೬. ಶ್ರೀಧರ ಪಿಸ್ಸೆ, ೨೦೦೯, **ಶರೀಫರ ಅನುಭಾವದ ನೆಲೆ**, ಸಂಕ್ರಮಣ

೧೭. ನಾಗರಾಜ ಕಿ.ರಂ., ೧೯೮೨, **ಈ ಕಾಲದ ಅನುಭಾವ ಸಾಹಿತ್ಯ**, ಪು.೩೮೫

೧೮. ಕಲಬುರ್ಗಿ ಎಂ.ಎಂ., ೨೦೦೩, **ಕನ್ನಡದಲ್ಲಿ ಅನುಭಾವ ಸಾಹಿತ್ಯ**, ಪಾಟೀಲ ಎಂ.ಎಸ್.(ಸಂ), ಪು.೩

೧೯. ಶಿವಪ್ರಕಾಶ್ ಎಚ್.ಎಸ್., ೧೯೯೩, **ಕನ್ನಡ ತತ್ವಪದಕಾರರು**, ಬರಗೂರು ರಾಮಚಂದ್ರಪ್ಪ(ಸಂ), ಪು.೮

೨೦. ಅದೇ, ಪು.೮

೨೧. ಕಾವ್ಯಪ್ರೇಮಿ(ಸಂ),, ೧೯೯೨, **ಪುರಂದರದಾಸರ ಹಾಡುಗಳು**, ಪು.೭೪

೨೨. ನಾವಡ, ಗಾಯತ್ರಿ ನಾವಡ(ಸಂ),, ೨೦೦೨, **ಸಾವಿರಾರು ಕೀರ್ತನೆಗಳು**, ಪು.೭೭೫, ೬೯೫, ೫೮೯

೨೩. ರಹಮತ್ ತರೀಕೆರೆ, **ಲೋಕವಿರೋಧಿಗಳ ಜತೆಯಲ್ಲಿ**, ಪ್ರಸ್ತಾವನೆ, ಪು.xi

೨೪. ಮಂಗಳಾ ಪ್ರಿಯದರ್ಶಿನಿ, ೧೯೯೬, *ಅನುಭಾವ*, ನಿಜಗುಣ, ಮರುಳಸಿದ್ಧಯ್ಯ ಮತ್ತು ಅಕ್ಕೂರಮಠ(ಸಂ), ಪು.೪೬೭

೨೫. ನಾಗಭೂಷಣಸ್ವಾಮಿ ಓ.ಎಲ್., ೨೦೦೦, ತತ್ವಪದಗಳು, ಪು.xxvi

೨೬. ಲಕ್ಷ್ಮೀಪತಿ ಕೋಲಾರ, ೧೯೯೩, *ವಸಾಹತುಶಾಹಿ ಹಿನ್ನೆಲೆಯಲ್ಲಿ ತತ್ವಪದಕಾರರ ರಚನೆಗಳು,* **ಕನ್ನಡ ತತ್ವಪದಕಾರರು** ಬರಗೂರು ರಾಮಚಂದ್ರಪ್ಪ(ಸಂ),, ಪು.೧೮

೨೭. ಶಿವಾನಂದ ಗುಬ್ಬಣ್ಣವರ(ಸಂ), ೧೯೮೧, ಬರಕೋ ಪದ ಬರಕೋ, ಪು.೧೪೭, ೧೫೭, ೧೬೦, ೧೬೮, ೨೨೭, ೨೩೦

೨೮. ಲಠ್ಠೆ ಎಂ.ಎಸ್.(ಸಂ) ೧೯೮೨, **ಕಡಕೋಳ ಮಡಿವಾಳೇಶ್ವರ ವಿರಚಿತ ಸ್ವರವಚನಗಳು**, ಪು.೧೦೯

೨೯. ರಾಮಚಂದ್ರೇಗೌಡ ಹಿ.ಶಿ., ೧೯೯೩, **ಕನ್ನಡ ತತ್ವಪದಕಾರರು**, ಬರಗೂರು ರಾಮಚಂದ್ರಪ್ಪ(ಸಂ), ಪು.೩೫

೩೦. ಚಂದ್ರಶೇಖರ ನಂಗಲಿ, ೧೯೯೩, **ಕನ್ನಡ ತತ್ವಪದಕಾರರು**, ಬರಗೂರು ರಾಮಚಂದ್ರಪ್ಪ(ಸಂ), ಪು.೫೬

೩೧. ಮಹೇಶ ತಿಪ್ಪಶೆಟ್ಟಿ, ೧೯೯೩, **ಕನ್ನಡ ತತ್ವಪದಕಾರರು**, ಬರಗೂರು ರಾಮಚಂದ್ರಪ್ಪ(ಸಂ), ಪು.೮೫

೩೨. ಅದೇ, ಪು.೯೭

೩೩. ತಿಪ್ಪೇರುದ್ರಸ್ವಾಮಿ ಎಚ್., ೧೯೮೩, **ಕನ್ನಡದಲ್ಲಿ ಕೈವಲ್ಯ ಸಾಹಿತ್ಯ**, ಪು.೨

೩೪. ಅಮರೇಶ ನುಗಡೋಣಿ, ೧೯೯೯, **ನುಡಿವ ಬೆಡಗು**, ಪು.೩೮

೩೫. ಶಿವರುದ್ರಪ್ಪ ಜಿ.ಎಸ್., ೨೦೦೪, **ಸರ್ಪಭೂಷಣ ಶಿವಯೋಗಿ**, ಪು.೨೦

೩೬ ಅದೇ, ಪು.೨೧

೩೭. ಅದೇ, ಪು.೩೦

೩೮. ನಾಗೇಶ ಹೆಚ್.ಕೆ., ೨೦೦೭, ಬಿಂಬದೊಳಗಣ ಪ್ರಾಣ, ಪು.೧೩

೩೯. ಅದೇ, ಪು.೧೫

೪೦. ಅದೇ, ಪು.೬೫

೪೧. ಅದೇ, ಪು.೬೫

೪೨. ಅದೇ, ಪು.೪೯

೪೩. ಅದೇ, ಪು.೬೭

೪೪. ರಹಮತ್ ತರೀಕೆರೆ, ೨೦೦೮, ತತ್ವಪದಕಾರರು ಮತ್ತು ವಸಾಹತುಶಾಹಿ ವ್ಯವಸ್ಥೆ : ಒಂದು ಅಧ್ಯಯನ, ಡಿ.ರಘುನಾಥರಾವ್, ಮುನ್ನುಡಿ

೪೫. ರಹಮತ್ ತರೀಕೆರೆ, ೨೦೦೭, ಕನ್ನಡ ಸಂಶೋಧನೆ ತಾತ್ವಿಕ ವಿಚಾರ, ಪು.೧೦೭

೪೬. ಈಶ್ವರಯ್ಯಮಠ, ೨೦೦೮, ಹಾರಿತೋ ಹಂಸ ಹಾರಿತೋ, ಪು.೫

೪೭. ಅದೇ, ಪು.೧೬

೪೮. ಅದೇ, ಪು.೨೬

೪೯. ಅದೇ, ಪು.೧೯

೫೦. ಬರಗೂರು ರಾಮಚಂದ್ರಪ್ಪ, ೨೦೦೭, ಕನ್ನಡ ಸಾಹಿತ್ಯವೆಂಬ ಸ್ವಾತಂತ್ರ್ಯ ಹೋರಾಟ, ಪು.೨೭೭-೨೭೮

# ಅಧ್ಯಾಯ ಐದು

# ಸಮಾರೋಪ

ಈ ಪ್ರಬಂಧದಲ್ಲಿ ಬೇರೆ ಬೇರೆ ಅಧ್ಯಾಯಗಳಲ್ಲಿ ಸುದೀರ್ಘವಾಗಿ ತತ್ವಪದ ಅಧ್ಯಯನಗಳು ನಡೆದ ಬಗೆಯನ್ನು ಸಮೀಕ್ಷಿಸಲಾಗಿದೆ. ಇದರ ಜೊತೆಗೆ ತತ್ವಪದಗಳು ರೂಪುಗೊಂಡ ಚಾರಿತ್ರಿಕ ಮತ್ತು ಸಾಂಸ್ಕೃತಿಕ ಸಂದರ್ಭವನ್ನು ತಿಳಿಯಲಾಗಿದೆ. ಈ ಹಿನ್ನೆಲೆಯಲ್ಲಿ ಸಮೀಕ್ಷೆಗೆ ಬೇಕಾದ ಒಂದು ತಾತ್ವಿಕ ಭೂಮಿಕೆಯನ್ನು ಸಿದ್ಧಪಡಿಸಿಕೊಳ್ಳಲಾಗಿದೆ. ಈ ಎಲ್ಲ ಚರ್ಚೆಗಳನ್ನು ಪ್ರಸ್ತುತ ನಿಬಂಧದ ವಿಷಯಕ್ಕೆ ಪೂರಕವಾಗಿ ಚರ್ಚಿಸಲಾಗಿದೆ. ಇಲ್ಲಿ ಕಂಡುಕೊಂಡ ನಿಬಂಧದ ಫಲಿತಗಳನ್ನು ಹೀಗೆ ಸಂಗ್ರಹಿಸಲಾಗಿದೆ.

೧. ಮಧ್ಯಕಾಲೀನ ಭಕ್ತಿ ಸಾಹಿತ್ಯವನ್ನು ಬಹುತೇಕ ಅಧ್ಯಯನದ ಆಸಕ್ತಿಗಳು ಸಂಪ್ರದಾಯವಾದಿ ನೆಲೆಯಲ್ಲಿ ವಿವರಿಸುತ್ತವೆ. ಕೀರ್ತನೆ (ಭಕ್ತಿಯ ಹಾಡುಗಳು) ಕಾವ್ಯರೂಪದ ಹಾಡುಗಳು, ಸ್ವರವಚನಗಳು, ಕೈವಲ್ಯಪದಗಳು, ಅನುಭಾವ ಪದಗಳು, ಭಜನೆ ಪದಗಳು, ತತ್ವಪದಗಳು ಎಂದೆಲ್ಲ ಒಂದೇ ಆಗಿ ನೋಡುತ್ತವೆ.

೨. ಕೈವಲ್ಯ ಪದಗಳು ಶಿಷ್ಟತೆಗೆ ವಾಲಿದ ರಚನೆಗಳೆಂದೂ, ತತ್ವಪದಗಳು ದೇಸಿಸಂವೇದನೆ ಒಳಗೊಂಡ ರಚನೆಗಳೆಂದೂ ಹಾಗೂ ಅವುಗಳನ್ನು ಶಿಷ್ಟ ಮತ್ತು ಜಾನಪದ ಭಾಗವಾಗಿಯೂ ನೋಡಲಾಗಿದೆ. ಶರಣಾಗತಿ ಮತ್ತು ಕೀಳರಿಮೆಗಳ ಅಭಿವ್ಯಕ್ತಿ ರಚನೆಗಳೆಂದು ಹೀಗಳೆಯಲಾಗಿದೆ. ವಸಾಹತುಶಾಹಿ ಆಗಮನದ ಬಗ್ಗೆ ದಿವ್ಯಮೌನ ವಹಿಸಿದ ರಚನೆಗಳೆಂದೂ, ವೈದಿಕ ವಸಾಹತುಶಾಹಿಗೆ ತೋರಿದ ಪ್ರತಿಕ್ರಿಯೆಗಳೆಂದೂ ನೋಡಲಾಗಿದೆ.

೩. ಭಕ್ತಿ, ಧರ್ಮ, ದೇವರು ಮುಂತಾದ ವಿಷಯಗಳಲ್ಲಿ ನಂಬಿಕೆ, ವಿಶ್ವಾಸ ಇರುವ ಜನ ಈ ರಚನೆಗಳನ್ನು ಅತ್ಯಂತ ಮೌಲಿಕವೆಂದು ತಿಳಿಯಲಾಗಿದೆ. ತತ್ವಪದಕಾರರನ್ನು ಕೈವಲ್ಯಾನುಭವ ಪಡೆದವರು, ಆತ್ಮವಾದಿ ಚಿಂತಕರಾಗಿಯೂ ನೋಡಲಾಗಿದೆ.

೪. ಸಮಾಜದ ವ್ಯವಸ್ಥೆಯಿಂದ ದೂರ ಸರಿದು ಮಾತನಾಡುವ ತತ್ವಪದಕಾರರು ಹೆಣ್ಣನ್ನು ಮಾಯೆ, ಮೋಸದವಳೆಂದು ಜರಿದ, ಸಂಸಾರ, ದುಡಿಮೆಯನ್ನು ನಿರಾಕರಿಸಿದ ಪಲಾಯನ ವಾದಿಗಳೆಂದು,

ಸಮಾಜದ ಬದಲಾವಣೆ ಬಯಸದೆ ವ್ಯಕ್ತಿ ಬದಲಾವಣೆಗೆ ತುಡಿದವರೆಂದು, ಹಿಂದೂ ಸನಾತನವಾದದ ಕೆಳವರ್ಗದ ಪ್ರತಿಪಾದಕರೆಂದು, ಶೂನ್ಯಸಂಸ್ಕೃತಿಯ ಸೃಷ್ಟಿಕರ್ತರೆಂದೂ ತಿಳಿಯಲಾಗಿದೆ.

೫. ಸ್ವರವಚನ ಮತ್ತು ತತ್ವಪದಗಳನ್ನು ವೀರಶೈವ ಪರಿಭಾಷೆಯ ತಾತ್ವಿಕ ನೆಲೆಯಲ್ಲಿಯೇ ನೋಡುತ್ತವೆ. ಆ ಕಾಲದ ಸಾಮಾಜಿಕ, ಸಾಹಿತ್ಯಕ ಸಂಗತಿಗಳನ್ನು ಕಟ್ಟಿಕೊಡುತ್ತವೆ. ಸಂಗೀತದ ಮೂಲಕ ಸ್ವರವಚನಗಳಿಗೆ ಒಂದು ಪರಂಪರೆ ಕಟ್ಟುವ, ಸ್ವರವಚನ ಪರಿಭಾಷೆಯನ್ನು ಸಂಗೀತಕ್ಕೆ ಆರೋಪಿಸಿ ಅಧ್ಯಯನ ಮಾಡುತ್ತವೆ.

೬. ವೀರಶೈವ ತತ್ವ ಸಿದ್ಧಾಂತಗಳನ್ನು ಒಳಗೊಂಡ ಹಾಡುಗಳನ್ನೆಲ್ಲ ಸ್ವರವಚನಗಳೆಂದು ಸರಳೀಕರಣ ಮಾಡಲಾಗಿದೆ. ಈ ಹಿನ್ನೆಲೆಯಲ್ಲಿ ತತ್ವಪದಗಳು ಮತ್ತು ಸ್ವರವಚನಗಳ ಪರಿಕಲ್ಪನೆಯ ಚರ್ಚೆಗಳನ್ನು ಕ್ರೋಡೀಕರಿಸಿ, ವಿವಿಧ ವಿದ್ವಾಂಸರು ಚರ್ಚಿಸಿದ ಚರ್ಚೆಗಳನ್ನು ಗಮನಿಸಿದರೆ ೧೫ನೆಯ ಶತಮಾನ ವೀರಶೈವ ಸಾಹಿತ್ಯ ಸಂಗ್ರಹ ಸಂಪಾದನೆಗಳ ದೃಷ್ಟಿಯಿಂದ ಸುವರ್ಣಯುಗವಾಗಿದೆ. ಈ ಕಾಲದ ಶೂನ್ಯಸಂಪಾದನೆಗಳು, ಸಂಕಲನಗಳು, ಏಕೋತ್ತರ ಶತಸ್ಥಲಗಳು, ವೀರಶೈವೀಕರಣ ಮಾಡುವ ದೃಷ್ಟಿಯಿಂದ ಸೃಷ್ಟಿಯಾದಂತವುಗಳು ಎನಿಸುತ್ತವೆ. ಅಂತೆಯೇ ೧೫ನೆಯ ಶತಮಾನದಲ್ಲಿನ 'ಗಣವಚನ ರತ್ನಾವಳಿ, ಏಕೋತ್ತರ ಶತಸ್ಥಲಗಳು' ಮೊದಲ ವೀರಶೈವ ಸ್ವರವಚನ ಸಂಕಲನಗಳಾಗಿವೆ. ಇದೇ ಪರಿಭಾಷೆಯನ್ನು ಮುಂದಿನ ವಿದ್ವಾಂಸರು ನಂತರದಲ್ಲಿ ರಚನೆ ಮಾಡಿದ ನಿಜಗುಣ ಶಿವಯೋಗಿಗಳ 'ಕೈವಲ್ಯಪದ'ಗಳಿಗೆ 'ಸ್ವರವಚನ'ಗಳೆಂದು ಕರೆದಂತೆ ತೋರುತ್ತದೆ. ಅನಂತರದ ರಚನೆಗಳನ್ನೂ ಹೀಗೆಯೇ ಕರೆಯಲಾಗಿದೆ. ೧೫ನೆಯ ಶತಮಾನದಲ್ಲಿ ರಚನೆಯಾದ 'ಕೈವಲ್ಯ ಪದಗಳು' ಸ್ವತಂತ್ರ ರಚನೆಗಳು. ಇವುಗಳಲ್ಲಿ ವೀರಶೈವ ತತ್ವಸಿದ್ಧಾಂತಗಳು ಕಾಣಿಸಿದರೂ ಮುಖ್ಯವಾಗಿ ಮುಕ್ತಿಯ ಆತ್ಯಂತಿಕತೆಯನ್ನು ಸಾರುತ್ತವೆ. ೧೫ನೆಯ ಶತಮಾನದಿಂದಲೇ ತತ್ವಪದಗಳು ಸ್ವತಂತ್ರ ರಚನೆಗಳಾಗಿ ರೂಪುಗೊಂಡಿವೆ ಎಂದು ಕಾಣಿಸಲಾಗಿದೆ.

೭. ಸ್ವರವಚನ ಎನ್ನುವ ಪರಿಭಾಷೆ ೧೫ನೆಯ ಶತಮಾನದಲ್ಲಿ ಹುಟ್ಟಿಕೊಂಡಂತಹದು. 'ತತ್ವಪದ'ಗಳನ್ನು ವೀರಶೈವ ಪರಿಭಾಷೆಯ ದೃಷ್ಟಿಯಿಂದ, ಅವುಗಳ ರಾಚನಿಕ ಸ್ವರೂಪದ ದೃಷ್ಟಿಯಿಂದ 'ಸ್ವರವಚನ'ಗಳೆಂದು ಕರೆಯಲಾಗಿದೆ. ಆದರೆ ಅಭಿವ್ಯಕ್ತಿ, ಆಶಯದ ದೃಷ್ಟಿಯಿಂದ ಅವು ಸಂಪೂರ್ಣ ಭಿನ್ನವಾಗಿವೆ ಎಂದು ನೋಡಲಾಗಿದೆ.

೮. ಸಾಹಿತ್ಯ ಪ್ರಕಾರವನ್ನು ಹೀಗೆ ರಾಚನಿಕ ಸ್ವರೂಪದ ದೃಷ್ಟಿಯಿಂದ, ಪರಿಭಾಷೆಯ ದೃಷ್ಟಿಯಿಂದ ಗ್ರಹಿಸುವುದು ಸಮಸ್ಯೆಯಲ್ಲ. ಆದರೆ ಅವುಗಳನ್ನು ಧಾರ್ಮಿಕ ಪರಿಭಾಷೆಯಲ್ಲಿ ನಿರುಕಿಸುವುದು, ಆ ಸಾಹಿತ್ಯವನ್ನು ಸಾಂಸ್ಥಿಕತೆಗೊಳಪಡಿಸುವುದು ಮಿತಿಯಾಗಿ ಕಾಣುತ್ತದೆ. ಆ ಸಾಹಿತ್ಯದ ಅನೇಕ ಸಾಧ್ಯತೆಗಳನ್ನು ಹರಣ ಮಾಡಿದಂತೆ ಆಗುತ್ತದೆ ಎನ್ನುವ ನಿಲುವು ಮುಖ್ಯವಾದುದು.

೯. ಹಸ್ತಪ್ರತಿ ಮತ್ತು ಮೌಖಿಕವಾದ ಈ ತತ್ವಪದ ರಚನೆಗಳನ್ನು ಸಂಪಾದನಕಾರರು, ಪ್ರಕಟಣಕಾರರು ಅವರ ಮನೋಧರ್ಮದ ಹಿನ್ನೆಲೆಯಲ್ಲಿ ಗ್ರಹಿಸಿದ್ದಾರೆ. ವೀರಶೈವದ ಹಿನ್ನೆಲೆಯಿಂದ ಈ ರಚನೆಗಳನ್ನು ಗ್ರಹಿಸಿದ ಕಾರಣವಾಗಿ ಶಿವದಾಸ ಗೀತೆಗಳೆಂದು, ಸ್ವರವಚನಗಳೆಂದು ಕರೆಯಲಾಗಿದೆ. ಜಾತ್ಯತೀತ ಅಥವಾ ಧರ್ಮನಿರಪೇಕ್ಷ ರಚನೆಗಳೆಂದು ಗ್ರಹಿಸಿದ ಕಾರಣವಾಗಿ ತತ್ವಪದಗಳೆಂದು, ಜನಪದರು ಅನುಭಾವಪದಗಳೆಂದು, ಭಜನೆಪದಗಳೆಂದೂ, ಭಕ್ತಿ ಅಥವಾ ಮುಕ್ತಿಯ ಕಾರಣವಾಗಿ 'ಕೈವಲ್ಯ ಸಾಹಿತ್ಯವೆಂದೂ ಕರೆದು ಸಂಗ್ರಹಿಸಲಾಗಿದೆ.

೧೦. ಮೌಖಿಕವಾಗಿರುವ ರಚನೆಗಳನ್ನು ಸಂಗ್ರಹಿಸುವಾಗ ಸಹಜವಾಗಿಯೇ ಸಂಪಾದಕರಿಗೆ ಕೆಲವು ತೊಡಕುಗಳು ಎದುರಾಗುತ್ತವೆ. ಸಮುದಾಯಗಳಲ್ಲಿ, ಜನಪದರಲ್ಲಿ ಮೌಖಿಕವಾಗಿ ಬಳಕೆಯಲ್ಲಿರುವ ತತ್ವಪದ ರಚನೆಗಳು ಅಂಕಿತ ಬದಲುಗೊಳ್ಳುವ ಮೂಲಕ ಒಬ್ಬರ ರಚನೆಗಳು ಮತ್ತೊಬ್ಬರ ಹಾಡುಗಳಾಗಿ ಸೇರಿಹೋಗಿವೆ. ಸಂಪಾದಕರಿಗೆ ಇದು ಕರ್ತೃತ್ವದ ಪ್ರಶ್ನೆಯಾಗಿದೆ. ಮಧ್ಯಕಾಲೀನ ಮೌಖಿಕ ರಚನೆಗಳು ತಮ್ಮ ಪರಂಪರೆಯ ಭಾಗವಾಗಿದ್ದ ರೂಪಕ, ನುಡಿಗಟ್ಟು ಆಶಯಗಳನ್ನು ತಮ್ಮ ರಚನೆಗಳಲ್ಲಿ ಮತ್ತೆ ಮತ್ತೆ ಬಳಸುತ್ತಾ ಬಂದಿವೆ. ಹೀಗಾಗಿ ಯಾವ ತತ್ವಪದ ಯಾರದ್ದು ಎಂದು ಅನೇಕ ವಾಗ್ವಾದಗಳು ನಡೆದಿವೆ. ಇಂಥ ಹಾಡು ಇವರದೇ ಎಂದು ನಿಗದಿ ಮಾಡುವ ಹಠ ವಿದ್ವಾಂಸರು ತೋರಿದ್ದಾರೆ. ತತ್ವಪದಗಳನ್ನು ಹಾಡುವ ಅವನ್ನು ಬದುಕಿನ ಭಾಗವಾಗಿ ಸ್ವೀಕರಿಸುವ ಜನಸಮುದಾಯಗಳಿಗೆ ಹಾಡಿನ ತಿರುಳು ಮುಖ್ಯವೇ ಹೊರತು ಕರ್ತೃತ್ವವಲ್ಲ. ಆದ್ದರಿಂದ ಕರ್ತೃತ್ವದ ಪ್ರಶ್ನೆಗಿಂತ ಜನಪ್ರಿಯವಾದ ಒಂದು ಹಾಡು, ತತ್ವಪದ ಹಲವು ಅನುಭಾವಿಗಳದ್ದು ಎಂದು ಸ್ವೀಕರಿಸುವುದು ಸರಿಯಾದುದು ಎಂಬ ನಿಲುವಿಗೆ ಬರಲಾಗಿದೆ.

೧೧. ತತ್ವಪದಕಾರರು, ಸಂತರು, ಅನುಭಾವಿಗಳು, ಜಾತ್ಯತೀತ, ಧಾರ್ಮಿಕ ಸಾಮರಸ್ಯದ ಪ್ರತಿಪಾದಕರಾಗಿದ್ದರು. ಅವರನ್ನು ಜಾತಿಯ ನೆಲೆಯಲ್ಲಿ, ಧಾರ್ಮಿಕ ಮನೋಭಾವದ ನೆಲೆಯಲ್ಲಿ ಮತ್ತು ಪ್ರಾದೇಶಿಕತೆಗೆ ಸೀಮಿತಗೊಳಿಸಿ ನೋಡಲಾಗಿದೆ. ಸಾಂಸ್ಕೃತಿಕ ಐಡೆಂಟಿಟಿಯ, ಪ್ರಾದೇಶಿಕ ಅನನ್ಯತೆಯ ಭಾಗವಾಗಿ ನೋಡಿದರೂ ದಲಿತ ಬಂಡಾಯದ ಚಿಂತನೆಗಳನ್ನೂ, ಕೆಳವರ್ಗದ ಆಸೆ ಆಶೋತ್ತರಗಳನ್ನು ಗುರುತಿಸುವ ಮಹತ್ವದ ಅಂಶಗಳೇನೂ ಚರ್ಚಿಸಿಲ್ಲದಿರುವುದು ಕಾಣಲಾಗಿದೆ.

೧೨. ಕವಿ, ಕೃತಿ, ಕಾಲ, ದೇಶಗಳ ಕುರಿತ ಚಾರಿತ್ರಿಕ ಅಧ್ಯಯನಗಳಲ್ಲಿ ಜಾತ್ಯತೀತ ನೆಲೆಯ ಅನುಭಾವಿಗಳು ಸೌಹಾರ್ದತೆ, ಸಾಮರಸ್ಯ, ಸಾಂಸ್ಕೃತಿಕ ಅನನ್ಯತೆಗಾಗಿ ಮಿಡಿದ ಮಾನವೀಯ ಕಾಳಜಿಯುಳ್ಳವರು ಎಂದು ತಿಳಿಯಲಾಗಿದೆ. ಈ ಹಿನ್ನೆಲೆಯಿಂದ ಅವರ ಚಾರಿತ್ರಿಕ ಸಂಗತಿಗಳನ್ನು ಅರಿಯಬಹುದಾದರೂ ಅನುಭಾವಿಗಳ ಕುರಿತ ಕಾಲದ ಚರ್ಚೆ ಅಷ್ಟೊಂದು ಮಹತ್ವದ್ದೇನಲ್ಲ. ಅವರು ಚಾರಣ ಅಥವಾ ಸಂಚಾರಿ ಕವಿಗಳಾದ್ದರಿಂದ ಒಂದೇ ಪ್ರದೇಶದಲ್ಲಿ ನೆಲೆ ನಿಂತವರಲ್ಲ.

ಹೀಗಾಗಿ ಬಹುತೇಕ ಅನುಭಾವಿಗಳ ಕಾಲ, ದೇಶದ ನಿಖರತೆ ಗುರುತಿಸುವುದು ಕಷ್ಟ ಎಂದು ತಿಳಿಯಲಾಗಿದೆ.

೧೩. ಅಧ್ಯಯನಗಳಲ್ಲಿ ತತ್ವಪದಗಳ ಆಶಯಗಳು, ಅವುಗಳಲ್ಲಿನ ರೂಪಕಶಕ್ತಿ, ನೀಡಿದ ಪ್ರೇರಣೆ ಜೊತೆಗೆ ಸಮಕಾಲೀನ, ಸಾಮಾಜಿಕ ಧೋರಣೆಗಳಿಗೆ ಅವು ಹೇಗೆ ಪರ್ಯಾಯವನ್ನು ಒದಗಿಸುತ್ತವೆ ಎಂದು ಶೋಧಿಸಲಾಗಿದೆ. ವಚನ, ಕೀರ್ತನೆ, ಬೆಡಗಿನ ರಚನೆಗಳ ಹಿನ್ನೆಲೆಯಲ್ಲಿ ಸ್ಥಾನನಿರ್ದೇಶನ ಮಾಡಲಾಗಿದೆ. ಬ್ರಾಹ್ಮಣ್ಯದ ವಿರೋಧ, ವಸಾಹತುಶಾಹಿಪರ ಮತ್ತು ತಾತ್ವಿಕ ವಿರೋಧಗಳ ದ್ವಂದ್ವಾತ್ಮಕ ನೆಲೆಯನ್ನು, ಸಮಾನತೆ, ಆದರ್ಶ ಮುಂತಾದ ಮೌಲ್ಯಗಳ ಮೂಲಕವೂ ಗಮನಿಸಿರುವುದನ್ನು ಕಾಣಬಹುದು.

೧೪. ಮಧ್ಯಕಾಲೀನ ಭಕ್ತಿಪಂಥಗಳಲ್ಲಿ ತತ್ವಪದಕಾರರನ್ನು ಬಸವ, ಅಲ್ಲಮ ಧಾರೆಯ ಪರಂಪರೆಯಲ್ಲಿ ಸ್ಥಾನನಿರ್ದೇಶನ ಮಾಡಲಾಗಿದೆ. ಅಲ್ಲದೆ ಸಮಕಾಲೀನ ಅನುಭಾವಿಗಳಾದ ಸೂಫಿ, ನಾಥ, ಆರೂಢ, ಅವಧೂತ ಪರಂಪರೆಯೊಂದಿಗೆ ಬೆಳೆದ ಹಿನ್ನೆಲೆ, ಪ್ರಭಾವ, ಪ್ರೇರಣೆ, ಕೊಡು-ಕೊಳೆಯ ನಡೆಗಳು ಹಾಗೂ ದೇಸಿ ಜ್ಞಾನ ಪರಂಪರೆಯ ಭಾಗವಾಗಿ ನಿರೂಪಿಸುವ ಚರ್ಚೆಗಳೂ ಇವೆ.

೧೫. ಅಧ್ಯಯನಗಳಲ್ಲಿ ಸಾಹಿತ್ಯಕ ದೃಷ್ಟಿಯಿಂದ ರಸ, ಧ್ವನಿ, ಬೆಡಗು, ಛಂದಸ್ಸು, ಭಾಷೆ ಮುಂತಾದ ಅಂಶಗಳನ್ನು ಚರ್ಚಿಸಲಾಗಿದೆ. ಛಂದಸ್ಸನ್ನು ಗುರುತಿಸುವ ಪ್ರಯತ್ನಗಳು ಇವೆಯಾದರೂ, ತತ್ವಪದಗಳು ಶಾಸ್ತ್ರೀಯ ಚೌಕಟ್ಟನ್ನು ಮೀರುವ ರಚನೆಗಳಾಗಿವೆ ಎಂದು ಕಂಡುಕೊಳ್ಳಲಾಗಿಲ್ಲ.

೧೬. ಇತರ ಸಂತರ ಜೊತೆ ಹೋಲಿಸಿ ಮಾಡಿದ ತೌಲನಿಕ ಅಧ್ಯಯನವು ಧರ್ಮಸಾಧನೆಯ ಪ್ರಭಾವ ಮತ್ತು ಧಾರ್ಮಿಕ ಸಾಮರಸ್ಯವಾದಿ, ಸಮಾನ ಆಶಯವುಳ್ಳವರಾಗಿ ಏಕಮುಖಿ ನೆಲೆಯಲ್ಲಿ ನೋಡಲಾಗಿದೆಯೇ ಹೊರತು ಅವರ ಚಿಂತನೆಯ ಬಹುಮುಖಿ ಆಯಾಮಗಳನ್ನು ಅರಿಯುವ ಪ್ರಯತ್ನ ಕಂಡುಬರುವುದಿಲ್ಲ.

೧೭. ವಿಶ್ಲೇಷಣಾ ಮಾದರಿಗಳಲ್ಲಿ ಚಾರಿತ್ರಿಕ ಪ್ರಜ್ಞೆ ಎಂಬುದು ಕೃತಿಯನ್ನು ಕಾಲ, ದೇಶ, ವಿಶಿಷ್ಟ ನೆಲೆಗಳಿಗೆ ಬದ್ಧಗೊಳಿಸುತ್ತದೆ. ಆದರೂ ಇವುಗಳಲ್ಲಿನ ರಾಜಕೀಯ, ಸಾಮಾಜಿಕ, ಆರ್ಥಿಕ ಸಂಗತಿಗಳನ್ನು ಸಂಕೀರ್ಣವಾದ ಆಯಾಮಗಳಿಂದ ಪರಿಶೀಲಿಸಿರುವುದು ಅಧ್ಯಯನ ಕೃತಿಗಳಲ್ಲಿ ಕಂಡುಬರುತ್ತದೆ. ಇದೊಂದು ಬಹುಶಿಸ್ತೀಯ ನೆಲೆಯ ಅಧ್ಯಯನವಾಗಿದೆ. ಈ ಅಧ್ಯಯನಗಳು ವಿರಳವಾಗಿವೆ. ವಿಶ್ಲೇಷಣಾ ಮಾದರಿ ಅಧ್ಯಯನಗಳಲ್ಲಿ ಸಮಕಾಲೀನ ಸಾಹಿತ್ಯಕ ಚಿಂತನೆಗಳ ಹಿನ್ನೆಲೆಯೊಂದು ಸದಾ ಇದ್ದೇ ಇರುತ್ತದೆ. ತತ್ವಪದಗಳ ಕುರಿತ ಇಂತಹ ಅಧ್ಯಯನ ರೂಪುಗೊಳ್ಳಬೇಕಾಗಿದೆ.

೧೮. ಬಹುತೇಕ ಅಧ್ಯಯನಗಳಲ್ಲಿ ತತ್ವಪದಕಾರರ ಕುರಿತ ಆಚರಣಾತ್ಮಕ, ಆರಾಧನಾತ್ಮಕ ನೆಲೆಯ ಸಂಗತಿಗಳು ಚರ್ಚಿತವಾಗಿಲ್ಲ. ಈ ಹೊತ್ತಿಗೂ ಕರ್ನಾಟಕದ ಅನೇಕ ಭಾಗಗಳಲ್ಲಿ ತತ್ವಪದಕಾರರ ಅನುಭಾವಿಗಳ ಕುರಿತ ಜಾತ್ರೆ, ಉರುಸು, ಹಬ್ಬ-ಉತ್ಸವಗಳು ನಡೆಯುತ್ತವೆ. ಅವರು ಸಮುದಾಯಗಳ ಕಷ್ಟವನ್ನು ಪರಿಹರಿಸುವ ದೈವವಾಗಿ ನೆಲೆಯೂರಿದ್ದಾರೆ. ಅವರ ಕುರಿತ ಜನಪದ ನಂಬಿಕೆ, ಪುರಾಣ, ಮುಗ್ಧಭಕ್ತಿ, ಆಚರಣೆಗಳಿಗೆ ಯಾವುದೋ ಸಾಂಸ್ಕೃತಿಕವಾದ ಅಂತರ್‌ಸಂಬಂಧಗಳಿವೆ. ಅವು ಅಧ್ಯಯನಕ್ಕೆ ಒತ್ತಾಯಿಸುತ್ತವೆ. ಅಧ್ಯಯನಗಳಲ್ಲಿ ಪ್ರಧಾನವಾಗಿ ಇವು ಗೌಣವಾಗಿವೆ.

೧೯. ಆಧುನಿಕ ಸಂದರ್ಭದಲ್ಲಿ ಪದಕಾರರು ಮತ್ತು ತತ್ವಪದ ಹಾಡುಗಾರರನ್ನು ಒಂದೇ ಆಗಿ ನೋಡಲಾಗುತ್ತಿದೆ. ಆದರೆ ತತ್ವಪದಕಾರರು ಮತ್ತು ತತ್ವಪದ ಹಾಡುವವರು ಬೇರೆ ಬೇರೆ. ಈಗಾಗಲೇ ಇರುವ, ತತ್ವಪದ ಹಾಡುಗಳನ್ನು ಕಲಿತು ಹಾಡುವವರನ್ನೇ(ಗಾಯಕರನ್ನೇ) ತತ್ವಪದಕಾರರು ಎಂದು ಬಿಂಬಿಸಲಾಗುತ್ತಿದೆ. ಮಾರೆಪ್ಪ, ಮಾರೆಪ್ಪ ಚೆನ್ನದಾಸರನ್ನು ಹೀಗೆ ಕಾಣಲಾಗುತ್ತಿದೆ. ಇವರು ಹಾಡಿರುವ ಎಚ್.ಎಲ್.ನಾಗೇಗೌಡ ಅವರು ಸಂಪಾದಿಸಿರುವ 'ಹಾವು ತುಳಿದೇನೆ' ಸಂಕಲನದ ಬಹುತೇಕ ಹಾಡುಗಳೆಲ್ಲ ಈಗಾಗಲೇ ಶರೀಫರ, ಪುರಂದರದಾಸರ, ನೀರಲಕೇರಿ ಬಸವಲಿಂಗ ಮುಂತಾದವರ ಹಾಡುಗಳೆಂದು ಗುರುತಿಸಿದಂತವುಗಳೇ ಆಗಿವೆ.

ತತ್ವಪದಗಳನ್ನು ರಚಿಸಿದವರು ಇದ್ದಾರೆ. ಸ್ವತಃ ರಚಿಸಿ ಹಾಡುವ ಗಾಯಕ ತತ್ವಪದಕಾರರು ಇದ್ದಾರೆ. ಬೇರೆಯವರ ಹಾಡುಗಳನ್ನು ಕಲಿತು ಹಾಡುವ ತತ್ವಪದ ಹಾಡುಗಾರರು ಇದ್ದಾರೆ. ಅಂದರೆ ಸ್ವತಃ ತತ್ವಪದಗಳ ರಚಿಸುವರು. ರಚಿಸಿ ಹಾಡುವವರು, ಬೇರೊಬ್ಬರ ಹಾಡುಗಳ ಕಲಿತು ಹಾಡುವವರು ಇಂಥವರನ್ನು ಕುರಿತ ಭಿನ್ನತೆಗಳನ್ನು ಸರಿಯಾಗಿ ಗುರುತಿಸಿ ಅಧ್ಯಯನ ಮಾಡಬೇಕಾಗಿದೆ.

**ಅಧ್ಯಯನದ ಮಿತಿಗಳು**

ಯಾವುದೇ ಅಧ್ಯಯನಕ್ಕೆ ಅದರದ್ದೇ ಆದ ವ್ಯಾಪ್ತಿ ಇರುತ್ತದೆ. ಈ ವ್ಯಾಪ್ತಿ ಇದೆ ಎಂದಾಗ ಸಹಜವಾಗಿಯೇ ಈ ಅಧ್ಯಯನಕ್ಕೊಂದು ಮಿತಿಯೂ ಇರುತ್ತದೆ. ಪ್ರಸ್ತುತ ಅಧ್ಯಯನವೂ ಇದಕ್ಕೆ ಹೊರತಲ್ಲ.

ತತ್ವಪದಕಾರರನ್ನು ಕುರಿತು ಸೃಷ್ಟಿಯಾದ ಪುರಾಣ, ಪವಾಡ, ಚರಿತ್ರೆ, ಲೀಲೆಯ ಕೃತಿಗಳನ್ನು ಇಲ್ಲಿ ಸಮೀಕ್ಷಿಸಿಲ್ಲ. ಇದು ಅಧ್ಯಯನದ ಮಿತಿಯಾಗಿದೆ. ಹಾಗೆಯೇ ಅವರನ್ನು ಕುರಿತು ನಾಟಕ, ಕಾದಂಬರಿಗಳು ಸೃಷ್ಟಿಯಾಗಿವೆ. ಈ ಅಧ್ಯಯನದಲ್ಲಿ ಅವನ್ನು ಸಮೀಕ್ಷಿಸಿಲ್ಲ. ಈ ಕೃತಿಗಳನ್ನು ಸಮೀಕ್ಷಿಸುವ ಮೂಲಕ ಆ ಕೃತಿಗಳು ರಚನೆಗೊಂಡ ಹಿನ್ನೆಲೆ, ಕಾಲ, ಪರಿಸರಕ್ಕೆ ಬದ್ಧವಾದ ನೆಲೆಯನ್ನು, ಆಧುನಿಕ ಸಂದರ್ಭದಲ್ಲಿ ಈ ಸಂತರನ್ನು, ಅನುಭಾವಿಗಳನ್ನು ಕುರಿತು ಯಾಕೆ ಕೃತಿಗಳು ರಚನೆಯಾಗುತ್ತವೆ?

ಅವರ ಕಥಾನಕದ ಮೂಲಕ ಅವರು ಬಾಳಿ ಬದುಕಿದ ಚಾರಿತ್ರಿಕ ಸಂಗತಿಗಳನ್ನು ಸಮಕಾಲೀನ ಸಂದರ್ಭಕ್ಕೆ ತಿಳಿಸುವ ಉದ್ದೇಶದಿಂದಲೇ? ಈ ಮುಂತಾದ ಅಂಶಗಳನ್ನು ತಿಳಿಯಲು ಸಾಧ್ಯವಿತ್ತು. ಇದೊಂದು ಅಧ್ಯಯನದ ಮಿತಿಯಾಗಿ ಉಳಿದಿದೆ.

ಈ ಮಹಾಪ್ರಬಂಧ ಅನುಬಂಧದಲ್ಲಿ ಪ್ರಾಸಂಗಿಕವಾಗಿ ಚರ್ಚಿಸಿದ ತತ್ವಪದ ಅಧ್ಯಯನ, ಬೋಧನೆ, ಸಂಗೀತದ ಸಾಧ್ಯತೆಗಳನ್ನು ಹೆಚ್ಚಿನ ಅಧ್ಯಯನಕ್ಕೆ ಒಳಪಡಿಸಬೇಕಾಗಿತ್ತು. ಈಗ ಪಡೆದದ್ದಕ್ಕಿಂತ ಭಿನ್ನವಾದ ಫಲಿತಗಳನ್ನು ಪಡೆಯಬಹುದಿತ್ತು. ಅಧ್ಯಯನದಲ್ಲಿ ಇದೂ ಒಂದು ಮಿತಿಯಾಗಿ ಕಾಣಿಸಿದೆ.

# ಅನುಬಂಧಗಳು

೧. ತತ್ವಪದಗಳ ಅಧ್ಯಯನ ಕುರಿತ ಪ್ರಶ್ನಾವಳಿಯ ವಿಶ್ಲೇಷಣೆ

೨. ತತ್ವಪದ ಸಾಹಿತ್ಯ ಅಧ್ಯಯನಗಳ ಸೂಚಿ

೩. ತತ್ವಪದಕಾರರ ಸಂಕ್ಷಿಪ್ತ ಮಾಹಿತಿ ಸೂಚಿ

೪. ಆಕರ ಗ್ರಂಥಗಳು

ಅನುಬಂಧ ಒಂದು

# ತತ್ವಪದ ಸಾಹಿತ್ಯ ಕಲಿಕೆ, ಬೋಧನೆ ಮತ್ತು ಹಾಡುವ ಕುರಿತ ಕ್ಷೇತ್ರಕಾರ್ಯದ ವಿವರಗಳು

ಶಿಕ್ಷಣದ(ವಿವಿಧ) ಅನೇಕ ಹಂತಗಳಲ್ಲಿ ಭಾಷಾ ಪಠ್ಯಕ್ರಮದ ಭಾಗವಾಗಿ ಸಾಹಿತ್ಯ ಕೃತಿಗಳನ್ನು ಬೋಧಿಸುವ ಪರಿಪಾಟ ಒಂದೂವರೆ ಶತಮಾನದಿಂದಲೂ ಬೆಳೆದು ಬಂದಿದೆ. ಈ ಹಿನ್ನೆಲೆಯಲ್ಲಿ ಇತ್ತೀಚಿನ ವರ್ಷಗಳಿಂದ ಆಯ್ದ ತತ್ವಪದಗಳ ಸಾಹಿತ್ಯ ಪಠ್ಯವಾಗಿ, ಬೋಧನಾ ಕ್ರಮದ ಭಾಗವಾಗಿ ಸೇರುತ್ತಾ ಬಂದಿವೆ. ಸಾಹಿತ್ಯವನ್ನು ವಿಶೇಷ(ಐಚ್ಛಿಕ) ವಿಷಯವನ್ನಾಗಿ ಅಧ್ಯಯನ ಮಾಡುವ ವಿದ್ಯಾರ್ಥಿಗಳಿಗೆ ತರಗತಿಗಳಲ್ಲಿ ಬೋಧಿಸುವ ಕ್ರಮ ಈಗಲೂ ಜಾರಿಯಲ್ಲಿದೆ. ವಿಮರ್ಶೆಯ ಕ್ಷೇತ್ರದಲ್ಲಿ ನಡೆಯುವ ಸಾಹಿತ್ಯ ಅಧ್ಯಯನ ಕ್ರಮ ಹಾಗೂ ಶಿಕ್ಷಣದ ಭಾಗವಾಗಿ ನಡೆಯುವ ಸಾಹಿತ್ಯ ಬೋಧನೆ, ಈ ಎರಡರ ನಡುವಿನ ಸಂಬಂಧದ ಸ್ವರೂಪ ಕುತೂಹಲಕರವಾದುದು ಮತ್ತು ಪ್ರತ್ಯೇಕ ಅಧ್ಯಯನಕ್ಕೆ ಒತ್ತಾಯಿಸುವಂತದ್ದು ಆಗಿದೆ. ಈ ಹಿನ್ನೆಲೆಯಲ್ಲಿ ತತ್ವಪದದ ಬೋಧನೆ ಮತ್ತು ಕಲಿಕೆ ಯಾವ ನೆಲೆಯಲ್ಲಿ ಸಾಗಿದೆ ಮತ್ತು ಸಾಗುತ್ತಿದೆ ಎಂಬುದನ್ನು ಅರಿಯುವ, ಇದರ ಜೊತೆಗೆ ಇವುಗಳ ಸಂಗೀತ ಸ್ವರೂಪ ಮುಂತಾದವುಗಳನ್ನು ತಿಳಿಯುವ ಪ್ರಯತ್ನ ಮಾಡಲಾಗಿದೆ. ಇದು ನಿಬಂಧದ ಮುಖ್ಯ ಆಸಕ್ತಿಯ ಕ್ಷೇತ್ರದಿಂದ ಹೊರಗುಳಿಯುವಂತೆ ತೋರಿದರೂ ಇದೂ ಕೂಡ ಅಧ್ಯಯನದ ಕೂತೂಹಲದ ಭಾಗವೆಂದು ಭಾವಿಸಲಾಗಿದೆ.

## ಅಧ್ಯಯನ ಕ್ರಮ

ಇದೊಂದು ಕ್ಷೇತ್ರಾಧಾರಿತ ಅಧ್ಯಯನ. ತರಗತಿಗಳಲ್ಲಿ ಕನ್ನಡವನ್ನು ವಿಶೇಷ(ಐಚ್ಛಿಕ) ವಿಷಯವನ್ನಾಗಿ ಓದಿದ ವಿದ್ಯಾರ್ಥಿಗಳನ್ನು ಈ ಕ್ಷೇತ್ರಾಧ್ಯಾಯನಕ್ಕೆ ಆಯ್ದುಕೊಳ್ಳಲಾಗಿದೆ. ಅಂದರೆ 'ತತ್ವಪದ ಸಾಹಿತ್ಯ'ವನ್ನು ಓದಿದ ವಿದ್ಯಾರ್ಥಿಗಳಿಗೆ ಮಾತ್ರ ಪ್ರಶ್ನಾವಳಿಯನ್ನು ವಿತರಿಸಿ ಅಭಿಪ್ರಾಯ ಪಡೆಯಲಾಗಿದೆ. ಇಲ್ಲಿ ಬಿ.ಎ ಮತ್ತು ಎಂ.ಎ ಪದವಿ ವಿದ್ಯಾರ್ಥಿಗಳಿಗೆ ಸಮಾನವಾದ ಒಂದೇ ರೀತಿಯಾದ ಪ್ರಶ್ನೆಗಳನ್ನು ಕೇಳಲಾಗಿದೆ. ವಿದ್ಯಾರ್ಥಿಗಳ ಪೂರ್ವ ಸಿದ್ಧತೆಗಳನ್ನು ಸಮಾನವಾಗಿ ತೆಗೆದುಕೊಳ್ಳಲಾಗಿದೆ. ಅವು ಹೀಗಿವೆ.

೧. ವಿದ್ಯಾರ್ಥಿನಿ ಹಾಗೂ ವಿದ್ಯಾರ್ಥಿಗಳ ಸಂಖ್ಯೆ ಸಾಧ್ಯವಿದ್ದಷ್ಟು ಸಮನಾಗಿರುವುದು.

೨. ಬೇರೆ ಬೇರೆ ತರಗತಿಗಳಲ್ಲಿ(ಬಿ.ಎ ಮತ್ತು ಎಂ.ಎ) ಅಧ್ಯಯನ ಮಾಡುವ ವಿದ್ಯಾರ್ಥಿಗಳ ಸಂಖ್ಯೆ ಸಾಧ್ಯವಾದಷ್ಟು ಸಮನಾಗಿರುವಂತೆ ನೋಡುವುದು.

೩. ನಗರ ಪ್ರದೇಶ ಮತ್ತು ಗ್ರಾಮಾಂತರ ಪ್ರದೇಶಗಳ ವಿದ್ಯಾರ್ಥಿಗಳೆನ್ನದೆ ಸಮಾನವಾಗಿ ನೋಡುವುದು.

ಅಧ್ಯಯನಕ್ಕಾಗಿ ಪ್ರಶ್ನಾವಳಿಯನ್ನು ಸಿದ್ಧಪಡಿಸಲಾಗಿದೆ. ಇದು ಮೂರು ಉದ್ದೇಶಗಳಿಂದ ಕೂಡಿದೆ.

೧. ವಿದ್ಯಾರ್ಥಿಗಳಿಗಾಗಿ - ಅಂದರೆ ಕಲಿಯುವವರಿಗಾಗಿ

೨. ಕಲಿಸುವವರಿಗಾಗಿ - ಅಂದರೆ ಬೋಧಕರಿಗಾಗಿ

೩. ತತ್ವಪದಗಳ ಹಾಡುವ ಗಾಯಕರ ಕುರಿತು

ವಿದ್ಯಾರ್ಥಿಗಳಿಗೆ ಮತ್ತು ಬೋಧಕರಿಗೆ ಸಿದ್ಧಪಡಿಸಿದ ಪ್ರಶ್ನೆಗಳಲ್ಲಿ ಮೂಲಭೂತ ಸ್ವರೂಪದಲ್ಲಿ ಹೆಚ್ಚಿನ ವ್ಯತ್ಯಾಸಗಳಾಗದಂತೆ ನೋಡಿಕೊಳ್ಳಲಾಗಿದೆ. ವಿದ್ಯಾರ್ಥಿಗಳ ಮತ್ತು ಶಿಕ್ಷಕರ ನಡುವಿನ ವಿಶಿಷ್ಟವಾದ ಸಂಗತಿಗಳನ್ನು ತಿಳಿಯುವ ಉದ್ದೇಶವಿದ್ದಲ್ಲಿ ಮಾತ್ರ ಪ್ರಶ್ನೆಯಲ್ಲಿ ಸ್ವಲ್ಪ ವ್ಯತ್ಯಾಸ ಕಾಣಿಸಬಹುದು. ಹಾಡುವ ಗಾಯಕರಿಗೆ ಬೇರೆಯಾದ ಪ್ರಶ್ನಾವಳಿಯನ್ನು ಮಾಡಿಕೊಳ್ಳಲಾಗಿದೆ.

ಪ್ರಶ್ನಾವಳಿಯಲ್ಲಿ ವಿದ್ಯಾರ್ಥಿಗಳು ಶಿಕ್ಷಕರು ಮತ್ತು ಹಾಡುವ ಗಾಯಕರಿಂದ ಅಭಿಪ್ರಾಯಗಳನ್ನು ಪಡೆದುಕೊಳ್ಳಲು ವಿವಿಧ ಪರ್ಯಾಯ ಉತ್ತರಗಳನ್ನು ಪ್ರಶ್ನೆಯ ಕೆಳಗೆ ನೀಡಲಾಗಿತ್ತು. ಈ ರೀತಿ ಮಾಡುವುದರಿಂದ ಪ್ರತಿಕ್ರಿಯೆಯ ಸ್ವರೂಪವನ್ನು ನಿರ್ದಿಷ್ಟ ಚೌಕಟ್ಟಿನಲ್ಲಿ ಗ್ರಹಿಸಲು ಸಾಧ್ಯವಾಗುವುದು ಎಂದು ತಿಳಿಯಲಾಗಿದೆ.

'ವಿದ್ಯಾರ್ಥಿಗಳ' ಪ್ರಶ್ನಾವಳಿಯಲ್ಲಿ ಪಠ್ಯ ಬೋಧನಾಕ್ರಮ ಹಾಗೂ ಮೌಲ್ಯಮಾಪನ ಈ ಮೂರು ಹಂತಗಳ ಬಗ್ಗೆ 'ಕಲಿಯುವವರಿಗಾಗಿ' ಅವರ ಪ್ರತಿಕ್ರಿಯೆಗಳನ್ನು ಪಡೆಯುವ ಉದ್ದೇಶವಿದೆ. 'ಶಿಕ್ಷಕರ' ಪ್ರಶ್ನಾವಳಿಯಲ್ಲಿ ಇದೇ ಮೂರು ಅಂಶಗಳ ಬಗೆಗೆ 'ಕಲಿಸುವವರಿಗಾಗಿ' ಅವರ ಪ್ರತಿಕ್ರಿಯೆಗಳನ್ನು ತಿಳಿಯಲು ಉದ್ದೇಶಿಸಲಾಗಿದೆ. ಹಾಗೆಯೇ ತತ್ವಪದವನ್ನು ಹಾಡುವ ಗಾಯಕರಿಂದ ಅವುಗಳ ಸಂಗೀತ ಸ್ವರೂಪವನ್ನು ತಿಳಿಯಲು ಯತ್ನಿಸಲಾಗಿದೆ. ಪ್ರಶ್ನಾವಳಿ ಹೀಗಿದೆ.

**೧. ತತ್ವಪದ ಸಾಹಿತ್ಯ ಅಧ್ಯಯನವನ್ನು ಕುರಿತು ಪ್ರಶ್ನಾವಳಿ - 'ವಿದ್ಯಾರ್ಥಿಗಳಿಗಾಗಿ'**

**೧. ನೀವು ಈ ಕೆಳಗಿನ ಸಾಹಿತ್ಯ ಪ್ರಕಾರಗಳಲ್ಲಿ 'ಪಠ್ಯ'ವಾಗಿ ಓದಲು ಇಷ್ಟಪಡುವ 'ಮೂರ'ನ್ನು ಗುರುತಿಸಿ. ಆಯ್ಕೆಯು ಅನುಕ್ರಮದಲ್ಲಿ ಇರಲಿ**

| | | |
|---|---|---|
| ಹಳಗನ್ನಡ ಸಾಹಿತ್ಯ | ಹೊಸಗನ್ನಡ ಕವಿತೆ | ಪ್ರಬಂಧ |
| ವಚನಗಳು | ಹೊಸಗನ್ನಡ ಕಥೆ | ವಿಚಾರ ಸಾಹಿತ್ಯ |
| ದಾಸ ಸಾಹಿತ್ಯ | ಹೊಸಗನ್ನಡ ನಾಟಕ | ಪ್ರವಾಸ ಕಥನ |
| ರಗಳೆ, ಷಟ್ಪದಿ | ಹೊಸಗನ್ನಡ ಕಾದಂಬರಿ | ಜಾನಪದ ಸಾಹಿತ್ಯ |
| ತತ್ವಪದಗಳು | | |

೨. ತತ್ವಪದ ಸಾಹಿತ್ಯವನ್ನು 'ಪಠ್ಯ'ವಾಗಿ ಓದಲು ಇಷ್ಟಪಡುತ್ತೀರಾ? ಹೌದು : ಇಲ್ಲ.

ಅ. ಮೇಲಿನ ಪ್ರಶ್ನೆಗೆ ನಿಮ್ಮ ಉತ್ತರ 'ಹೌದು' ಎಂದಾದರೆ ನೀವು ಈ ಕೆಳಗಿನ ಕಾರಣಗಳಲ್ಲಿ ನಿಮ್ಮ ಆಯ್ಕೆಯ ಅನುಕ್ರಮ ಸೂಚಿಸಿ.

ತತ್ವಪದ ಸಾಹಿತ್ಯ ಓದುವುದು ಇಷ್ಟ. ಏಕೆಂದರೆ

- ಕನ್ನಡ ಸಾಹಿತ್ಯದಲ್ಲಿ ಇದು ಒಂದು ಪ್ರಕಾರದ ಪರಿಚಯವಾಗುತ್ತದೆ.
- ಕನ್ನಡದ ಜೊತೆಗೆ ಬೇರೆ ಬೇರೆ ಭಾಷೆಗಳು ಈ ರಚನೆಗಳಲ್ಲಿ ಸೇರಿರುವಂತದ್ದು ವಿಶೇಷವಾಗಿರುವುದನ್ನು ಅರಿಯಬಹುದು.
- ಕನ್ನಡ ಸಾಹಿತ್ಯ ಪರಂಪರೆಯಲ್ಲಿ ಇದರ ಭಿನ್ನತೆಯ ಪರಿಚಯವಾಗುತ್ತದೆ.
- ಆಧ್ಯಾತ್ಮಿಕ ಮತ್ತು ಜೀವನ ಮೌಲ್ಯಗಳ ಪರಿಚಯವಾಗುತ್ತದೆ.
- ಇತರೆ ಅಂಶಗಳು.

ಅ. ಪ್ರಶ್ನೆಗೆ ನಿಮ್ಮ ಉತ್ತರ 'ಇಲ್ಲ' ಎಂದಾದರೆ, ಈ ಕೆಳಗಿನ ಕಾರಣಗಳಲ್ಲಿ ನಿಮ್ಮ ಆಯ್ಕೆಯ ಅನುಕ್ರಮ ಸೂಚಿಸಿ.

ತತ್ವಪದ ಸಾಹಿತ್ಯ ಓದುವುದು ಇಷ್ಟವಿಲ್ಲ. ಏಕೆಂದರೆ

- ತತ್ವಪದ ಸಾಹಿತ್ಯದ ಓದು ಕಾಲಹರಣ.
- ಅವುಗಳಲ್ಲಿರುವ ಭಾಷೆ ಬೆರಕೆಯಾದುದು, ಪ್ರಸ್ತುತವಲ್ಲ.
- ಅಲ್ಲಿ ಬರೀ ಅಲೌಕಿಕದ ಮೌಲ್ಯಗಳ ಪ್ರತಿಪಾದನೆ ಇದೆ.
- ಅಲ್ಲಿಯ ಕಾವ್ಯಗಳ ವಸ್ತು ವೈರಾಗ್ಯ, ಜೀವನವೇ ನಶ್ವರ ಎಂದು ಸಾರುತ್ತದೆ. ಇದು ವಾಸ್ತವ ಬದುಕಿಗೆ ದೂರವಾದದ್ದು.
- ಇತರೆ ಕಾರಣಗಳು.

೩. ನೀವು ಓದುವ ತತ್ವಪದ ಸಾಹಿತ್ಯ 'ಪಠ್ಯ'ಗಳಲ್ಲಿನ ಕೊರತೆಗಳೇನು? ಮುಖ್ಯವಾದ ಎರಡನ್ನು ಗುರುತಿಸಿ. (ಅನುಕ್ರಮವಾಗಿ)

- ಶಬ್ದಾರ್ಥ ಸೂಚಿ ಪರಿಪೂರ್ಣವಾಗಿರುವುದಿಲ್ಲ.
- ಕವಿ ಕೃತಿಯ ಬಗೆಗೆ ಟಿಪ್ಪಣಿ, ವಿವರಗಳು ಸಾಲವು.
- ಕಠಿಣ ಪದಗಳ ಆಯ್ಕೆ ಮಾಡಲಾಗಿದೆ.
- ಉತ್ತಮ ಅಭಿರುಚಿ ಮೂಡಿಸುವ ಆಯ್ಕೆ ಇರುವುದಿಲ್ಲ.
- ಇತರೆ ಅಂಶಗಳು

೪. ನೀವು ತರಗತಿಗಳಲ್ಲಿ ತತ್ವಪದ ಸಾಹಿತ್ಯದ ಬೋಧನೆಯಲ್ಲಿ ಅಧ್ಯಾಪಕರಿಂದ ನಿರೀಕ್ಷಿಸುವ ಅಂಶಗಳು ಯಾವುವು? (ನಿಮ್ಮ ಆಯ್ಕೆಯ ಮೂರು ಅಂಶಗಳನ್ನು ಅನುಕ್ರಮದಲ್ಲಿ ಗುರುತಿಸಿ)

- ಪಠ್ಯ/ಪದ್ಯ ಭಾಗವನ್ನು ರಾಗವಾಗಿ ಓದುವುದು.
- ಪದಗಳ ಗೂಢಾರ್ಥವನ್ನು ಬಿಡಿಸಿ ಹೇಳುವುದು.
- ಪ್ರತಿ ಪದಕ್ಕೂ ಅರ್ಥ ಹೇಳುವುದು.
- ಭಾವಾರ್ಥ, ಸಾರಾಂಶವನ್ನು ಹೇಳುವುದು.
- ಟಿಪ್ಪಣಿ ಅಥವಾ ಈ ಕುರಿತ ನೋಟ್ಸ್‌ಗಳನ್ನು ಬರೆಸುವುದು.
- ಈ ಪದ್ಯ ಭಾಗಗಳನ್ನು ಬಳಸಿ ವಾಸ್ತವದ/ನಿತ್ಯಜೀವನದ ಘಟನೆಗಳನ್ನು ವಿಶ್ಲೇಷಿಸುವುದು.
- ಇತರೆ ಅಂಶಗಳು

೫. ನೀವು ಪರೀಕ್ಷೆಯ ಸಿದ್ಧತೆಗೆ ಮಾರುಕಟ್ಟೆಯಲ್ಲಿ ಈ ತತ್ವಪದ ಸಾಹಿತ್ಯ ಕುರಿತು ಬರುವ ನೋಟ್ಸ್ ಬಳಸುತ್ತಿರಾ? ಹೌದು : ಇಲ್ಲ ('ಅ' ಅಥವಾ 'ಬ' ಒಂದನ್ನು ಗುರುತಿಸಿ)

ಅ. ಹೌದು, ಏಕೆಂದರೆ : (ಅನುಕ್ರಮವಾಗಿ ಸೂಚಿಸಿ)

- ತರಗತಿಗಳಲ್ಲಿ ಸಿಗುವ ವಿವರಗಳು ಸಾಲುವುದಿಲ್ಲ.
- ನೋಟ್ಸ್‌ಗಳಲ್ಲಿ ಹೆಚ್ಚಿನ ಉಪಯುಕ್ತ ಮಾಹಿತಿಗಳು ಇರುತ್ತವೆ.
- ಪರೀಕ್ಷೆಯ ಪ್ರಶ್ನೆ ಪತ್ರಿಕೆಯ ಮಾದರಿಗೆ ಉತ್ತರಗಳು ಇರುತ್ತವೆ.

ಬ. ಇಲ್ಲ, ಏಕೆಂದರೆ : (ಅನುಕ್ರಮವಾಗಿ ಸೂಚಿಸಿ)

- ಎಲ್ಲ ವಿವರಗಳು ತರಗತಿಗಳಲ್ಲೇ ದೊರೆಯುತ್ತವೆ.
- ನೋಟ್ಸ್ ನಮ್ಮನ್ನು ಸ್ವತಂತ್ರವಾಗಿ ಆಲೋಚಿಸಲು ಬಿಡುವುದಿಲ್ಲ.
- ಪರೀಕ್ಷೆಗೆ ಹೆಚ್ಚಿನ ಒತ್ತನ್ನು ಕೊಟ್ಟಂತಾಗುತ್ತದೆ.

೬. ತತ್ವಪದ ಸಾಹಿತ್ಯದ 'ಪಠ್ಯ'ವನ್ನು ಕುರಿತ ಪ್ರಶ್ನೆಗಳಲ್ಲಿ ಕಠಿಣವಾದ ಭಾಗ ಯಾವುದು? ನಿಮ್ಮ ಆಯ್ಕೆಯ ಮೂರು ಅಂಶಗಳನ್ನು ಅನುಕ್ರಮದಲ್ಲಿ ಸೂಚಿಸಿ.

- ಅನ್ವಯಾನುಸಾರ ಅರ್ಥವನ್ನು ಬರೆಯುವುದು.
- ಭಾವಾರ್ಥವನ್ನು ಬರೆಯುವುದು.
- ಕಠಿಣ ಪದಗಳ ಅರ್ಥ ಬರೆಯುವುದು.
- ಸಂದರ್ಭಾನುಸಾರ ವಿವರಿಸುವ ಭಾಗ.
- ವಿಮರ್ಶಾ ರೂಪದ ಟಿಪ್ಪಣಿಗಳನ್ನು ಬರೆಯುವುದು.

೭. ನೀವು ಓದಿರುವ ತತ್ವಪದ ಕವಿಗಳಲ್ಲಿ ಮೂವರನ್ನು ಹಾಗೂ ಅವರ ಇಷ್ಟವಾದ ಕಾವ್ಯದ/ಪದದ ಶೀರ್ಷಿಕೆಯನ್ನು ಹೆಸರಿಸಿ. (ಅನುಕ್ರಮದಲ್ಲಿ ಸೂಚಿಸಿ)

| ಕವಿಗಳು | ಪದಗಳ ಶೀರ್ಷಿಕೆ |
|---|---|
| ೧ | ೧ |
| ೨ | ೨ |
| ೩ | ೩ |

೧ ಸ್ವಂತ ವಿವರ

ಹೆಸರು :

ತರಗತಿ :

ಕಾಲೇಜು :

ಊರು :

ಅಧ್ಯಯನ

ಈ ಕ್ಷೇತ್ರಕಾರ್ಯಾಧ್ಯಯನದಲ್ಲಿ ಭಾಗಿಯಾದ ವಿದ್ಯಾರ್ಥಿಗಳು ಈ ಕೆಳಕಂಡ ಕಾಲೇಜುಗಳವರು.

೧. ಗಂಗಾವತಿ ಭಾಗ್ಯಮ್ಮ-ಗ್ರಾಮೀಣ ಮಹಾವಿದ್ಯಾಲಯ; ಹೂವಿನ ಹಡಗಲಿ

೨. ನೃಪತುಂಗ ಪ್ರಥಮ ದರ್ಜೆ ಮಹಾವಿದ್ಯಾಲಯ; ಸೇಡಂ

೩. ಎಸ್.ಇ.ಎಸ್.ಮಹಾವಿದ್ಯಾಲಯ; ಸಂಡೂರು

೪. ಸರಕಾರಿ ಪ್ರಥಮ ದರ್ಜೆ ಕಾಲೇಜ್; ಕೂಡ್ಲಿಗಿ

೫. ಸರಳಾದೇವಿ, ಸರಕಾರಿ ಪ್ರಥಮ ದರ್ಜೆ ಮಹಾವಿದ್ಯಾಲಯ; ಬಳ್ಳಾರಿ

೬. ಎಸ್.ಕೆ.ಎನ್.ಜಿ.ಸರಕಾರಿ ಪ್ರಥಮ ದರ್ಜೆ ಕಾಲೇಜ್; ಗಂಗಾವತಿ

೭. ಕನ್ನಡ ವಿಶ್ವವಿದ್ಯಾಲಯ, ಹಂಪಿ(ಎಂ.ಎ); ಹಂಪಿ, ವಿದ್ಯಾರಣ್ಯ

೮. ಸ್ನಾತಕೋತ್ತರ ಕೇಂದ್ರ; ನಂದಿಹಳ್ಳಿ, ಸಂಡೂರು

೯. ಸ್ನಾತಕೋತ್ತರ ಕೇಂದ್ರ; ರಾಯಚೂರು, ಯರಗೇರಾ

ಈ ಕೆಲವು ಕಾಲೇಜುಗಳಿಗೆ ಖುದ್ದು ಬೇಟಿ ನೀಡಿ ಪ್ರಶ್ನಾವಳಿಗಳನ್ನು ವಿದ್ಯಾರ್ಥಿಗಳಿಗೆ ವಿತರಿಸಿ, ಅವರಿಂದ ಉತ್ತರಗಳನ್ನು ಪಡೆದುಕೊಳ್ಳಲಾಗಿದೆ. ಮತ್ತೆ ಕೆಲವು ಕಾಲೇಜುಗಳ ಅಧ್ಯಾಪಕರಿಗೆ ಅಂಚೆ ಮೂಲಕ ಪ್ರಶ್ನಾವಳಿಗಳನ್ನು ಕಳುಹಿಸಿ ಅವರ ನೆರವಿನಿಂದ ವಿದ್ಯಾರ್ಥಿಗಳಿಗೆ ವಿತರಿಸಿ, ಅವರಿಂದ ಉತ್ತರಗಳನ್ನು ಪಡೆಯಲಾಗಿದೆ. ಈ ಕುರಿತ ಸಾಮಾನ್ಯ ವಿವರಗಳು

೧. ಇದರಲ್ಲಿ ಭಾಗಿಯಾದ ಒಟ್ಟು ವಿದ್ಯಾರ್ಥಿಗಳ ಸಂಖ್ಯೆ : ೧೦೦

೨. ಇದರಲ್ಲಿ ಬಿ.ಎ ಪದವಿ ವಿದ್ಯಾರ್ಥಿಗಳ ಸಂಖ್ಯೆ : ೫೭

ಎಂ.ಎ. ಪದವಿ ವಿದ್ಯಾರ್ಥಿಗಳ ಸಂಖ್ಯೆ : ೪೩

೩. ಒಟ್ಟು ವಿದ್ಯಾರ್ಥಿನಿಯರ ಸಂಖ್ಯೆ : ೩೯

ಒಟ್ಟು ವಿದ್ಯಾರ್ಥಿಗಳ ಸಂಖ್ಯೆ : ೬೧

೪. ಬಿ.ಎ. ವಿದ್ಯಾರ್ಥಿನಿಯರ ಸಂಖ್ಯೆ : ೨೯, ವಿದ್ಯಾರ್ಥಿಗಳ ಸಂಖ್ಯೆ : ೨೮

೫. ಎಂ.ಎ. ವಿದ್ಯಾರ್ಥಿನಿಯರ ಸಂಖ್ಯೆ : ೧೦, ವಿದ್ಯಾರ್ಥಿಗಳ ಸಂಖ್ಯೆ : ೩೩

## ಅಧ್ಯಯನದ ವಿಶ್ಲೇಷಣೆ

ಪ್ರಶ್ನಾವಳಿಯಲ್ಲಿ ತತ್ವಪದ ಪಠ್ಯವನ್ನು ಕುರಿತು ವಿದ್ಯಾರ್ಥಿಗಳ ಅಭಿಪ್ರಾಯಗಳನ್ನು ತಿಳಿಯುವ ಮೂರು ಪ್ರಶ್ನೆಗಳಿವೆ(ಪ್ರಶ್ನೆ ೧, ೨, ೩). ಅವುಗಳಲ್ಲಿ ಮೊದಲನೆಯದು ಸಾಹಿತ್ಯದ ವಿವಿಧ ಪ್ರಕಾರಗಳಲ್ಲಿ ಪಠ್ಯವನ್ನಾಗಿ ಓದಲು ವಿದ್ಯಾರ್ಥಿಗಳು ಅಪೇಕ್ಷಿಸುವ ಆಯ್ಕೆಯ ಪ್ರಕಾರಗಳನ್ನು ಕುರಿತು ಕೇಳಲಾಗಿದೆ. 'ತತ್ವಪದ ಸಾಹಿತ್ಯ'ವನ್ನು 'ಪಠ್ಯ'ವನ್ನಾಗಿ ಓದಲು ಒಟ್ಟಾಗಿ ಈ ವಿದ್ಯಾರ್ಥಿಗಳು ತಮ್ಮ ಪ್ರಥಮ ಪ್ರಾಶಸ್ತ್ಯವನ್ನು ನೀಡಿಲ್ಲ.

ಇಲ್ಲಿ ಕೇಳಲಾದ ಅನೇಕ ಪ್ರಕಾರಗಳು ಪ್ರಥಮ ಪ್ರಾಶಸ್ತ್ಯವನ್ನು ಪಡೆದಿವೆ. ಅವುಗಳಲ್ಲಿ ಅನುಕ್ರವಾಗಿ, ಹಳೆಗನ್ನಡ ಸಾಹಿತ್ಯ(೩೦), ವಚನಗಳು(೨೬), ತತ್ವಪದಗಳು(೧೦), ಜಾನಪದ ಸಾಹಿತ್ಯ(೦೭), ಕಂಸದಲ್ಲಿ ಕೊಟ್ಟಿರುವ ಅಂಕಿಗಳು ಆ ಪ್ರಕಾರಗಳನ್ನು ಆಯ್ದುಕೊಳ್ಳಲಾಗಿರುವ/ಬಯಸುವ ವಿದ್ಯಾರ್ಥಿಗಳ ಸಂಖ್ಯೆಯನ್ನು ಸೂಚಿಸುತ್ತದೆ. ವಿದ್ಯಾರ್ಥಿಗಳ ಒಟ್ಟು ಆಯ್ಕೆ ಸಂಖ್ಯೆ ಕನಿಷ್ಠ ೫ ನ್ನು ಇಲ್ಲಿ ಪರಿಗಣಿಸಿಲ್ಲ. ೫ಕ್ಕಿಂತ ಹೆಚ್ಚಿನ ಆಯ್ಕೆಗಳನ್ನು ಪರಿಗಣಿಸಲಾಗಿದೆ.

ಎರಡನೆಯ ಪ್ರಾಶಸ್ತ್ಯದಲ್ಲಿ ಹೊಸಗನ್ನಡ ಕಾದಂಬರಿ(೧೬), ವಚನಗಳು(೧೨), ಜಾನಪದ ಸಾಹಿತ್ಯ (೧೧), ಹೊಸಗನ್ನಡ ಕಥೆ(೧೧), ಹೊಸಗನ್ನಡ ಕವಿತೆ (೧೦), ತತ್ವಪದಗಳು(೦೮), ರಗಳೆ ಷಟ್ಪದಿ(೦೮), ಹೊಸಗನ್ನಡ ನಾಟಕ (೦೭), ಈ ಪ್ರಕಾರಗಳಿವೆ.

ಮೂರನೆಯ ಪ್ರಾಶಸ್ತ್ಯದಲ್ಲಿ ಜಾನಪದ ಸಾಹಿತ್ಯ (೨೯), ತತ್ವಪದಗಳು (೧೦), ಹೊಸಗನ್ನಡ ಕಾದಂಬರಿ (೧೦), ಪ್ರವಾಸ ಕಥನ (೧೦), ಹಳಗನ್ನಡ ಸಾಹಿತ್ಯ (೦೮) ಮತ್ತು ರಗಳೆ ಷಟ್ಪದಿ (೦೭) ಇವೆ.

ಪ್ರಶ್ನಾವಳಿ ಎರಡರಲ್ಲಿ ನೇರವಾಗಿ ತತ್ವಪದ ಸಾಹಿತ್ಯವನ್ನು ಪಠ್ಯವಾಗಿ ಓದಲು ವಿದ್ಯಾರ್ಥಿಗಳಿಗಿರುವ ಆಸಕ್ತಿಯನ್ನು ಕುರಿತು ಇದೆ. ಆಸಕ್ತಿ 'ಇದೆ' ಎಂದವರ ಸಂಖ್ಯೆ : ೮೪. ಆಸಕ್ತಿ 'ಇಲ್ಲ' ಎಂದವರ ಸಂಖ್ಯೆ : ೧೬. ಇಷ್ಟಪಟ್ಟವರನ್ನು ಹಾಗೆ ಇಷ್ಟಪಡಲು ಇರುವ ಕಾರಣಗಳೇನು ಎಂದು ಪ್ರಶ್ನೆಯ ಮುಂದಿನ ಭಾಗ ಕೇಳುತ್ತದೆ. ಇದರಲ್ಲಿ ಐದು ಕಾರಣಗಳನ್ನು ಕ್ರಮವಾಗಿ ಸೂಚಿಸಲು ಕೇಳಿಕೊಳ್ಳಲಾಗಿತ್ತು. ಹೆಚ್ಚಿನ ವಿದ್ಯಾರ್ಥಿಗಳು ಮೂರು ಅಯ್ಕೆಗಳನ್ನು ಮಾತ್ರವೇ ಸೂಚಿಸಿದ್ದಾರೆ. ಅವರ ಆಯ್ಕೆಗಳ ಅನುಕ್ರಮ ಹೀಗಿದೆ : ಪ್ರಥಮ ಆಯ್ಕೆಯಲ್ಲಿ 'ತತ್ವಪದ ಸಾಹಿತ್ಯವನ್ನು' ಓದುವುದರಿಂದ ಕನ್ನಡ ಸಾಹಿತ್ಯದಲ್ಲಿ ಇದೂ ಒಂದು ಪ್ರಕಾರದ ಪರಿಚಯವಾಗುತ್ತದೆ(೩೫). ಎರಡನೆಯ ಕಾರಣದ ಆಯ್ಕೆಯಲ್ಲಿ ಆಧ್ಯಾತ್ಮಿಕ ಮತ್ತು ಜೀವನ ಮೌಲ್ಯಗಳ ಪರಿಚಯವಾಗುತ್ತದೆ(೨೮). ಮತ್ತು ಕನ್ನಡ ಸಾಹಿತ್ಯ ಪರಂಪರೆಯಲ್ಲಿ ಇದರ ಭಿನ್ನತೆಯ ಪರಿಚಯವಾಗುತ್ತದೆ(೨೮). ಇವೆರಡೂ ಕಾರಣಗಳು ಸಮ ಪ್ರಮಾಣದ ಪ್ರಾಶಸ್ತ್ಯವನ್ನು

ಪಡೆದಿವೆ. ಮೂರನೆಯ ಕಾರಣದ ಆಯ್ಕೆಯಲ್ಲಿಯೂ ಆಧ್ಯಾತ್ಮಿಕ ಮತ್ತು ಜೀವನ ಮೌಲ್ಯದ ಪರಿಚಯವಾಗುತ್ತದೆ(೧೬). ಹಾಗೆಯೇ ಕನ್ನಡ ಸಾಹಿತ್ಯ ಪರಂಪರೆಯಲ್ಲಿ ಇದರ ಭಿನ್ನತೆಯ ಪರಿಚಯವಾಗುತ್ತದೆ(೧೬). ಮತ್ತು ಕನ್ನಡದ ಜೊತೆಗೆ ಬೇರೆ ಬೇರೆ ಭಾಷೆಗಳು ಈ ರಚನೆಗಳಲ್ಲಿ ಸೇರಿರುವಂತದು ವಿಶೇಷವಾಗಿರುವುದನ್ನು ಅರಿಯಬಹುದು ಎಂಬ ಕಾರಣವೂ ಸೂಚಿಸಲಾಗಿದೆ.

ಈ ವಿವರಣೆಯಿಂದಾಗಿ 'ತತ್ವಪದ ಸಾಹಿತ್ಯ'ವನ್ನು ಓದಲು ಇಷ್ಟಪಡುವವರು ಸಾಹಿತ್ಯಕ - ಭಾಷಿಕ ಕಾರಣಗಳಿಗಾಗಿಯೇ ತಮ್ಮ ಆಯ್ಕೆಯನ್ನು ಸೂಚಿಸಿರುವುದಲ್ಲದೇ, ಆಧ್ಯಾತ್ಮಿಕ ಮತ್ತು ಜೀವನ ಮೌಲ್ಯಗಳ ಪರಿಚಯವಾಗುತ್ತದೆ ಎಂಬ ಕಾರಣವು ಇವರ ಸೂಚಿತ ಆಯ್ಕೆಯಲ್ಲಿ ಬಹಳ ಮುಖ್ಯವಾಗಿದೆ.

ಪಠ್ಯಕ್ರಮದ ಭಾಗವಾಗಿ 'ತತ್ವಪದ ಸಾಹಿತ್ಯ'ವನ್ನು ಓದಲು ಇಷ್ಟಪಡದವರು/ಆಸಕ್ತಿ ಇಲ್ಲದವರು(೧೮) ಹಾಗೆ ಇಷ್ಟಪಡದಿರಲು ಕಾರಣಗಳನ್ನು ತಮ್ಮ ಆಯ್ಕೆಯಲ್ಲಿ ಸೂಚಿಸಿದ್ದಾರೆ. ಪ್ರಥಮ ಆಯ್ಕೆಯಲ್ಲಿ 'ತತ್ವಪದ ಸಾಹಿತ್ಯ ಪಠ್ಯದಲ್ಲಿ ವಸ್ತು ವೈರಾಗ್ಯವಾಗಿದೆ. ಜೀವನ ನಶ್ವರ ಎಂದು ಸಾರುತ್ತದೆ. ಇದು ವಾಸ್ತವ ಬದುಕಿಗೆ ದೂರವಾದದ್ದು (೯). ಜೊತೆಗೆ 'ಅಲ್ಲಿ ಬರೀ ಅಲೌಕಿಕದ ಮೌಲ್ಯಗಳ ಪ್ರತಿಪಾದನೆ ಇದೆ'(೮) ಎಂಬ ಕಾರಣಗಳು ಪ್ರಥಮ ಪ್ರಾಶಸ್ತ್ಯವನ್ನು ಪಡೆದಿವೆ. ಎರಡನೆಯ ಆಯ್ಕೆಯಲ್ಲಿ ಇವೆರಡ ಜೊತೆಗೆ 'ತತ್ವಪದ ಸಾಹಿತ್ಯದ ಓದು ಕಾಲಹರಣ (೪,೫,೪) ಎಂಬ ಕಾರಣವೂ ಸೇರಿಕೊಂಡಿದೆ. ಮೂರನೆಯ ಆಯ್ಕೆಯಲ್ಲಿ 'ತತ್ವಪದ ಸಾಹಿತ್ಯದಲ್ಲಿರುವ ಭಾಷೆ ಬೆರಕೆಯಾದುದು'(೩) ಎಂಬ ಕಾರಣವನ್ನು ಸೂಚಿಸಲಾಗಿದೆ.

ಈ ವಿವರಗಳಿಂದ ತತ್ವಪದ ಸಾಹಿತ್ಯವನ್ನು ಓದಲು ಇಷ್ಟಪಡದವರಲ್ಲಿ ವಾಸ್ತವವಾದಿ ದೃಷ್ಟಿಕೋನವೇ ಎದ್ದುಕಾಣುತ್ತದೆ. ಇದು ನಮ್ಮ ಶಿಕ್ಷಣ ಕ್ರಮದ ಬದಲಾವಣೆಯನ್ನು ಸೂಚಿಸುವ ಮುಖ್ಯವಾದ ಆಯಾಮವಾಗಿದೆ ಎನಿಸುತ್ತದೆ.

ಮೂರನೆಯ ಪ್ರಶ್ನೆಯಲ್ಲಿ ಪಠ್ಯಗಳಲ್ಲಿ ಇರುವ ಕೊರತೆಗಳನ್ನು ಸೂಚಿಸಲು ಕೇಳಲಾಗಿತ್ತು. ಇಲ್ಲಿಯೂ ಕೊರತೆಗಳನ್ನು ಪ್ರಶ್ನೆಗಳ ಕೆಳಗೆ ನೀಡಿ ಅವುಗಳಲ್ಲಿ ಎರಡನ್ನು ಆಯ್ಕೆ ಮಾಡಿ ಅನುಕ್ರಮದಲ್ಲಿ ಸೂಚಿಸಲು ಕೇಳಲಾಗಿತ್ತು. ಪ್ರಥಮ ಆಯ್ಕೆಯಲ್ಲಿ 'ಕವಿ ಕೃತಿಯ ಬಗೆಗೆ ಟಿಪ್ಪಣಿ ವಿವರಗಳು ಸಾಲವು(೩೪) ಎಂಬ ಕೊರತೆಯನ್ನು ಹಾಗೆಯೇ 'ಶಬ್ದಾರ್ಥ ಸೂಚಿ ಪರಿಪೂರ್ಣವಾಗಿರುವುದಿಲ್ಲ'(೩೩) ಎಂಬುದನ್ನು ಹೇಳಿದರೆ, ದ್ವಿತೀಯ ಆಯ್ಕೆಯಲ್ಲಿ ಇವೇ ಆಯ್ಕೆಗಳನ್ನು(೨೦) ಸಮಪ್ರಮಾಣದಲ್ಲಿ ಸೂಚಿಸಿದ್ದಾರೆ. 'ಉತ್ತಮ ಅಭಿರುಚಿ ಮೂಡಿಸುವ ಆಯ್ಕೆ ಇರುವುದಿಲ್ಲ'(೨೭) 'ಕಠಿಣ ಪದಗಳ ಆಯ್ಕೆ ಮಾಡಲಾಗಿದೆ'(೨೩) ಮತ್ತು 'ಕವಿಕೃತಿಯ ಬಗೆಗೆ ಟಿಪ್ಪಣಿಗಳ ಸಾಲವು'(೨೧) ಎಂಬ ಕೊರತೆಗಳನ್ನು ಸಾಕಷ್ಟು ವಿದ್ಯಾರ್ಥಿಗಳು ಸೂಚಿಸಿದ್ದಾರೆ.

ಈ ಆಯ್ಕೆಗಳು ವಿದ್ಯಾರ್ಥಿಗಳ ದೃಷ್ಟಿಯಿಂದ, ಪಠ್ಯಕ್ರಮದಲ್ಲಿ ಪದ್ಯಭಾಗಗಳನ್ನು ಅಳವಡಿಸುವಲ್ಲಿ ನಡೆಸಬೇಕಾದ ಪೂರ್ವಸಿದ್ಧತೆ ಮತ್ತು ಎಚ್ಚರ ವಹಿಸಬೇಕಾದ ಕುರಿತು ಮರುಚಿಂತನೆ ಮಾಡಬೇಕಾದ ಅವಶ್ಯಕತೆ ಇದೆ ಎಂಬುದನ್ನು ತೋರಿಸುತ್ತಿದೆ.

ನಾಲ್ಕು ಮತ್ತು ಐದನೆಯ ಪ್ರಶ್ನೆಗಳು 'ಬೋಧನೆಯ-ಕಲಿಕೆಯ' ಕ್ರಮವನ್ನು ಕುರಿತು ಕೇಳಲಾದ ಪ್ರಶ್ನೆಗಳು. 'ತರಗತಿಗಳಲ್ಲಿ ತತ್ವಪದ ಸಾಹಿತ್ಯದ ಬೋಧನೆಯಲ್ಲಿ ಅಧ್ಯಾಪಕರಿಂದ ವಿದ್ಯಾರ್ಥಿಗಳು ಏನನ್ನು ನಿರೀಕ್ಷಿಸುತ್ತಾರೆ' ಎಂಬ ಸಂಗತಿ ಈ ನಾಲ್ಕನೆಯ ಪ್ರಶ್ನೆಯ ಮುಖ್ಯ ವಿಷಯ. ಇಲ್ಲಿ ಆಯ್ಕೆಗಾಗಿ ಏಳು ಉತ್ತರಗಳನ್ನು ಸೂಚಿಸಿ, ಮೂರನ್ನು ಆಯ್ಕೆ ಮಾಡಲು ಕೇಳಲಾಗಿತ್ತು. ಇವುಗಳಲ್ಲಿ 'ಪಠ್ಯ/ಪದ್ಯ ಭಾಗವನ್ನು ರಾಗವಾಗಿ ಓದುವುದು'(೩೩) 'ಪದಗಳ ಗೂಢಾರ್ಥವನ್ನು ಬಿಡಿಸಿ ಹೇಳುವುದು(೩೪) ಮತ್ತು 'ಭಾವಾರ್ಥ ಸಾರಾಂಶ ಹೇಳುವುದು'(೩೦) ಮುಖ್ಯ ಕೋರಿಕೆಗಳಾಗಿ ಕಂಡುಬಂದಿವೆ. ಹಾಗೆಯೇ 'ಈ ಪದ್ಯಭಾಗಗಳನ್ನು ಬಳಸಿ ವಾಸ್ತವದ/ನಿತ್ಯಜೀವನದ ಘಟನೆಗಳನ್ನು ವಿಶ್ಲೇಷಿಸುವುದು'(೨೧) ಮತ್ತು 'ಪ್ರತಿ ಪದಕ್ಕೂ ಅರ್ಥ ಹೇಳುವುದು'(೧೯), ಎರಡನೆಯ ಸಾಮಾನ್ಯ ಅಪೇಕ್ಷೆಗಳಾಗಿವೆ. 'ಟಿಪ್ಪಣಿ ಅಥವಾ ಈ ಕುರಿತ ನೋಟ್ಸ್‌ಗಳನ್ನು ಬರೆಸುವುದು'(೧೮) ಮೂರನೆಯ ಆಯ್ಕೆಯಲ್ಲಿ ಕೋರಿದ್ದಾರೆ. ಈ ಮೇಲಿನ ಅಂಶಗಳಿಂದ ಪಠ್ಯಕ್ರಮದ ಭಾಗವಾಗಿ ತತ್ವಪದ ಸಾಹಿತ್ಯವನ್ನು ಕಲಿಯುವವರು ಹೆಚ್ಚಾಗಿ ಅಧ್ಯಾಪಕರಿಂದ ವಿಶ್ಲೇಷಣೆಯನ್ನು, ವಿವರಣೆಯನ್ನು ಅಪೇಕ್ಷಿಸುವರೆಂಬ ಅಂಶ ಸ್ಪಷ್ಟವಾಗುತ್ತದೆ.

ಐದನೆಯ ಪ್ರಶ್ನೆ ವಿದ್ಯಾರ್ಥಿಗಳು 'ನೋಟ್ಸ್ ಬಳಸುವ' ಬಗೆಗೆ ಇದೆ. ಪಠ್ಯಪುಸ್ತಕ ಅಧ್ಯಯನಕ್ಕೆ ಅಳವಡಿಸಿದೊಡನೆ ಮಾರುಕಟ್ಟೆಯಲ್ಲಿ ಅದರ ನೋಟ್ಸ್(ಗೈಡ್)ಗಳು ಪ್ರಕಟವಾಗುವ ಪದ್ಧತಿಯೂ ಇದೆ. ಅನೇಕ ವಿದ್ಯಾರ್ಥಿಗಳು ಪಠ್ಯಪುಸ್ತಕಗಳ ಬದಲಾಗಿ ಒಂದೇ ಪುಸ್ತಕವಾಗಿ ದೊರಕುವ ನೋಟ್ಸ್ (ಗೈಡ್)ನ್ನು ತೆಗೆದುಕೊಳ್ಳುವುದುಂಟು. ಈ ಗೈಡ್‌ಗಳ ತಯಾರಿಕೆಯಲ್ಲಿ ಅದರ ಸಿದ್ಧತೆಯಲ್ಲಿ ಅನೇಕ ವರ್ಷ ತರಗತಿಗಳಲ್ಲಿ ಬೋಧಿಸಿದ ಅನುಭವವಿರುವ ಅಧ್ಯಾಪಕರೂ ಸೇರಿರುತ್ತಾರೆ. ಮೌಲ್ಯಮಾಪನದ ಸಂದರ್ಭದಲ್ಲಿ ಮಾದರಿ ಉತ್ತರಗಳಿಗಾಗಿ ಅಧ್ಯಾಪಕರೂ ಈ ಗೈಡ್(ನೋಟ್ಸ್)ಗಳನ್ನು ಆಶ್ರಯಿಸುವ ನಿದರ್ಶನಗಳೂ ಇವೆ.

ಇಂತ ನೋಟ್ಸ್‌ಗಳನ್ನು ಪರೀಕ್ಷೆಯ ಸಿದ್ಧತೆಗಾಗಿ 'ಬಳಸುವುದಿಲ್ಲ' ಎಂದವರ ಸಂಖ್ಯೆ ನಲವತ್ನಾಲ್ಕು(೪೪) ಆಗಿದ್ದರೆ 'ಬಳಸುತ್ತೇವೆ' ಎಂದವರ ಸಂಖ್ಯೆಯೇ ಹೆಚ್ಚು. ಐವತ್ತೆರಡು(೫೭) ಮಂದಿ. ಈ ಪ್ರಮಾಣ ಗಮನಿಸಬೇಕಾಗಿದೆ. ಈ ಸಾಹಿತ್ಯವನ್ನು ಕುರಿತಂತೆ ವಿದ್ಯಾರ್ಥಿಗಳು ಹೆಚ್ಚಾಗಿ ನೋಟ್ಸನ್ನೇ ಬಳಸುವುದು ಕಂಡುಬಂದಿದೆ.

ನೋಟ್ಸ್/ಗೈಡ್ ಬಳಸಲು 'ಬಯಸುವವರು' ಹಾಗೆ ಬಳಸಲು ಅವರಿಗಿರುವ ಕಾರಣಗಳನ್ನು ಸೂಚಿಸಲು ಕೇಳಲಾಗಿತ್ತು. ಮೂರು ಕಾರಣಗಳನ್ನು ನೀಡಿ ಅನುಕ್ರಮವಾಗಿ ಸೂಚಿಸಲು ಕೇಳಲಾಗಿತ್ತು.

ಅನೇಕ ವಿದ್ಯಾರ್ಥಿಗಳು ಇಲ್ಲಿ ಮೂರು ಆಯ್ಕೆಗಳನ್ನು ಸೂಚಿಸಿದ್ದರೂ, ಉತ್ತರಗಳ ಪ್ರಮಾಣದ ದೃಷ್ಟಿಯಿಂದ ಪ್ರಥಮ ಮತ್ತು ದ್ವಿತೀಯ ಆಯ್ಕೆಯ ವಿವರಗಳು ಮಾತ್ರ ಗಮನಾರ್ಹವಾಗಿವೆ. 'ತರಗತಿಗಳಲ್ಲಿ ಸಿಗುವ ವಿವರಗಳು ಸಾಲುವುದಿಲ್ಲ'(೨೬) ಎಂಬ ಕಾರಣದ ಜೊತೆಗೆ 'ನೋಟ್ಸ್‌ಗಳಲ್ಲಿ ಹೆಚ್ಚಿನ ಉಪಯುಕ್ತ ಮಾಹಿತಿಗಳು ಇರುತ್ತವೆ'(೧೬) ಎಂಬ ಕಾರಣಗಳು, ಹಾಗೆಯೇ 'ಪರೀಕ್ಷೆಯ ಪ್ರಶ್ನೆ ಪತ್ರಿಕೆಯ ಮಾದರಿಗೆ ಉತ್ತರಗಳು ಇರುತ್ತವೆ'(೨೧) ಎಂಬ ಎರಡನೆಯ ಕಾರಣವೂ ಇಲ್ಲಿ ಮುಖ್ಯವಾಗಿದೆ ಎಂಬುದನ್ನು ಸೂಚಿಸಲಾಗಿದೆ. ಇವೆರಡೂ ಪರಸ್ಪರ ಪೂರಕವಾಗಿವೆ. ವಿದ್ಯಾರ್ಥಿಗಳು ಇಲ್ಲಿ ಉಪಯುಕ್ತವಾದ ಮಾರ್ಗವನ್ನು ಅನುಸರಿಸುವುದು ಕಂಡುಬರುತ್ತದೆ.

ನೋಟ್ಸನ್ನು 'ಬಳಸುವುದಿಲ್ಲ' ಎಂದವರಿಗೆ, ಹಾಗೆ ಮಾಡದಿರಲು ಅವರಿಗಿರುವ ಕಾರಣಗಳನ್ನು ಗುರುತಿಸಲು ಕೇಳಲಾಗಿತ್ತು. ಅದರಲ್ಲಿ 'ನೋಟ್ಸ್ ನಮ್ಮನ್ನು ಸ್ವತಂತ್ರವಾಗಿ ಆಲೋಚಿಸಲು ಬಿಡುವುದಿಲ್ಲ'(೨೦) ಎಂಬ ಕಾರಣದ ಜೊತೆಗೆ 'ಎಲ್ಲ ವಿವರಗಳು ತರಗತಿಗಳಲ್ಲೇ ದೊರೆಯುತ್ತವೆ'(೧೮) ಎಂಬ ಕಾರಣಗಳು ಪ್ರಥಮ ಪ್ರಾಶಸ್ತ್ಯವನ್ನು ಪಡೆದಿವೆ ಮತ್ತು ಮುಖ್ಯವಾಗಿವೆ. 'ಪರೀಕ್ಷೆಗೇ ಹೆಚ್ಚಿನ ಒತ್ತನ್ನು ಕೊಟ್ಟಂತಾಗುತ್ತದೆ'(೧೭-೧೨) ಎಂಬ ಕಾರಣವು ಎರಡು ಮತ್ತು ಮೂರನೇ ಪ್ರಾಶಸ್ತ್ಯದಲ್ಲಿ ಸೇರಿಕೊಂಡಿದೆ. ಇವು ಪರಸ್ಪರ ಪೂರಕ ಅಂಶಗಳೇ ಆದಂತೆ ತೋರುತ್ತಿವೆ. ನೋಟ್ಸ್ ಬಳಕೆ ಕುರಿತ ಈ ಪ್ರಶ್ನೆ ತತ್ವಪದ ಸಾಹಿತ್ಯ ಬೋಧನೆ-ಕಲಿಕೆ ಬಗೆಗೆ ಹೆಚ್ಚಿನ ಬೆಳಕನ್ನು ಬೀರುವುದಿಲ್ಲ. ಇದು ನಮ್ಮ ವಿದ್ಯಾಭ್ಯಾಸ/ಶಿಕ್ಷಣ ಕ್ರಮದ ಎರಡು ವಿರುದ್ಧ ದಿಕ್ಕುಗಳನ್ನು ತೆರೆದಿಡುತ್ತದೆ.

ಆರನೆಯ ಪ್ರಶ್ನೆಯನ್ನು ಮೌಲ್ಯಮಾಪನ ಕ್ರಮವನ್ನೇ ಕುರಿತು ನೇರವಾಗಿ ಕೇಳಲಾಗಿತ್ತು. ಇಲ್ಲಿಯ ಪ್ರಶ್ನೆಗೆ ಐದು ಉತ್ತರಗಳನ್ನು ಸೂಚಿಸಿ, ಮೂರು ಆಯ್ಕೆಗಳನ್ನು ಅನುಕ್ರಮದಲ್ಲಿ ಸೂಚಿಸಲು ಕೇಳಿತ್ತು. ಸೂಚಿಸಿದ ಐದರಲ್ಲಿ ಮೂರು ವಿದ್ಯಾರ್ಥಿಗಳ ಆಯ್ಕೆಯಲ್ಲಿ ಮುಂದಾಗಿ ನಿಲ್ಲುತ್ತವೆ.

೧. ವಿಮರ್ಶಾರೂಪದ ಟಿಪ್ಪಣಿಗಳನ್ನು ಬರೆಯುವುದು' (೨೪, ೧೦, ೩೫)'.

೨. ಕಠಿಣ ಪದಗಳ ಅರ್ಥ ಬರೆಯುವುದು' (೨೦, ೨೮, ೧೩)

೩. ಅನ್ವಯಾನುಸಾರ ಅರ್ಥವನ್ನು ಬರೆಯುವುದು (೨೭, ೧೬, ೧೪)'

ಈ ಮೂರು ಕಠಿಣತೆಗಳಲ್ಲಿ ಮೊದಲನೆಯದು ಕಲಿತದ್ದನ್ನು ಹೇಳುವುದಕ್ಕೆ ಸಂಬಂಧಿಸಿದೆ. ಎರಡು ಮತ್ತು ಮೂರು ಕಲಿಯುವ ಕ್ರಮದ ಕೊರತೆಗಳನ್ನು ಸೂಚಿಸುತ್ತಿವೆ. ಈ ವಿವರಗಳೂ ಕೂಡ 'ತತ್ವಪದ ಸಾಹಿತ್ಯ' ಕಲಿಕೆಯ ಸಂದರ್ಭದ ವಿಶಿಷ್ಟ ಸಮಸ್ಯೆಯ ಮತ್ತು ಅದನ್ನು ಬರೆಯುವಲ್ಲಿ ಎದುರಾಗುವ ಭಾಷೆಯ(ಕಲಿಕೆಯ) ಸಾಮಾನ್ಯ ಕೊರತೆಗಳನ್ನು ಗುರುತಿಸುತ್ತವೆ.

ಏಳನೆಯ ಪ್ರಶ್ನೆಯಲ್ಲಿ ವಿದ್ಯಾರ್ಥಿಗಳನ್ನು ಅವರು ಓದಿರುವ 'ತತ್ವಪದ ಕವಿಗಳಲ್ಲಿ ಇಷ್ಟಪಡುವ ಮೂವರನ್ನು ಹಾಗೂ ಇಷ್ಟವಾದ ಅವರ ಕಾವ್ಯದ/ಪದದ(ಸಾಲನ್ನು) ಶೀರ್ಷಿಕೆಯನ್ನು ಹೆಸರಿಸಲು ಕೇಳಲಾಗಿತ್ತು. ಇದರಲ್ಲಿ ವಿದ್ಯಾರ್ಥಿಗಳು ಬಹು ಪರಿಚಿತವಾದ 'ಶರೀಫ್(೭೫)' ಕಡಕೋಳ ಮಡಿವಾಳಪ್ಪ'(೪೪), 'ರಸ್ತಾಪುರ ಭೀಮ ಕವಿ'(೧೧), ನಂತರದ ಸ್ಥಾನದಲ್ಲಿ 'ನಿಜಗುಣ ಶಿವಯೋಗಿ'(೯), ರಾಯಚೂರು ಹನುಮಂತಪ್ಪ(೭), ರಾಮಪುರದ ಬಕ್ಕಪಯ್ಯ(೬)' ಇವರನ್ನು ಸೂಚಿಸಿದ್ದಾರೆ. ಪಠ್ಯಪುಸ್ತಕಗಳಲ್ಲಿ ನಿಗದಿಯಾದ ಇವರ ರಚನೆಗಳಲ್ಲಿ ವಿದ್ಯಾರ್ಥಿಗಳು ಶರೀಫರ 'ಕೋಡಗನ ಕೋಳಿ ನುಂಗಿತ್ತಾ(೧೧) ಸೋರುತಿಹುದು ಮನೆಯ ಮಾಳಿಗೆ(೧೧), ಈ ಎರಡು ಪದ್ಯಗಳು ಸಮ-ಸಮವಾಗಿ ಸೂಚಿಸಿದ್ದಾರೆ. 'ಗುಡಿಯ ನೋಡಿರಣ್ಣ ದೇಹದ ಗುಡಿಯ ನೋಡಿರಣ್ಣ'(೧೦) ಈ ಪದ್ಯವೂ ಇವುಗಳ ಜೊತೆ ಸೇರುತ್ತದೆ.

ನಂತರದಲ್ಲಿ ಕಡಕೋಳ ಮಡಿವಾಳಪ್ಪನವರ 'ಮುಡಚೆಟ್ಟು ಎಲ್ಲಾದ್ಹೋಳಣ್ಣ'(೯) ಮತ್ತು 'ಮೂಕನಾಗಿರಬೇಕು ಈ ಜಗದೊಳಗೆ (೪) ಎನ್ನುವ ಪದ್ಯಗಳನ್ನು ಸೂಚಿಸಿದ್ದಾರೆ.

ಹಾಗೆಯೇ 'ರಸ್ತಾಪುರ ಭೀಮ ಕವಿಯ' 'ಜಾತಿಸೂತಕ' ಎಂಬ ಪದ್ಯವೂ(೭) ವಿದ್ಯಾರ್ಥಿಗಳ ಆಯ್ಕೆಯಲ್ಲಿ ಮೂರನೆಯದಾಗಿ ಸೇರಿಕೊಳ್ಳುತ್ತದೆ.

ವಿದ್ಯಾರ್ಥಿಗಳಿಗೆ ಆಯ್ಕೆಯ ಪ್ರಶ್ನಾವಳಿಯನ್ನು ವಿತರಿಸಿ ಅವರಿಂದ 'ತತ್ವಪದ ಸಾಹಿತ್ಯದ' ಬಗ್ಗೆ, ಅವುಗಳ ರಚನೆಕಾರರ ಬಗ್ಗೆ ಕೇಳಿದ ಪ್ರಶ್ನೆಗಳಲ್ಲಿ ಜನಪ್ರಿಯ/ಬಹುಪರಿಚಿತ ಪದಗಳನ್ನೇ ವಿದ್ಯಾರ್ಥಿಗಳು ಇಲ್ಲಿ ಸೂಚಿಸಿದ್ದಾರೆ. ಅದರಲ್ಲೂ ಶರೀಫರ ಹಾಡುಗಳೇ ಹೆಚ್ಚಾಗಿ ಸೂಚಿಸಿದ್ದಾರೆ. ಇತರೆ ತತ್ವಪದಕಾರರ ಹಾಡುಗಳನ್ನು ಶರೀಫರ ಹಾಡುಗಳಂತೆ ಜನಪ್ರಿಯಗೊಳಿಸುವ ಒತ್ತಡ ಇದರಿಂದ ಗೋಚರಿಸುವುದು.

ಒಟ್ಟಾರೆ ವಿದ್ಯಾರ್ಥಿಗಳು 'ತತ್ವಪದ ಸಾಹಿತ್ಯ' ಕುರಿತಂತೆ ಸಾಧಾರಣವಾದ ಆಸಕ್ತಿಯನ್ನು ಹೊಂದಿದಂತೆ ತೋರುತ್ತದೆ. ಈ ಬಗ್ಗೆ ಸಾಮಾನ್ಯವಾದ ಜ್ಞಾನವನ್ನು ಪಡೆಯುವಲ್ಲಿ ತವಕಿಗಳಾಗಿರುವಂತೆಯೂ ಇದರಿಂದ ತಿಳಿಯುತ್ತದೆ.

ವಿದ್ಯಾರ್ಥಿಗಳಿಗಾಗಿ ಮಾಡಿದ ಈ ಕ್ಷೇತ್ರಾಧ್ಯಯನ ಸೀಮಿತ ಆಸಕ್ತಿಯದು ಕೆಲವು ಕೊರತೆಗಳಿಂದ ಕೂಡಿದೆ.

೧. ವಿದ್ಯಾರ್ಥಿಗಳ ಸಂಖ್ಯೆ ಮತ್ತೂ ಹೆಚ್ಚಬೇಕಿತ್ತು.

೨. ಪ್ರಶ್ನಾವಳಿಯ ಮಾದರಿಗಳು ಇನ್ನಷ್ಟು ಪ್ರಾತಿನಿಧಿಕವಾಗಬೇಕು.

೩. ಪ್ರಶ್ನಾವಳಿಯಲ್ಲಿ ನೀಡಲಾದ ಉತ್ತರಗಳು ವಿದ್ಯಾರ್ಥಿಗಳ ಪ್ರತಿಕ್ರಿಯೆಯ ಸಾಧ್ಯತೆಯನ್ನು ಸೀಮಿತಗೊಳಿಸಿದರೂ, ಈ ಆಯ್ಕೆಯಲ್ಲಿ 'ಇತರೆ ಅಂಶಗಳು' ಎನ್ನುವ ಶೀರ್ಷಿಕೆಯಲ್ಲಿ ಹೆಚ್ಚಿನ ವಿವರ ನೀಡಲು ಅವಕಾಶವಿತ್ತು.

೪. ಆದರೆ ವಿದ್ಯಾರ್ಥಿಗಳಿಗೆ ಅನುಕ್ರಮದ ಸೂಚನೆ ಮಾಡಲು ಇದ್ದ ಪೂರ್ವ ಸಿದ್ಧತೆ, ಇತ್ಯಾದಿ... ಸಾಲದೆನಿಸುತ್ತದೆ.

ಆದರೂ ಈ ದಿಕ್ಕಿನಲ್ಲಿ ವಿದ್ಯಾರ್ಥಿಗಳ ಮೂಲಕ ತಿಳಿಯಲು ಮಾಡಿದ 'ತತ್ವಪದ ಸಾಹಿತ್ಯ' ಅಧ್ಯಯನದ ಗ್ರಹಿಕೆಯ ಪ್ರಯತ್ನ, ಕಂಡುಕೊಂಡ ಅಂಶಗಳು ಗಮನಾರ್ಹವಾಗಿವೆ.

**೨. ತತ್ವಪದ ಸಾಹಿತ್ಯ ಅಧ್ಯಯನವನ್ನು ಕುರಿತ ಪ್ರಶ್ನಾವಳಿ 'ಶಿಕ್ಷಕರಿಗಾಗಿ'**

೧. ನೀವು ಈ ಕೆಳಗಿನ ಸಾಹಿತ್ಯ ಪ್ರಕಾರಗಳಲ್ಲಿ 'ಪಠ್ಯ'ವಾಗಿ ಬೋಧಿಸಲು ಇಷ್ಟಪಡುವ ಮೂರು ಪ್ರಕಾರಗಳನ್ನು ನಿಮ್ಮ ಆಯ್ಕೆಯು ಅನುಕ್ರಮದಲ್ಲಿ ಗುರುತಿಸಿ.

| | | |
|---|---|---|
| ಹಳಗನ್ನಡ ಸಾಹಿತ್ಯ | ಹೊಸಗನ್ನಡ ಕವಿತೆ | ಪ್ರಬಂಧ |
| ವಚನಗಳು | ಹೊಸಗನ್ನಡ ಕಥೆ | ವಿಚಾರಸಾಹಿತ್ಯ |
| ದಾಸಸಾಹಿತ್ಯ | ಹೊಸಗನ್ನಡ ನಾಟಕ | ಪ್ರವಾಸಕಥನ |
| ರಗಳೆ, ಷಟ್ಪದಿ, | ತತ್ವಪದಗಳು | ಹೊಸಗನ್ನಡ ಕಾದಂಬರಿ |
| ಜಾನಪದ ಸಾಹಿತ್ಯ | | |

೨. ತತ್ವಪದ ಸಾಹಿತ್ಯವನ್ನು 'ಪಠ್ಯ'ವಾಗಿ ಬೋಧಿಸಲು ಇಷ್ಟಪಡುತ್ತೀರಾ? ಹೌದು : ಇಲ್ಲ.

ಅ. 'ಹೌದು' ಎಂದಾದರೆ ಯಾವ ಕಾರಣಗಳು : (ಆಯ್ಕೆಯು ಅನುಕ್ರಮದಲ್ಲಿ)

- ಕನ್ನಡ ಸಾಹಿತ್ಯದಲ್ಲಿ ಇದೂ ಒಂದು ಪ್ರಕಾರದ ಪರಿಚಯವಾಗುತ್ತದೆ.
- ಕನ್ನಡ ಭಾಷೆಯ ಜೊತೆಗೆ ಬೇರೆ ಬೇರೆ ಭಾಷೆಯ ಪದಗಳು ಬೆರೆತ ಬಗೆಯನ್ನು ಈ ಸಾಹಿತ್ಯದಲ್ಲಿ ಅರಿಯಬಹುದು.
- ಕನ್ನಡ ಸಾಹಿತ್ಯ ಪರಂಪರೆಯಲ್ಲಿ ಇದು ಭಿನ್ನ ಸಾಹಿತ್ಯವಾಗಿದೆ.
- ಆಧ್ಯಾತ್ಮಿಕ ಮತ್ತು ಜೀವನ ಮೌಲ್ಯಗಳ ಪರಿಚಯವಾಗುತ್ತದೆ.
- ಇತರೆ ಕಾರಣಗಳು

ಬ. 'ಇಲ್ಲ' ಎಂದಾದರೆ ಯಾವ ಕಾರಣಗಳು : (ಆಯ್ಕೆಯು ಅನುಕ್ರಮದಲ್ಲಿ)

- ತತ್ವಪದ ಸಾಹಿತ್ಯದ ಓದು ಕಾಲಹರಣ.
- ಅವುಗಳಲ್ಲಿರುವ ಭಾಷೆ ಬೆರೆಕೆಯಾದುದು, ಪ್ರಸ್ತುತವಲ್ಲ.

- ಅಲ್ಲಿ ಬರೀ ಅಲೌಕಿಕ ಮೌಲ್ಯಗಳ ಪ್ರತಿಪಾದನೆ ಇದೆ.
- ಅಲ್ಲಿನ ಕಾವ್ಯ/ಪದ್ಯಗಳ ವಸ್ತು ವೈರಾಗ್ಯ, ಜೀವನವೇ ನಶ್ವರ ಎಂದು ಸಾರುತ್ತದೆ. ಇದು ವಾಸ್ತವ ಬದುಕಿಗೆ ದೂರವಾದದ್ದು.
- ಇತರೆ ಅಂಶಗಳು

೩. ನೀವು ಬೋಧಿಸುವ ತತ್ವಪದ 'ಪಠ್ಯ'ಗಳಲ್ಲಿ ಇರುವ ಕೊರತೆಗಳೇನು? ಮುಖ್ಯವಾದ 'ಎರಡ'ನ್ನು ಗುರುತಿಸಿ. (ಅನುಕ್ರಮದಲ್ಲಿ)

- ಶಬ್ದಾರ್ಥ ಸೂಚಿ ಪರಿಪೂರ್ಣವಾಗಿರುವುದಿಲ್ಲ.
- ಕವಿ, ಕೃತಿಯ ಬಗೆಗೆ ಟಿಪ್ಪಣಿ, ವಿವರಗಳು ಸಾಲವು.
- ಕಠಿಣ ಪದಗಳ ಆಯ್ಕೆ ಮಾಡಲಾಗಿದೆ.
- ಉತ್ತಮ ಅಭಿರುಚಿ ಮೂಡಿಸುವ ಆಯ್ಕೆ ಇರುವುದಿಲ್ಲ.
- ಇತರೆ ಅಂಶಗಳು.

೪. ನೀವು ತತ್ವಪದ ಸಾಹಿತ್ಯವನ್ನು ಬೋಧಿಸಲು ಈ ಕೆಳಗಿನ ಇತರೆ ಯಾವ ಆಕರಗಳನ್ನು ಬಳಸುತ್ತೀರಿ? (ಅನುಕ್ರಮದಲ್ಲಿ ಸೂಚಿಸಿ)

- ನಿಘಂಟುಗಳು
- ವಿಮರ್ಶಾ ಲೇಖನಗಳು
- ಇತರ ತತ್ವಪದಕಾರರ ಪದಗಳನ್ನು ಸಮಯೋಜಿತವಾಗಿ ಬಳಸುವುದು.
- ಅದೇ ಕವಿಗಳ ಇತರೆ ರಚನೆಗಳು.
- ಇತರೆ ಅಂಶಗಳು.

೫. ನೀವು ತರಗತಿಗಳಲ್ಲಿ ತತ್ವಪದ ಸಾಹಿತ್ಯವನ್ನು ಬೋಧಿಸುವಾಗ ಅನುಸರಿಸುವ ಅಂಶಗಳು ಯಾವುವು? ನಿಮ್ಮ ಆಯ್ಕೆಯ 'ನಾಲ್ಕು' ಅಂಶಗಳನ್ನು ಅನುಕ್ರಮದಲ್ಲಿ ಸೂಚಿಸಿ.

- ಪಠ್ಯದ ಪದ್ಯ/ಕಾವ್ಯ ಭಾಗಗಳನ್ನು ರಾಗವಾಗಿ ಓದುವುದು.
- ಪದಗಳನ್ನು ಬಿಡಿಸಿ ಓದುವುದು.
- ಪ್ರತಿ ಪದಕ್ಕೂ ಅನ್ವಯಾನುಕ್ರಮದಲ್ಲಿ ಅರ್ಥ ಹೇಳುವುದು.

- ಭಾವಾರ್ಥ, ಸಾರಾಂಶವನ್ನು ಹೇಳುವುದು.
- ಮತ್ತೊಮ್ಮೆ ಸಂಕ್ಷಿಪ್ತವಾಗಿ ಹೇಳುವುದು.
- ಮುಖ್ಯವಾದ ಅಂಶಗಳನ್ನು ಸರಳೀಕರಿಸುವುದು, ಸಂಗ್ರಹಿಸುವುದು.
- ಟಿಪ್ಪಣಿಗಳನ್ನು (ನೋಟ್ಸನ್ನು) ವಿವರವಾಗಿ ಬರೆಸುವುದು.
- ಪಠ್ಯವನ್ನು/ಪದ್ಯ ಭಾಗಗಳನ್ನು ಬಳಸಿ ವಾಸ್ತವದ/ನಿತ್ಯ ಜೀವನದ ಘಟನೆಗಳನ್ನು ವಿಶ್ಲೇಷಿಸುವುದು.
- ಇತರೆ ಅಂಶಗಳು

೬. ನೀವು ಬೋಧಿಸಲು ಇಷ್ಟಪಡುವ ಮೂವರು ತತ್ವಪದ ಕವಿಗಳನ್ನು ಮತ್ತು ಅವರ ಇಷ್ಟವಾದ ಕಾವ್ಯದ / ಪದ್ಯದ ಶೀರ್ಷಿಕೆಯನ್ನು ಹೆಸರಿಸಿ. (ಅನುಕ್ರಮದಲ್ಲಿ ಸೂಚಿಸಿ)

| ಕವಿಗಳು | ಕಾವ್ಯಗಳ/ಪದ್ಯಗಳ ಶೀರ್ಷಿಕೆ |
|---|---|
| ೧ | ೧ |
| ೨ | ೨ |
| ೩ | ೩ |

೧. ಸ್ವಂತ ವಿವರ

ಹೆಸರು :

ಕಾಲೇಜು :

ಊರು :

ಬೋಧನಾನುಭವದ ವರ್ಷಗಳು : ೧:೫, ೬:೧೦, ೧೧:೨೦, ೨೦

ಅಧ್ಯಯನದ ವಿಶ್ಲೇಷಣೆ : 'ಶಿಕ್ಷಕ'ರಿಗಾಗಿ (ಅಧ್ಯಾಪಕರಿಗಾಗಿ) ಇದೇ ಮಾದರಿಯ ಪ್ರಶ್ನಾವಳಿಯನ್ನು ಸಿದ್ಧಪಡಿಸಲಾಗಿತ್ತು. ಕನಿಷ್ಟ ೨೫ ಶಿಕ್ಷಕರನ್ನಾದರೂ ಈ ಪ್ರಶ್ನಾವಳಿಯಲ್ಲಿ ಒಳಗು ಮಾಡಿಕೊಳ್ಳುವ ಉದ್ದೇಶವಿತ್ತು. ಹಾಗೆಯೇ ಅನೇಕ ಶಿಕ್ಷಕರಿಗೆ ಪ್ರಶ್ನಾವಳಿಯನ್ನು ವಿತರಿಸಲಾಗಿತ್ತು. ಕೇವಲ ೧೫ ಶಿಕ್ಷಕರು ಮಾತ್ರ ಪ್ರಶ್ನಾವಳಿಗೆ ಉತ್ತರಿಸಿ ಸಹಕರಿಸಿದ್ದಾರೆ. ಕೆಲವು ಅಧ್ಯಾಪಕರು ಇದಕ್ಕೆ ಸಹಕರಿಸಲಿಲ್ಲ. ಹಾಗಾಗಿ ಇದೊಂದು ಅತ್ಯಂತ ಸೀಮಿತ ನೆಲೆಯ ವಿಶ್ಲೇಷಣೆ ಎಂಬುದನ್ನು ಅಲ್ಲಗಳೆಯುವಂತಿಲ್ಲ. ಇತ್ತೀಚಿನ ವರ್ಷಗಳಲ್ಲಿ ತತ್ವಪದ ಸಾಹಿತ್ಯವನ್ನು ವಿದ್ಯಾರ್ಥಿಗಳಿಗೆ 'ಪಠ್ಯ'ವನ್ನಾಗಿ ಅಳವಡಿಸಿರುವುದರಿಂದಾಗಿ

ಅನುಭವ ಹೊಂದಿದ ಹಾಗೂ ಹೊಸದಾಗಿ ಬೋಧಿಸುವ ಶಿಕ್ಷಕರನ್ನು ಇಲ್ಲಿ ಒಳಗು ಮಾಡಿಕೊಳ್ಳಲಾಗಿದೆ. ಇಲ್ಲಿ ಪಡೆದ ಉತ್ತರಗಳು ವಿಭಿನ್ನವೆನಿಸಿದ್ದರಿಂದ ಅವುಗಳ ವಿವರಗಳನ್ನು ಕೆಳಗೆ ನೀಡಲಾಗಿದೆ.

ಪ್ರಶ್ನಾವಳಿಯ 'ತತ್ವಪದ ಪಠ್ಯ'ವನ್ನು ಕುರಿತು ಇಲ್ಲಿಯೂ ಶಿಕ್ಷಕರ ಅಭಿಪ್ರಾಯಗಳನ್ನು ತಿಳಿಯುವ ಮೂರು ಪ್ರಶ್ನೆಗಳು ಇವೆ. (ಪ್ರಶ್ನೆ ೧, ೨, ೩) ಇವುಗಳಲ್ಲಿ ಅಧ್ಯಾಪಕರು ಇಷ್ಟಪಡುವ/ ಅಪೇಕ್ಷಿಸುವ ಆಯ್ಕೆಯ ಪ್ರಕಾರಗಳನ್ನು ಕುರಿತು ಕೇಳಲಾಗಿದೆ. 'ತತ್ವಪದ ಸಾಹಿತ್ಯ'ವನ್ನು ಪಠ್ಯವನ್ನಾಗಿ ಬೋಧಿಸಲು ಅಧ್ಯಾಪಕರು ಒಟ್ಟಾಗಿ ಪ್ರಥಮ ಪ್ರಾಶಸ್ತ್ಯ'ವನ್ನು ಕೊಟ್ಟಿಲ್ಲ.

ಇಲ್ಲಿ ಕೇಳಲಾದ ಪ್ರಕಾರಗಳಲ್ಲಿ ಎರಡು ಪ್ರಥಮ ಪ್ರಾಶಸ್ತ್ರವನ್ನು ಪಡೆದಿವೆ. ಅವು ಅನುಕ್ರಮವಾಗಿ 'ಹಳಗನ್ನಡ ಸಾಹಿತ್ಯ(೦೬)', ತತ್ವಪದಗಳು(೦೪) ಕಂಸದಲ್ಲಿ ಕೊಟ್ಟಿರುವ ಸಂಖ್ಯೆಗಳು ಆ ಪ್ರಕಾರಗಳನ್ನು ಆಯ್ದುಕೊಂಡ ಶಿಕ್ಷಕರ ಸಂಖ್ಯೆಯನ್ನು ಸೂಚಿಸುತ್ತವೆ. ಎರಡನೇ ಪ್ರಾಶಸ್ತ್ಯವನ್ನು 'ಹೊಸಗನ್ನಡ ಕವಿತೆ(೦೫) ಮತ್ತು ಮೂರನೇ ಪ್ರಾಶಸ್ತ್ಯವನ್ನು 'ವಚನಗಳು(೩) ಮತ್ತು ಜಾನಪದ ಸಾಹಿತ್ಯ(೩) ಪಡೆದಿವೆ.

ಪ್ರಶ್ನಾವಳಿ ಎರಡು 'ತತ್ವಪದ ಸಾಹಿತ್ಯ'ವನ್ನು 'ಪಠ್ಯ'ವನ್ನಾಗಿ ಬೋಧಿಸಲು ಅಧ್ಯಾಪಕರ ಆಸಕ್ತಿ ಕುರಿತು ನೇರವಾಗಿ ಕೇಳಿದ ಪ್ರಶ್ನೆಯಾಗಿದೆ. 'ಇಷ್ಟವಿದೆ' ಎಂದವರ ಸಂಖ್ಯೆ ಬಹುತೇಕವಾಗಿದೆ(೧೪), 'ಇಲ್ಲ' ಎಂದವರು ಕೇವಲ ಒಬ್ಬರು(೧). ಇಷ್ಟಪಟ್ಟವರನ್ನು ಹಾಗೆ ಇಷ್ಟಪಡಲು ಇರುವ ಕಾರಣಗಳೇನು? ಎಂದು ಪ್ರಶ್ನೆಯ ಮುಂದಿನ ಭಾಗದಲ್ಲಿ ಕೇಳಲಾಗಿತ್ತು. ಇದರಲ್ಲಿ ಐದು ಕಾರಣಗಳನ್ನು ಅನುಕ್ರಮದಲ್ಲಿ ಸೂಚಿಸಲು ಕೇಳಲಾಗಿತ್ತು. ಬಹುಪಾಲು ಶಿಕ್ಷಕರು ಮೂರು ಆಯ್ಕೆಗಳನ್ನು ಹೆಚ್ಚು ಸೂಚಿಸಿದ್ದಾರೆ. ಅವರ ಆಯ್ಕೆಗಳ ಅನುಕ್ರಮ ಹೀಗಿದೆ. 'ಪ್ರಥಮ ಆಯ್ಕೆಯಲ್ಲಿ' 'ಆಧ್ಯಾತ್ಮಿಕ ಮತ್ತು ಜೀವನ ಮೌಲ್ಯಗಳ ಪರಿಚಯವಾಗುತ್ತದೆ(೦೮) ಎಂದು ಸೂಚಿಸಿದ್ದಾರೆ. ಎರಡನೆಯ ಆಯ್ಕೆಯಲ್ಲಿ 'ಕನ್ನಡ ಸಾಹಿತ್ಯ ಪರಂಪರೆಯಲ್ಲಿ ಇದು ಭಿನ್ನವಾಗಿ ನಿಲ್ಲುತ್ತದೆ'(೦೫) ಎಂದು. ಹಾಗೆಯೇ ಮೂರನೆಯ ಆಯ್ಕೆಯಲ್ಲಿ 'ಕನ್ನಡ ಭಾಷೆಯ ಜೊತೆಗೆ ಬೇರೆ ಬೇರೆ ಭಾಷೆಯ ಪದಗಳು ಬೆರೆತ ಬಗೆಯನ್ನು ಈ ಸಾಹಿತ್ಯದಲ್ಲಿ ಅರಿಯಬಹುದು.'(೦೩). ಇದರ ಜೊತೆಗೆ 'ಕನ್ನಡ ಸಾಹಿತ್ಯದಲ್ಲಿ ಇದೂ ಒಂದು ಪ್ರಕಾರದ ಪರಿಚಯವಾಗುತ್ತದೆ(೦೩) ಎಂಬ ಕಾರಣವೂ ಸೇರಿಕೊಂಡಿದೆ.

ಈ ವಿವರಣೆಯಿಂದ 'ತತ್ವಪದ ಸಾಹಿತ್ಯ'ವನ್ನು ಬೋಧಿಸುವುದರಿಂದ ಅಧ್ಯಾಪಕರು ಈ ಸಾಹಿತ್ಯದ ಆಧ್ಯಾತ್ಮಿಕ ಮತ್ತು ಅದರಲ್ಲಿನ ಜೀವನ ಮೌಲ್ಯಗಳ ತಿಳಿಯುವ ಮತ್ತು ಹೇಳುವ ಕಾರಣಕ್ಕಾಗಿಯೇ ಇಷ್ಟಪಟ್ಟಂತೆ ತೋರುತ್ತದೆ. ಅಲ್ಲದೆ ತತ್ವಪದ ಸಾಹಿತ್ಯದ ರಾಚನಿಕ ಸ್ವರೂಪ, ಅದರ ಭಾಷೆ, ಕನ್ನಡ ಸಂದರ್ಭದಲ್ಲಿ ವಿಭಿನ್ನವಾಗಿ ವಿಶಿಷ್ಟವಾಗಿ ಇರುವಂತೆ ಭಾವಿಸಲಾಗಿ ಆಯ್ಕೆಯನ್ನು ಸೂಚಿಸಿದಂತೆ ತೋರುತ್ತದೆ.

ಮೂರನೆಯ ಪ್ರಶ್ನೆಯಲ್ಲಿ ಬೋಧಿಸುವಾಗ 'ಪಠ್ಯ'ಗಳಲ್ಲಿರುವ ಕೊರತೆಗಳನ್ನು ಸೂಚಿಸಲು ಕೇಳಲಾಗಿತ್ತು. ಪ್ರಶ್ನೆಗಳ ಕೆಳಗೆ ಕೊರತೆಗಳ ಪಟ್ಟಿ ನೀಡಿ, ಅವುಗಳಲ್ಲಿ ತಮಗೆ ಮುಖ್ಯವಾದ ಎರಡನ್ನು ಅನುಕ್ರಮದಲ್ಲಿ ಆಯ್ಕೆ ಮಾಡಿ ಸೂಚಿಸಲು ಕೇಳಲಾಗಿತ್ತು. ಪ್ರಥಮ ಆಯ್ಕೆಯಲ್ಲಿ 'ಶಬ್ದಾರ್ಥಸೂಚಿ ಪರಿಪೂರ್ಣವಾಗಿರುವುದಿಲ್ಲ'(೯) ಎಂಬ ಕೊರತೆಯನ್ನು ಸೂಚಿಸಿದ್ದಾರೆ. ಎರಡನೆಯ ಪ್ರಾಶಸ್ತ್ಯದಲ್ಲಿ 'ಕವಿಕೃತಿಯ ಬಗೆಗೆ ಟಿಪ್ಪಣಿ, ವಿವರಗಳು ಸಾಲದು'(೮) ಎಂಬ ಕೊರತೆಯನ್ನು ಸೂಚಿಸಿದ್ದಾರೆ. ಜೊತೆಗೆ ಇತರೆ ಅಂಶಗಳ ಭಾಗದಲ್ಲಿ ತಮ್ಮ ಅಭಿಪ್ರಾಯಗಳನ್ನು ತಿಳಿಸಿದ್ದಾರೆ. 'ಬೋಧಕರಾದವರು ಶಬ್ದಾರ್ಥ, ಕವಿ ಕುರಿತ ಟಿಪ್ಪಣಿ, ಇತರೆ ಅಂಶಗಳನ್ನೆಲ್ಲ ಸಂಗ್ರಹಿಸಿ ಬೋಧಿಸುವುದು ಅಧ್ಯಾಪಕರಿಗಿರಬೇಕಾದ ಜವಾಬ್ದಾರಿ ಎಂಬುದನ್ನು ಹೇಳಿದ್ದಾರೆ. ಅಂದರೆ ಆ ಪಠ್ಯವನ್ನು ಬೋಧಿಸುವವರು ಅದಕ್ಕೆ ಬೇಕಾದ ತಯಾರಿಯನ್ನು ಮಾಡಿಕೊಳ್ಳಬೇಕು. ಬೇರೆ ಬೇರೆ ಮೂಲಗಳಿಂದ ಮಾಹಿತಿ ಸಂಗ್ರಹಿಸಿ ಬೋಧಿಸಬೇಕು ಎಂಬ ಅಭಿಪ್ರಾಯವನ್ನು ಕೆಲವು ಶಿಕ್ಷಕರು ವ್ಯಕ್ತಪಡಿಸಿದ್ದಾರೆ.

ಈ ವಿವರಣೆಯಿಂದ ತಿಳಿದುಬರುವುದೇನೆಂದರೆ ಹೆಚ್ಚಿನ ಅಧ್ಯಾಪಕರು ಪಠ್ಯದ ಕೊನೆಗೆ ಕೊಡುವ 'ಶಬ್ದಾರ್ಥಸೂಚಿ, ಕವಿ-ಕೃತಿಯ ಬಗೆಗೆ ಟಿಪ್ಪಣಿಗಳು' ಬೋಧನೆಗೆ ಸಹಕಾರಿಯಾದವು ಎಂಬುದಕ್ಕೆ ಒತ್ತುಕೊಟ್ಟಿದ್ದಾರೆ. ವಿದ್ಯಾರ್ಥಿಗಳಿಗೆ ಅರ್ಥ ಮಾಡಿಸಲು ಇವು ಉಪಕಾರಿಯಾಗಿವೆ ಎಂಬುದನ್ನೂ ತೋರಿಸುತ್ತವೆ.

ಬೋಧಿಸುವ ಕ್ರಮವನ್ನು ಕುರಿತು ನಾಲ್ಕು ಮತ್ತು ಐದನೆಯ ಪ್ರಶ್ನೆಗಳು ಇವೆ. 'ತತ್ವಪದ ಸಾಹಿತ್ಯವನ್ನು ಬೋಧಿಸಲು ಇತರೆ, ಪೂರಕ, ಯಾವ ಆಕರಗಳನ್ನು ನೀವು ಬಳಸುತ್ತೀರಿ?' ಎಂಬ ಸಂಗತಿ ನಾಲ್ಕನೇ ಪ್ರಶ್ನೆಯ ಮುಖ್ಯ ತಿರುಳು. ಇಲ್ಲಿ ಆಯ್ಕೆಗಾಗಿ ಐದು ಉತ್ತರಗಳನ್ನು ನೀಡಿ, ಅನುಕ್ರಮದಲ್ಲಿ ಆಯ್ಕೆ ಮಾಡಲು ಕೇಳಲಾಗಿತ್ತು. ಇವುಗಳಲ್ಲಿ ಅದೇ ಕವಿಗಳ ಇತರೆ ರಚನೆಗಳು(೯) ಮತ್ತು 'ಇತರೆ' ತತ್ವಪದಕಾರರ ಪದಗಳನ್ನು ಸಮಯೋಜಿತವಾಗಿ ಬಳಸುವುದು(೬) 'ಹಾಗೆಯೇ 'ವಿಮರ್ಶಾ ಲೇಖನಗಳ'ನ್ನು(೬) ಬಳಸಿ ಬೋಧಿಸುವುದು ಮೊದಲ ಆದ್ಯತೆಯಾಗಿ ಸೂಚಿಸಿದ್ದಾರೆ. ಇತರೆ ಅಂಶಗಳ ಭಾಗದಲ್ಲಿ 'ತತ್ವಪದಕಾರ ಜೀವನ ವೃತ್ತಾಂತ ಮತ್ತು ಅವರು ಬಾಳಿ ಬದುಕಿದ ಪರಿಸರದ ತಿಳುವಳಿಕೆಯೊಂದಿಗೆ ಹಾಗೂ ಆಧ್ಯಾತ್ಮಿಕ/ದೇಹ ಶಾಸ್ತ್ರಗಳ ಕುರಿತ ಅಧ್ಯಯನ ಮಾಡುವುದರ ಮೂಲಕವೂ ವಿವರಿಸಲಾಗುವುದು ಎನ್ನುವ ಅಭಿಪ್ರಾಯವನ್ನು ಕೆಲವು(೩) ಅಧ್ಯಾಪಕರು ಎರಡನೆಯ ಅಪೇಕ್ಷೆಯಾಗಿ ವ್ಯಕ್ತಪಡಿಸಿದ್ದಾರೆ.

'ತತ್ವಪದ ಸಾಹಿತ್ಯವನ್ನು ಬೋಧಿಸುವಾಗ ಅನುಸರಿಸುವ ಅಂಶಗಳ' ಕುರಿತ ಮುಖ್ಯ ತಿರುಳು ಐದನೆಯ ಪ್ರಶ್ನೆಯಾಗಿದೆ. ಇಲ್ಲಿಯೂ ಆಯ್ಕೆಗಾಗಿ ಒಂಬತ್ತು ಉತ್ತರಗಳನ್ನು ನೀಡಿ, ನಾಲ್ಕನ್ನು ಅನುಕ್ರಮದಲ್ಲಿ ಸೂಚಿಸಲು ಕೇಳಲಾಗಿತ್ತು. ಅವುಗಳಲ್ಲಿ 'ಪಠ್ಯ'ದ ಪದ್ಯ/ಕಾವ್ಯ ಭಾಗಗಳನ್ನು ರಾಗವಾಗಿ ಓದುವುದು(೬) ಹಾಗೂ ಪದ್ಯಭಾಗಗಳನ್ನು ಬಳಸಿ ವಾಸ್ತವದ/ನಿತ್ಯ ಜೀವನದ ಘಟನೆಗಳನ್ನು

ವಿಶ್ಲೇಷಿಸುವುದು(೫). ಈ ಅಂಶಗಳನ್ನು ಮೊದಲ ಪ್ರಾಶಸ್ತ್ಯದಲ್ಲಿ ಸೂಚಿಸಿದ್ದಾರೆ. ನಂತರದಲ್ಲಿ 'ಪ್ರತಿಪದಕ್ಕೂ ಅನ್ವಯಾನುಕ್ರಮದಲ್ಲಿ ಅರ್ಥ ಹೇಳುವುದು'(೬), ಹಾಗೆಯೇ 'ಪದಗಳನ್ನು ಬಿಡಿಸಿ ಓದುವುದು(೪) ಎರಡನೇ ಆಯ್ಕೆಯಲ್ಲಿ ಸೇರಿದೆ. ಮೂರನೆಯ ಆಯ್ಕೆಯಲ್ಲಿ 'ಭಾವಾರ್ಥ, ಸಾರಾಂಶವನ್ನು ಹೇಳುವುದು(೬) ಎಂಬ ಅಂಶವನ್ನು ಸೂಚಿಸಿದ್ದಾರೆ. ಇತರೆ ಅಂಶಗಳಲ್ಲಿ 'ತಾತ್ವಿಕ ಎಳೆಗಳನ್ನು ವಿಶ್ಲೇಷಿಸುವುದು' ಕೂಡ ಸೂಚಿಸಲಾಗಿದೆ.

ಈ ವಿವರಣೆಯಿಂದ ಅಧ್ಯಾಪಕರು ಬೋಧನೆಯ ಕ್ರಮದಲ್ಲಿ ವಿದ್ಯಾರ್ಥಿಗಳಿಗೆ ಪಠ್ಯದ ರಚನೆಗಳ ಮೂಲಕ, ಅವರ ಜೀವನದಲ್ಲಿ ನೈತಿಕ ಮೌಲ್ಯಗಳನ್ನು ನೆಲೆಗೊಳಿಸುವ ರೀತಿಯಲ್ಲಿ ಬೋಧನೆ ಮಾಡುತ್ತಿರುವಂತೆ ತೋರುತ್ತದೆ.

ಆರನೆಯ ಪ್ರಶ್ನೆಯಲ್ಲಿ 'ನೀವು ಇಷ್ಟಪಡುವ ಮೂವರು ತತ್ವಪದ ಕವಿಗಳನ್ನು ಮತ್ತು ತಮಗೆ ಇಷ್ಟವಾದ ಕಾವ್ಯದ ಸಾಲನ್ನು' ಹೆಸರಿಸಲು ಕೇಳಲಾಗಿತ್ತು. ಇಲ್ಲಿ ಬಹುಪರಿಚಿತರಾದ 'ಶಿಶುನಾಳ ಶರೀಫ್ (೧೫) ಮತ್ತು 'ಕಡಕೋಳ ಮಡಿವಾಳಪ್ಪ(೦೭) ಇವರನ್ನೇ ಹೆಚ್ಚಾಗಿ ಶಿಕ್ಷಕರು ಸೂಚಿಸಿದ್ದಾರೆ. ಜನಪ್ರಿಯವಾದ ಈ ಇಬ್ಬರ ರಚನೆಗಳನ್ನೇ ಹೆಚ್ಚಾಗಿ ಶಿಕ್ಷಕರು ಇಷ್ಟಪಟ್ಟಂತೆ ಕಾಣುತ್ತದೆ. ಶರೀಫರ 'ಸೋರುತಿಹುದು ಮನೆಯ ಮಾಳಿಗೆ, ಗುಡಿಯ ನೋಡಿರಣ್ಣ, ಹೋಗುತಿಹುದು ಕಾಯವ್ಯರ್ಥ' ಹಾಗೆಯೇ ಕಡಕೋಳರ 'ಮುಡಚಟ್ಟು ಎಲ್ಯಾದ್ದೇಳಣ್ಣ' ಈ ರಚನೆಗಳನ್ನೇ ಹೆಚ್ಚಾಗಿ ಸೂಚಿಸಿದ್ದಾರೆ. ಯಾಕೆ ಈ ರಚನೆಗಳು ಹೆಚ್ಚಿನ ಶಿಕ್ಷಕರಿಗೆ ಇಷ್ಟವಾದವು? ಶರೀಫರ ಮೇಲಿನ ಸೂಚಿತ ಈ ಮೂರು ಪದಗಳು 'ಕಾಯ'ದ ನಶ್ವರತೆಯನ್ನು ಕುರಿತು ಹೇಳುವಂತವು. ಮನುಷ್ಯನು ಅಜ್ಞಾನದಿಂದ ತನ್ನ ತನವನ್ನೇ ಬಿಟ್ಟು ಮೋಹದ ಬದುಕಿಗೆ ಬಿದ್ದು ಸಮಾಜಕ್ಕೆ ಕಂಟಕಪ್ರಾಯನಾಗಿ ಜೀವಿಸುವ ಕುರಿತು ಮಾರ್ಮಿಕತೆಯನ್ನು ಹೇಳುತ್ತವೆ. ಕಡಕೋಳ ಮಡಿವಾಳಪ್ಪನ 'ಮುಡಚಟ್ಟು ಎಲ್ಯಾದ್ಹೇಳಣ್ಣ' ಪದವು ಜಾತಿಯ ಹಂಗನ್ನು ಹರಿದ ಜೀವದ ಸಾರ್ಥಕತೆಯನ್ನು, ಸಾಮರಸ್ಯದ ಬದುಕನ್ನು ಸಾರುತ್ತದೆ ಎಂದು ನಂಬಿದಂತೆ ಕಾಣುತ್ತದೆ.

### ಪ್ರಶ್ನಾವಳಿಯಲ್ಲಿ ಭಾಗವಹಿಸಿದ ಶಿಕ್ಷಕರು

೧. ಡಾ. ಕೆ.ರವೀಂದ್ರನಾಥ, ಪ್ರವಾಚಕರು, ಹಸ್ತಪ್ರತಿಶಾಸ್ತ್ರ ವಿಭಾಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ವಿದ್ಯಾರಣ್ಯ ೫೮೩ ೨೭೬

೨. ಡಾ. ಎಸ್.ಆರ್.ಚನ್ನವೀರಪ್ಪ, ಪ್ರವಾಚಕರು, ಹಸ್ತಪ್ರತಿಶಾಸ್ತ್ರ ವಿಭಾಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ವಿದ್ಯಾರಣ್ಯ ೫೮೩ ೨೭೬

೩. ಡಾ. ಬಿದರಿ ಚಂದ್ರಕಲಾ, ಅಧ್ಯಾಪಕರು, ನೃಪತುಂಗ ಪ್ರಥಮದರ್ಜೆ ಕಾಲೇಜು, ಸೇಡಂ

೪. ಶ್ರೀ ಉಮಾಶಂಕರ್, ಅಧ್ಯಾಪಕರು, ಸರಕಾರಿ ಪ್ರಥಮದರ್ಜೆ ಕಾಲೇಜು, ಗಂಗಾವತಿ

೫. ಡಾ. ರಾಮಚಂದ್ರ ಗಣಾಪುರ, ಅತಿಥಿ ಉಪನ್ಯಾಸಕರು, ಸ್ನಾತಕೋತ್ತರ ಕೇಂದ್ರ, ರಾಯಚೂರು

೬. ಡಾ. ವಿಕ್ರಮ ವಿಸಾಜಿ, ಅಧ್ಯಾಪಕರು, ಸ್ನಾತಕೋತ್ತರ ಕೇಂದ್ರ, ರಾಯಚೂರು

೭. ಶ್ರೀ ಎಂ.ಸೋಮೇಶ್, ಅತಿಥಿ ಉಪನ್ಯಾಸಕರು, ಪ್ರಿಯದರ್ಶಿ ಪಿ.ಯು.ಕಾಲೇಜು, ಮರಿಯಮ್ಮನಹಳ್ಳಿ

೮. ಡಾ. ಹಂದ್ರಾಳ್ ಗವಿಸಿದ್ದಪ್ಪ, ಅತಿಥಿ ಉಪನ್ಯಾಸಕರು, ಸರ್ಕಾರಿ ಪ್ರಥಮದರ್ಜೆ ಕಾಲೇಜು, ಗಂಗಾವತಿ

೯. ಶ್ರೀ ಗುರುಬಸವರಾಜಯ್ಯ ಎಚ್.ಎಂ., ಅತಿಥಿ ಉಪನ್ಯಾಸಕರು, ಜಿ.ಬಿ.ಆರ್.ಕಾಲೇಜು, ಹೂವಿನ ಹಡಗಲಿ

೧೦. ಶ್ರೀ ಪ್ರಭುಸೊಪ್ಪಿನ, ಉಪನ್ಯಾಸಕರು, ಜಿ.ಬಿ.ಆರ್.ಕಾಲೇಜು, ಹೂವಿನ ಹಡಗಲಿ

೧೧. ಡಾ. ಜಾಜಿ ದೇವೇಂದ್ರಪ್ಪ, ಅಧ್ಯಾಪಕರು, ಸರಕಾರಿ ಪ್ರಥಮದರ್ಜೆ ಕಾಲೇಜು, ಗಂಗಾವತಿ

೧೨. ಡಾ. ಶಿವಾಜಿ ಕಾಂಬಳೆ, ಅತಿಥಿ ಉಪನ್ಯಾಸಕರು, ಸ್ನಾತಕೋತ್ತರ ಕೇಂದ್ರ, ನಂದಿಹಳ್ಳಿ, ಸಂಡೂರು

೧೩. ಶ್ರೀ ತಿಪ್ಪೇರುದ್ರಯ್ಯ, ಅತಿಥಿ ಉಪನ್ಯಾಸಕರು, ಎಸ್.ಇ.ಎಸ್.ಕಾಲೇಜು, ಸಂಡೂರು

೧೪. ಶ್ರೀ ಡಿ.ರಂಗಯ್ಯ, ಅಧ್ಯಾಪಕರು, ಸರಳಾದೇವಿ ಪ್ರಥಮದರ್ಜೆ ಕಾಲೇಜು, ಬಳ್ಳಾರಿ

೧೫. ಶ್ರೀ ಶಿವಕುಮಾರ ಕಂಪ್ಲಿ, ಅಧ್ಯಾಪಕರು, ಪ್ರಥಮದರ್ಜೆ ಕಾಲೇಜು, ಕೂಡ್ಲಿಗಿ

## ೩. ತತ್ವಪದಗಳ ಸಂಗೀತ ಸ್ವರೂಪ

### ಪ್ರಶ್ನಾವಳಿ ವಿಶ್ಲೇಷಣೆ

ಕರ್ನಾಟಕದಲ್ಲಿ ತತ್ವಪದಗಳನ್ನು (ರಚನೆ ಮಾಡಿದ) ಹಾಡಿದ ತತ್ವಪದಕಾರರು ಮೂಲತಃ ಹಾಡುಗಾರರು. ಈ ಸಂತರು ಸಮುದಾಯದ ಬದುಕಿನಲ್ಲಿ ದೈವಗಳಾಗಿ ಬೆರೆತು ಹೋಗಿದ್ದಾರೆ. ತಮ್ಮ ಅನುಭಾವ, ತತ್ವ, ಭಾಷೆ, ಕವಿತ್ವ, ಹಾಡುಗಳ ಮೂಲಕ ಇಷ್ಟವಾಗಿದ್ದಾರೆ. ಇದಕ್ಕೆ ಅವರಷ್ಟೇ ಕಾರಣರಲ್ಲ. ಬದಲಿಗೆ ಅವರು ಬದುಕಿದ್ದ ಕಾಲದಲ್ಲಿ ನೆರವಾಗಿ ನಿಂತು, ಅವರ ಅನಂತರ ತಮ್ಮ ಸೃಜನಶೀಲತೆಯನ್ನು ಧಾರೆಯೆರೆದು, ಪರಂಪರೆ ಬೆಳೆಸಿಕೊಂಡು ಬಂದ ಜನಸಮುದಾಯಗಳೂ ಕಾರಣವಾಗಿವೆ. ಅಂತಲೇ ಹೈದ್ರಾಬಾದ್ ಕರ್ನಾಟಕ ಪ್ರದೇಶದಲ್ಲಿ, ಉತ್ತರ ಕರ್ನಾಟಕದಲ್ಲಿ ಅನೇಕ ತತ್ವಪದಕಾರರ, ಸಂತರ ಜಾತ್ರೆಗಳು, ಉರುಸುಗಳು, ಆಚರಣೆಗಳು ಇಂದಿಗೂ ನಡೆಯುತ್ತಿವೆ. ಅವರ ಸಮಾಧಿಗಳೆಲ್ಲ ಜಾಗೃತ ಸ್ಥಳಗಳಾಗಿವೆ. ಆ ಮೂಲಕ ಪುನಃ ರೂಪಗಳಲ್ಲಿ ಮುಖದೋರುತ್ತಾ ಮೈದೋರುತ್ತಾ, ಹೋದುದು ಸ್ವಾರಸ್ಯಕರವಾದುದು. ಅಂದರೆ ಇವರ ಸಾಹಿತ್ಯ, ತತ್ವ, ಸಂಗೀತ ಇತರ ರೂಪಗಳಿಗೆ ಕಾರಣವಾಗಿದೆ. ಇವುಗಳಲ್ಲಿ ಸಂಗೀತ ಸ್ವರೂಪವು ಒಂದು.

ತತ್ವಪದಕಾರರಿಗೆ ಸಂಗೀತವು ಅನುಭಾವದ ಒಂದು ಸಾಧನ. ಅಂತಲೇ ಸೂಫಿಗಳ ಗಾಢ ಪ್ರಭಾವದಲ್ಲಿದ್ದ ತತ್ವಪದಕಾರರಿಗೆ ಅವರ ಸಂಗೀತವೂ ಪ್ರೇರಣೆಯಾಗಿದೆ. ಅವರ ಗೀತ ಪ್ರಧಾನಕಾವ್ಯ ತತ್ವಪದಕಾರರಲ್ಲೂ, ಕನ್ನಡ ಜನಪದ ಶಾಹಿರರ ಪರಂಪರೆಯಲ್ಲೂ ಕಾಣಿಸಿಕೊಂಡದ್ದನ್ನು ರಹಮತ್ ತರೀಕೆರೆ ಅವರು ತಮ್ಮ 'ಕರ್ನಾಟಕದ ಸೂಫಿಗಳು' (೨೦೦೧ : ಪು.೨೧೮) ಕೃತಿಯಲ್ಲಿ ಉಲ್ಲೇಖಿಸುತ್ತಾರೆ.

ಆಧುನಿಕ ಸಂದರ್ಭದಲ್ಲಿ ತತ್ವಪದಗಳನ್ನು ನಾನಾ ಗಾಯನ ಪ್ರಕಾರಗಳಿಂದ ಹಾಡಿದ ಬಗೆಗಳಿವೆ. ಆದರೆ ಪ್ರಾಯೋಗಿಕವಾಗಿ ತತ್ವಪದಗಳು ಹೇಗೆ ಅಸ್ತಿತ್ವದಲ್ಲಿವೆ ಎಂಬುದನ್ನು ಕೇಳಿಕೊಂಡಾಗ ಈ ಕೆಳಕಂಡ ಅಂಶಗಳು ಮನದಟ್ಟಾಗುತ್ತವೆ. ಕೆಲವು ಸಾಂಪ್ರದಾಯಿಕ ಮನೆತನಗಳು, ವ್ಯಕ್ತಿಗಳು ತತ್ವಪದ ಗಾಯನ ಪರಂಪರೆಯನ್ನು ತಲೆಮಾರುಗಳಿಂದ ವಂಶಪರಂಪರೆಯಾಗಿ ಮುಂದುವರೆಸಿಕೊಂಡು ಬಂದಿವೆ. ಕೆಲವರಿಗೆ ಇದೊಂದು ಕಾಯಕವೇ ಆಗಿದೆ. ಹೀಗಾಗಿ ಪರಂಪರೆ ಉಳಿದಿದೆ. ಕೆಲವೊಮ್ಮೆ ಈ ನಿಟ್ಟಿನಲ್ಲಿ ಅಭಿರುಚಿಯುಳ್ಳವರು ಈ ಕಲೆಯನ್ನು ಕಲಿತು ರೂಢಿಸಿಕೊಂಡು ಬಂದಿರುವುದೂ ಉಂಟು. ಪಾರಮಾರ್ಥಿಕ, ಆಧ್ಯಾತ್ಮಿಕ, ಅನುಭಾವ ಚಿಂತನೆಯಲ್ಲಿ ಅಭಿಲಾಷೆಯುಳ್ಳ ಜನರು ನಿಗದಿಗೊಳಿಸಿದ ದಿನದಂದು ಒಟ್ಟಿಗೆ ಸೇರಿ ಚರ್ಚಿಸಿ, ಭಕ್ತಿಯಿಂದ ಗೀತೆಗಳನ್ನು ಭಜನೆ ರೂಪದಲ್ಲಿ ಹಾಡುವ ಕ್ರಿಯೆಯಲ್ಲಿ ತೊಡಗಿದ ಕಾರಣವಾಗಿಯೂ ಈ ಪರಂಪರೆ ಉಳಿದಿರುವಂತೆ ತೋರುತ್ತದೆ.

ಪ್ರಸ್ತುತ ಇಲ್ಲಿ ತತ್ವಪದಗಳು ಹೇಗೆ ಪ್ರಚಲಿತದಲ್ಲಿವೆ ಮತ್ತು ಅವುಗಳ ಸಂಗೀತ ಸ್ವರೂಪವೇನು? ಎಂಬುದನ್ನು ಕ್ಷೇತ್ರಾಧಾರಿತ ಹಿನ್ನೆಲೆಯಲ್ಲಿ ಅರಿಯಲು ಪ್ರಯತ್ನಿಸಲಾಗಿದೆ. ತತ್ವಪದಗಳ ಸಂಗೀತ ಸ್ವರೂಪವನ್ನು ತಿಳಿಯಲು, ತತ್ವಪದಗಳನ್ನು ಹಿಂದೂಸ್ತಾನಿ ಮತ್ತು ಶಾಸ್ತ್ರೀಯ ಗಾಯನದಲ್ಲಿ ಹಾಡುವ ಮೂವರಿಗೆ ತತ್ವಪದಗಳನ್ನು ಸುಗಮಸಂಗೀತದಲ್ಲಿ ಹಾಡುವ ಐವರಿಗೆ, ತತ್ವಪದಗಳನ್ನು ಏಕತಾರಿ ಮೂಲಕ ಹಾಡುತ್ತಾ ತಿರುಗುವ ನಾಲ್ವರಿಗೆ ಮತ್ತು ತತ್ವಪದಗಳನ್ನು ಭಜನೆಯಲ್ಲಿ ಹಾಡುವ ತಂಡದ ಐವರಿಗೆ ಪ್ರಶ್ನಾವಳಿಯನ್ನು ಕಳುಹಿಸಿ ಅಭಿಪ್ರಾಯವನ್ನು ಪಡೆಯಲಾಗಿದೆ.

ಪ್ರಸ್ತುತ ಇದೊಂದು ಸೀಮಿತ ಆಸಕ್ತಿಯ ಪ್ರಶ್ನಾವಳಿಯಾಗಿದೆ. ಇದು ಹಲವಾರು ಕೊರತೆಗಳಿಂದ ಕೂಡಿದೆ. ಈ ಕುರಿತು ಪ್ರಶ್ನೆಗಳನ್ನು ಇನ್ನೂ ಹೆಚ್ಚಿನ ಹಾಡುಗಾರರಿಗೆ, ಪರಿಣತ ಗಾಯಕರಿಗೆ ಕಳುಹಿಸಿ ಅವರ ಅಭಿಪ್ರಾಯವನ್ನು ಪಡೆದು ಸಂಗೀತದ ಬೇರೆ ಬೇರೆ ಆಯಾಮಗಳನ್ನು ನಿಖರವಾಗಿ ಗುರುತಿಸಬಹುದಿತ್ತು. ಆದರೆ ಇದು ನನ್ನ ಅಧ್ಯಯನ ಆಸಕ್ತಿಯ ಮುಖ್ಯ ಭಾಗವಲ್ಲ. ಈ ನೆಲೆಯಲ್ಲಿ ಅಧ್ಯಯನ ಮಾಡುವವರಿಗೆ ತೋರು ದಾರಿಯ ಪ್ರಯತ್ನವಷ್ಟೇ ಆಗಿದೆ.

ಆಧುನಿಕ ಸಂಗೀತದ ಪ್ರಭಾವಕ್ಕೆ ಸಿಲುಕಿರುವ ತತ್ವಪದಗಳು ಇವುಗಳನ್ನು ಹಾಡಲು ಬಳಸುವ ರಾಗ-ತಾಳಗಳು, ಗಾಯನ-ವಾದನ ವೈವಿಧ್ಯದಿಂದ ಕೂಡಿವೆ. ಇವುಗಳ ಕುರಿತು ಪ್ರತ್ಯೇಕ ಅಧ್ಯಯನವೇ

ಆಗಬೇಕು. ಹಾಗಾದಾಗ ಇವುಗಳ ಸಂಗೀತ ಸ್ವರೂಪದ ವಿವಿಧ ಆಯಾಮಗಳನ್ನು ಅರಿಯಲು ಸಾಧ್ಯವಾಗುತ್ತದೆ.

**ಕೇಳಿದ ಪ್ರಶ್ನೆಗಳು ಹೀಗಿವೆ**

೧. ತತ್ವಪದಗಳನ್ನು ಹಾಡಲು ನೀವು ಇಷ್ಟಪಡುತ್ತೀರಾ?

೨. ಹಾಡಲು ಯಾವ ರಾಗ-ತಾಳಗಳನ್ನು ಬಳಸುತ್ತೀರಿ?

೩. ಹಾಡಲು ಯಾವ ವಾದ್ಯ ಸಂಯೋಜನೆಗಳಿದ್ದರೆ ಚೆನ್ನ ಅಥವಾ ಯಾವ ವಾದ್ಯ ಸಂಯೋಜನೆಯಲ್ಲಿ ಹಾಡುತ್ತೀರಿ?

೪. ತತ್ವಪದ ಹಾಡುಗಳಿಗೆ ಕೇಳುಗರ ಪ್ರತಿಕ್ರಿಯೆ ಹೇಗೆ ಇರುತ್ತೆ?

೫. ತತ್ವಪದಗಳನ್ನು ಹಾಡಲು ಸಮಯದ ಆಯ್ಕೆಯೇನಾದರು ಇದೆಯೇ ಅಥವಾ ಇಲ್ಲವೆ?

೬. ನೀವು ಹಾಡಲು ಬಳಸಿಕೊಳ್ಳುವ ಪದಗಳು ಪಠ್ಯಸಂಗ್ರಹದಲ್ಲಿಯವೇ ಅಥವಾ ಮೌಖಿಕ ಹಾಡುಗಳೇ? ಇವುಗಳನ್ನು ಹಾಡುವಲ್ಲಿ ಯಾವ ದೃಷ್ಟಿಯಿಂದ ಪದ ಪರಿಷ್ಕರಣೆ ಅಥವಾ ಪದಪಲ್ಲಟ ಮಾಡಿ ಕೊಳ್ಳುತ್ತೀರಿ?

ಎಲ್ಲರಿಗೂ ಒಂದೇ ರೀತಿಯ ಪ್ರಶ್ನೆಗಳನ್ನು ಈ ಮೇಲಿನಂತೆ ಕೇಳಲಾಗಿತ್ತು. ಇಲ್ಲಿ ಮಾತ್ರ ಅನುಕ್ರಮವಾಗಿ ಸೂಚಿಸಲು ಕೇಳಿಲ್ಲ. ಆದರೆ ವಿವಿಧ ಗಾಯನ ಪ್ರಕಾರಗಳಲ್ಲಿ ಹಾಡುವ ಗಾಯಕರು ವಿಭಿನ್ನವಾಗಿಯೇ ಪ್ರತಿಕ್ರಿಯಿಸಿದ್ದಾರೆ. ಇಲ್ಲಿ ಅವುಗಳ ವಿವರವನ್ನು ನೀಡಲಾಗಿದೆ.

'ಹಿಂದೂಸ್ತಾನಿ ಮತ್ತು ಶಾಸ್ತ್ರೀಯ' ಗಾಯಕರು ತತ್ವಪದಗಳ ಹಾಡಿಗೆ ಹೆಚ್ಚು ಗಮನ ಕೊಡದಿರುವುದು ಕಂಡುಬರುತ್ತದೆ. ವಚನ ಮತ್ತು ಕೀರ್ತನೆಗಳನ್ನೇ ಹೆಚ್ಚಾಗಿ ಬಳಸಲಾಗುತ್ತದೆ. ಹಿಂದೂಸ್ತಾನಿ ಶಾಸ್ತ್ರೀಯ ಸಂಗೀತದಲ್ಲಿ ತತ್ವಪದಗಳನ್ನು ಹಾಡಿದರೆ ಕೇಳುಗರು/ಶ್ರೋತೃಗಳು ಹೆಚ್ಚು ಇಷ್ಟ ಪಡುವುದಿಲ್ಲ ಎನ್ನುತ್ತಾರೆ. ಇವುಗಳಿಗೆ ಒಗ್ಗದ ಶಾಸ್ತ್ರೀಯ ವಾದ್ಯ ಸಂಯೋಜನೆ ಬಳಸುವುದರಿಂದ ಈ ಪದಗಳು ಆಕರ್ಷಕವಾಗದೇ ಇರಬಹುದು ಎಂಬ ಕಾರಣವನ್ನು ನೀಡುತ್ತಾರೆ. ತತ್ವಪದಗಳನ್ನು ಹಾಡಲು ಸಂಗ್ರಹ ಪಠ್ಯದ ಹಾಗೂ ಮೌಖಿಕ ರಚನೆಗಳನ್ನು ಬಳಸಿಕೊಳ್ಳುವುದು ಕಂಡುಬರುತ್ತದೆ. ಕೆಲವು ಸಂದರ್ಭಗಳಲ್ಲಿ ಭಾಷೆ, ಲಯ ವ್ಯತ್ಯಾಸಗಳಿಗಾಗಿ ಪದಪಲ್ಲಟ, ಪರಿಷ್ಕರಣೆ ಮಾಡಿಕೊಳ್ಳುವುದು ಕಂಡುಬರುತ್ತದೆ. ಆದರೆ ಸಿದ್ಧರಾಮ ಜಂಬಲದಿನ್ನಿ ಅಂತವರು ಹಿಂದೂಸ್ತಾನಿ ಶಾಸ್ತ್ರೀಯ ಸಂಗೀತದಲ್ಲಿ ತತ್ವಪದಗಳನ್ನು ಅದ್ಭುತವಾಗಿ ಹಾಡಿರುವಂತದ್ದು ಗಮನಾರ್ಹ. ಬಂಡೆಪ್ಪ ಕವಿಯ ಹಾಡುಗಳಿಗೆ ರಾಗ-ತಾಳಗಳನ್ನು ಅವರೇ ಸೂಚಿಸಿದ್ದಾರೆ ಎಂದು ಅಮರೇಶ ನುಗಡೋಣಿ ಅವರು ತಮ್ಮ 'ನುಡಿವ ಬೆಡಗು'

ಕೃತಿಯಲ್ಲಿ (೧೯೯:ಪು.೩೦) ಉಲ್ಲೇಖಿಸುತ್ತಾರೆ. ಅಂದರೆ ಈ ನಡಿಗೆ ನಮ್ಮನ್ನು ಈ ಕುರಿತು ಎರಡು ವಿರುದ್ಧ ತುಯ್ತಗಳಿಗೆ ಕರೆದೊಯ್ಯುತ್ತದೆ.

ತತ್ವಪದಗಳನ್ನು ಹಾಡುವ ಗಾಯಕರು ಸಹಜವಾಗಿ ತತ್ವಪದ ಗಾಯನಕ್ಕೆ ಮಹತ್ವ ಕೊಡುವುದು ಕಂಡುಬರುತ್ತದೆ. ಜಾನಪದ ಮಟ್ಟುಗಳಲ್ಲಿ ಏಕತಾರಿ, ತಂಬೂರಿ ವಾದ್ಯಗಳ ಮೂಲಕ ಹಾಡುವುದರಿಂದ, ನಾದ, ಲಯಗಳಿಗೆ ಇವು ಹೊಂದಿಕೆ ಆಗುವುದರಿಂದ ಕೇಳುಗರು ರೋಮಾಂಚನಗೊಂಡು ಹೆಚ್ಚು ಇಷ್ಟಪಡುತ್ತಾರೆ ಎನ್ನಲಾಗುತ್ತಿದೆ. ಎಲ್ಲ ಸಮಯದಲ್ಲಿಯೂ ಹಾಡುಗಳನ್ನು ಹಾಡುವುದು ಕಂಡುಬರುತ್ತದೆ. ಹೆಚ್ಚಾಗಿ ತಲೆ ತಲಾಂತರದಿಂದ ಅಥವಾ ಮೌಖಿಕವಾಗಿ ಹರಿದು ಬಂದ ಹಾಡುಗಳನ್ನು ಬಳಸುವುದು ಮತ್ತು ಸಂದರ್ಭಕ್ಕೆ ತಕ್ಕಂತೆ ಅಂಕಿತಗಳನ್ನು ಬದಲಿಸಿ ಹಾಡುವ ರೂಢಿಯೂ ಇರುವುದು ಕಂಡುಬರುತ್ತದೆ.

'ಸುಗಮಸಂಗೀತ'ದಲ್ಲಿ ತತ್ವಪದಗಳಿಗೆ ಅಷ್ಟು ಪ್ರಾಮುಖ್ಯತೆಯನ್ನು ನೀಡಿಲ್ಲ. ವಚನಗಳನ್ನೇ ಹೆಚ್ಚಾಗಿ ಹಾಡುತ್ತೇವೆ ಎಂದು ಸೂಚಿಸಲಾಗಿದೆ. ತತ್ವಪದಗಳನ್ನು ಅವುಗಳ ಬೆಡಗು, ನಾದ-ಲಯಗಳಿಗಾಗಿ ಸಾಮಾನ್ಯವಾಗಿ ಇಷ್ಟಪಡುವುದು ಕಂಡುಬರುತ್ತದೆ. ಯಾವುದೇ ವೇಳೆಯಲ್ಲಿಯೂ ಹಾಡಬಹುದಾದವು ಎನ್ನಲಾಗುತ್ತಿದೆ. ಸಂಗ್ರಹ ಪಠ್ಯದ ರಚನೆಗಳನ್ನು ಬಳಸಿಕೊಂಡು ಹಾಡಲಾಗುತ್ತಿದೆ. ಕೆಲವೊಂದು ಸಂದರ್ಭದಲ್ಲಿ ಭಾಷೆ, ಲಯ ವ್ಯತ್ಯಾಸಗಳಿಗಾಗಿಯೂ ಪದ ಪರಿಷ್ಕರಣೆಯನ್ನು ಮಾಡಿ ಹಾಡಲಾಗುತ್ತದೆ ಎಂದು ಸೂಚಿಸಿರುವುದು ಕಂಡುಬರುತ್ತದೆ.

ಆದರೆ ಸಿ.ಅಶ್ವತ್ ಅವರು ಶರೀಫರ ಹಾಡುಗಳನ್ನು ಸುಗಮ ಸಂಗೀತಕ್ಕೆ ಅಳವಡಿಸಿ ಅದ್ಭುತವಾಗಿ ಹಾಡಿದ್ದಾರೆ. ಅವುಗಳ ಕ್ಯಾಸೆಟ್ಟುಗಳು ಕರ್ನಾಟಕದಾದ್ಯಂತ ಜನಪ್ರಿಯಗೊಂಡಿರುವುದನ್ನು ಕಾಣಬಹುದು. ಸಿನಿಮಾದಲ್ಲೂ ಈ ಹಾಡುಗಳನ್ನು ಬಳಸಿಕೊಳ್ಳಲಾಗಿದೆ. ಹಾಗೆ ನೋಡಿದರೆ ಇಲ್ಲಿಯೂ ಕೂಡ ತತ್ವಪದಗಳ ಹಾಡುವ ಕುರಿತಂತೆ ವಿರುದ್ಧ ನಡೆಯನ್ನು ಅನುಸರಿಸಿದಂತೆ ಕಾಣುತ್ತದೆ.

ಭಜನೆಯಲ್ಲಿ ತತ್ವಪದ ಮತ್ತು ಕೀರ್ತನೆಗಳನ್ನು ಹೆಚ್ಚು ಹಾಡುವುದು ಕಂಡುಬರುತ್ತದೆ. ತತ್ವಪದಗಳ ನೀತಿ, ಭಕ್ತಿ, ಅವುಗಳ ಅನುಭಾವ, ನಾದ-ಲಯಕ್ಕೆ ಹೆಚ್ಚು ಜನ ಸೋತಿದ್ದಾರೆ. ಹಾಡಲು ಸುಗಮವಾದ ಇವು (ಭಜನೆ ಶೈಲಿಯಲ್ಲಿ) ಹಾರ್ಮೋನಿಯಂ (ಪೇಟಿ), ದಮ್ಮಡಿ, ಕೈಗೆಜ್ಜೆ, ತಾಳಗಳ ಸಹಾಯದಿಂದ ಹಾಡುವುದರಿಂದ ಕೇಳುಗರಿಗೆ ಹಿತವೆನ್ನಿಸುತ್ತದೆ ಎಂದು ಹೇಳಲಾಗಿದೆ. ರಾತ್ರಿ ವೇಳೆ ಮತ್ತು ವಿಶೇಷ ಕಾರ್ಯಕ್ರಮದ ಸಂದರ್ಭದಲ್ಲಿ ಮಾತ್ರ ಇವುಗಳನ್ನು ಹಾಡುವುದು ಕಂಡುಬರುತ್ತದೆ. ಪರಂಪರೆಯಿಂದ ಬಂದ ಮೌಖಿಕ ಹಾಡುಗಳನ್ನು ಹೆಚ್ಚು ಬಳಸುವುದು ಕಂಡುಬರುತ್ತದೆ.

ಆದರೆ ಆಧುನಿಕ ಸಂಗೀತದ ಪ್ರಭಾವ ಭಜನೆಪದಗಳನ್ನು ಹಾಡುವವರ ಮೇಲೆಯೂ ಆಗಿರುವುದನ್ನು ನಾವು ಅಲ್ಲಗಳೆಯುವಂತಿಲ್ಲ. ತತ್ವಪದ ಗಾಯನದಲ್ಲಿ(ಕಡಕೋಳ ಮಡಿವಾಳಪ್ಪರ (ನಾನಾರೆಂಬುದು ನಾನಲ್ಲ ಈ ಮಾನುಷ), ಕೂಡಲೂರು ಬಸವಲಿಂಗ ಶರಣರ (ಚಿಂತೆಯನೆಲ್ಲ ಬಿಡುಮನವೆ),

ಸರ್ಪಭೂಷಣ ಶಿವಯೋಗಿಗಳ (ತೇರ ಸಾಗಿತಮ್ಮ ನೋಡಿರೆ, ಈ ದೇಹವೆಂಬ ತೇರ) ಖೈನೂರು ಕೃಷ್ಣಪ್ಪರ (ತಂಗಾಳಿ ತಂತು ಬಲು ಗಡಿಬಿಡಿ), ನೀರಲಕೇರಿ ಬಸವಲಿಂಗರ (ನಗೆಬರುತದ ಸಾಂಬ ಎನಗ) ಮತ್ತು ಶಿಶುನಾಳ ಶರೀಫರ (ಹೋಗುತಿಹುದು ಕಾಯ ವ್ಯರ್ಥ ಇದರ ಲಾಭವ ತಿಳಿದವ ಯೋಗಿ ಸಮರ್ಥ) ಮುಂತಾದವರ ಹಾಡುಗಳ ಮೇಲೆ ಆಧುನಿಕ ತಂತ್ರಜ್ಞಾನಗಳ, ಇತ್ತೀಚಿನ ಆಕರ್ಷಕ ರಾಗಗಳ, ಮತ್ತು ಕರ್ನಾಟಕ ಸಂಗೀತ, ಹಿಂದೂಸ್ತಾನಿ ಸಂಗೀತ ಮುಂತಾದ ಸಂಗೀತದ ಪ್ರಭಾವವಾಗಿರುವುದನ್ನು ಸರ್ವಮಂಗಳ ಶಂಕರ ಅವರು ಗುರುತಿಸುತ್ತಾರೆ. ತತ್ವಪದಗಳಿಗೆ ಬಳಸಿದ ರಾಗ-ತಾಳಗಳ ವೈವಿಧ್ಯತೆಗಳನ್ನು ಪ್ರಾಯೋಗಿಕ ನೆಲೆಯಲ್ಲಿ ತಮ್ಮ 'ಸ್ವರವಚನಗಳು : ಸಂಗೀತಾತ್ಮಕ ಅಧ್ಯಯನ' ಎಂಬ ಮಹಾಪ್ರಬಂಧದ ಅನುಬಂಧದಲ್ಲಿ ವಿಶ್ಲೇಷಿಸಿದ್ದಾರೆ.

ಒಟ್ಟಿನಲ್ಲಿ ಜಾಗತೀಕರಣದ ತೆಕ್ಕೆಯಲ್ಲಿ ಬೀಳುತ್ತಿರುವ ಹಳ್ಳಿಗಳು, ಜನರ ಬದುಕು, ಅವರ ಕಲೆಗಳು, ಕಾಲಕ್ಕೆ ತಕ್ಕಂತೆ ರೂಪಾಂತರಗೊಂಡು ಬದಲಾವಣೆ ಆಗುತ್ತಿವೆ. ಇದಕ್ಕೆ ತತ್ವಪದಗಳು ಹೊರತಲ್ಲ. ಹೀಗಾಗಿ ತತ್ವಪದಗಳು ಆಯಾ ಪ್ರಾಂತ್ಯಗಳಿಗೆ ಅಲ್ಲಿನ ಪರಿಸರದ ಸಂಗೀತಗಳಿಗೆ ಗುರಿಯಾಗಿ, ವಿವಿಧ ಸಂಗೀತ ಪ್ರಕಾರಗಳಲ್ಲಿ, ಇಲ್ಲವೆ ಆಧುನಿಕವಾಗಿ ಜಾನಪದ ಮಟ್ಟುಗಳಲ್ಲಿ ಸೇರಿಕೊಂಡ ಸಾಧ್ಯತೆಯೂ ಅಲ್ಲಗಳೆಯುವಂತಿಲ್ಲ. ಈ ಹಿನ್ನೆಲೆಯಲ್ಲಿ ತತ್ವಪದಗಳ ಪ್ರಾಯೋಗಿಕ (ಅದರಲ್ಲೂ ಭಜನೆ) ಪರಂಪರೆಯನ್ನು ಗಣಿಸುವಾಗ ಗಾಯನಗಳ ಗುಣಮಟ್ಟವನ್ನು ಅಳೆಯಲಾಗುವುದಿಲ್ಲ. ಇದನ್ನು ಅಳೆಯಲು ಬಾರದು ಎನ್ನುತ್ತಾರೆ ಸಂಗೀತಜ್ಞೆ ಸರ್ವಮಂಗಳ ಶಂಕರ್ ಅವರು. ಏಕೆಂದರೆ ಅವು ತನ್ನದೇ ಆದ ನಾದ ಲಯಗಳ ಪರಂಪರೆ ರೂಢಿಸಿಕೊಂಡು ಬರುತ್ತಿವೆ. ಪ್ರತ್ಯೇಕ ಸೌಂದರ್ಯವನ್ನು ಪಡೆದಿವೆ.

ಆದರೆ ತತ್ವಪದಗಳು ಬೇರೆ ಬೇರೆ ನೆಲೆಯಲ್ಲಿ ತಮ್ಮ ಅನನ್ಯತೆಯನ್ನು, ಅಸ್ತಿತ್ವವನ್ನು ಉಳಿಸಿಕೊಂಡಿವೆ. ಗ್ರಾಮೀಣ ಜನತೆಯು ಇವುಗಳನ್ನು ಜಾನಪದ ಮಟ್ಟಿನಲ್ಲಿಯೂ, ಶಾಸ್ತ್ರೀಯ ಸಂಗೀತ ಪರಿಶ್ರಮವಿರುವ ಗಾಯಕರು ಶಾಸ್ತ್ರೀಯ ಸಂಗೀತದ ನೆಲೆಯಲ್ಲಿಯೂ, ಹಳ್ಳಿ ಮತ್ತು ನಗರಗಳ ಬದುಕೆರಡನ್ನು ರೂಢಿಸಿಕೊಂಡು ಬಂದ ಗಾಯಕರು ಹೊಸ ಬಗೆಯ ಸಮ್ಮಿಶ್ರ ಮಾದರಿಯ ಗಾಯನದಲ್ಲಿಯೂ ಹಾಡಲಾಗುತ್ತಿದೆ. ಹಾಗೆಯೇ ಆಧುನಿಕ ಕಾಲದ ಜನಪ್ರಿಯ ರಾಗಗಳ ಹಿಡಿದು ಸುಗಮ ಸಂಗೀತ, ಭಾವಗೀತೆಯಲ್ಲಿ ಹಾಡಿ, ಕ್ಯಾಸೆಟ್‌ನಿಂದ ಜನಪ್ರಿಯಗೊಳಿಸಿರುವುದನ್ನು ಕಾಣುತ್ತೇವೆ. ಸಿನಿಮಾದಲ್ಲಿ ಶರೀಫರ 'ಯಾಕೆ ಬಡಿದಾಡುತೀ ತಮ್ಮ' ಈ ಹಾಡನ್ನು ವೆಸ್ಟರ್ನ್ ಮ್ಯೂಜಿಕ್‌ನಲ್ಲಿ ಹಾಡಿರುವುದೂ ಕಂಡುಬರುತ್ತದೆ. ಹೀಗೆ ತತ್ವಪದಗಳು ವೈವಿಧ್ಯಗಳ ಮೂಲಕ ಸಂಗೀತಕ್ಕೆ ಅಳವಟ್ಟಿರುವುದು ಇವುಗಳ ಸಾಹಿತ್ಯಕ ಶಕ್ತಿಯೋ, ನಾದ-ಲಯಗಳ ಕಾರಣವೋ ಆಗಿದೆ. ಆದರೆ ಇವುಗಳನ್ನು ರೂಪಾಂತರಿಸಿ ಆಧುನಿಕ ಸಮಾಜ ವಿಭಿನ್ನ ಸಂಗೀತ ಪ್ರಕಾರಗಳಲ್ಲಿ (ಉದ್ದೇಶದಲ್ಲಿ) ಹಾಡುವುದನ್ನು ಸ್ವಾಗತಿಸುವುದರಲ್ಲಿ ಸಹಜತೆ ಇರಬಹುದು. ಆದರೆ ಇದನ್ನು ಸರಿಯೆನ್ನಬಹುದೇ? ಅಥವಾ ಬೇರೆ ಬೇರೆ ಸಂಗೀತ ರೂಪಗಳಲ್ಲಿ

ಹಾಡುವ ಕ್ರಮವು ಜನಪದರ ಸಂಗೀತಕ್ಕೆ, ಅವುಗಳ ಸಹಜ ನುಡಿಗಟ್ಟು, ಲಯ, ಧಾಟಿಗೆ ಹತ್ತಿರವಾಗಿಲ್ಲದ ಕಾರಣ ಜೀವಂತಿಕೆ ಕಳೆದುಕೊಳ್ಳುತ್ತಿವೆ ಎನ್ನುವ ಆತಂಕ ಸರಿಯೇ? ಇದೊಂದು ಮೂಲಭೂತ ಸಮಸ್ಯೆ. ಇದನ್ನು ವಿವೇಚಿಸಬೇಕಾಗಿದೆ.

## ಪ್ರಶ್ನಾವಳಿಯಲ್ಲಿ ಭಾಗವಹಿಸಿದ ಹಾಡುಗಾರರು

### ಹಿಂದೂಸ್ತಾನಿ ಮತ್ತು ಶಾಸ್ತ್ರೀಯ ಸಂಗೀತಗಾರರು

ಪುಷ್ಪಾವತಿ, ಹೊಸಪೇಟೆ

ರಮೇಶ ಕುಲಕರ್ಣಿ ಕೊಯಮತ್ತೂರು, ಗುಲಬರ್ಗಾ

ವಿದ್ಯಾಕಟ್ಟಿ, ಬಿಜಾಪುರ

### ತತ್ವಪದ ಹಾಡುಗಾರರು

ಮಾರೆಪ್ಪ ಚೆನ್ನದಾಸರು, ಯಲಬುರ್ಗಾ

ಅಂಜನಪ್ಪ, ಯಲಬುರ್ಗಾ

ಸಂಜೀವಪ್ಪ,ಯಲಬುರ್ಗಾ

ಬಸವನಗೌಡ, ಗೊಂಡಬಾಳ

### ಸುಗಮ ಸಂಗೀತ ಹಾಡುಗಾರರು

ಮಲ್ಲಯ್ಯ ಹಿರೇಮಠ ವಡಗೇರಾ, ಜೇವರ್ಗಿ

ಪಿ.ಎನ್.ಪತ್ತಾರ, ಮುಧೋಳ, ಜಮಖಂಡಿ

ಲಕ್ಷ್ಮೀ ಆರ್.ಕಟ್ಟಿ, ಕೊಪ್ಪಳ

ಅವರೇಶ್ವರ ಶಾಸ್ತ್ರೀ ಗವಾಯಿಗಳು, ಯರಡೋಣಿ, ಲಿಂಗಸೂಗೂರು

ವೀರೇಶ ಹಿಟ್ನಾಳ, ಹೊಸಪೇಟೆ

### ಭಜನೆ ಗಾಯಕರು

ಪಂಪಯ್ಯಸ್ವಾಮಿಗಳು, ಕಡ್ಲೆಬಾಳ ಗ್ರಾಮ

ಪ್ರವೀಣ ಪತ್ತಾರ, ಅರಳಗುಂಡಿಗೆ

ಫಕೀರಪ್ಪ, ಲೋಕಪ್ಪನ ಹಾಳ, ಹಗರಿಬೊಮ್ಮನಹಳ್ಳಿ

ಹನುಮಂತಪ್ಪ, ಲೋಕಪ್ಪನಹಾಳ, ಹಗರಿಬೊಮ್ಮನಹಳ್ಳಿ

ಆನಂದ ಬಿ, ಮರಿಯಮ್ಮನಹಳ್ಳಿ

ಹುಲುಗಪ್ಪ, ಮರಿಯಮ್ಮನಹಳ್ಳಿ

## ಅನುಬಂಧ ಎರಡು

# ತತ್ವಪದ ಸಾಹಿತ್ಯ ಅಧ್ಯಯನಗಳ ಸೂಚಿ

ಇಲ್ಲಿ ತತ್ವಪದಗಳ ಅಧ್ಯಯನ ಸೂಚಿಯನ್ನು ಅಧ್ಯಯನದ ಅನುಕೂಲಕ್ಕಾಗಿ ವಿಷಯಾನುಗುಣವಾಗಿ ವಿಂಗಡಿಸಲಾಗಿದೆ. ಕೃತಿಗಳನ್ನು ಪ್ರಕಟಗೊಂಡ ವರ್ಷಾನುಕ್ರಮದಲ್ಲಿ ಕೊಡಲಾಗಿದೆ. ಹೀಗೆ ಕೊಡುವುದರಿಂದ ಅಧ್ಯಯನ ಕ್ರಮವು ನಡೆದು ಬಂದ ಬಗೆಯನ್ನು ತಿಳಿಯಲು ಅನುಕೂಲವಾಗುತ್ತದೆ ಎಂದು ನಂಬಲಾಗಿದೆ. ಆದರೂ ಇಲ್ಲಿ ಕೆಲವೊಂದು ಕೃತಿಗಳ ಪ್ರಕಟಣೆಯ ವರ್ಷ ಲಭ್ಯವಾಗಿಲ್ಲ. ಅಂಥವುಗಳನ್ನು ಸೂಚಿಯ ಕೊನೆಗೆ ನೀಡಲಾಗಿದೆ. ಕೆಲವು ಕೃತಿಗಳ ಲೇಖಕರ ಹೆಸರು ಮತ್ತು ಪ್ರಕಾಶಕರ ವಿಳಾಸ ಲಭ್ಯವಾಗಿಲ್ಲ. ಹೀಗಾಗಿ ಲಭ್ಯವಿದ್ದ ಮಾಹಿತಿಯನ್ನಷ್ಟೇ ಕೊಡಲಾಗಿದೆ. ಒಂದೇ ಲೇಖನ ಬೇರೆ ಬೇರೆ ಗ್ರಂಥಗಳಲ್ಲಿ(ಆ್ಯಂಥಾಲಜಿಗಳಲ್ಲಿ)ಯೂ ಸೇರಿದೆ. ಅಂಥ ಕೆಲವು ಲೇಖನಗಳ ಮಾಹಿತಿಯನ್ನು ನೀಡಲಾಗಿದೆ. ಈ ಅಧ್ಯಯನ ಸೂಚಿಯನ್ನು ವಿವಿಧ ಮೂಲಗಳಿಂದ ಸಂಗ್ರಹಿಸಿದೆ. ಆದಷ್ಟು ಸಮಗ್ರವಾಗಿರುವಂತೆ ನೋಡಿಕೊಳ್ಳಲಾಗಿದೆ.

### ೧. ತತ್ವಪದ/ಸ್ವರವಚನ ಸಂಕಲನಗಳ ಸೂಚಿ

ನಾಗಭೂಷಣ ಶಿವಯೋಗಿಗಳು(ಸಂ), ೧೯೨೮, **ಘನಮಠೇಶ ತತ್ವಪದಗಳು**

ಗಂಗಾಧರ ಮಡಿವಾಳೇಶ್ವರ ತುರಮರಿ(ಸಂ), ೧೮೭೩, **ಕೈವಲ್ಯಪದ್ಧತಿ(ಟೀಕಾ ಸಹಿತವಾಗಿ)**, ಸಮಾಚಾರದಚ್ಚುಕೂಟ, ಬೆಳಗಾವಿ

(ಸಂ), ೧೮೮೪, **ಕೈವಲ್ಯ ಕಲ್ಪವಲ್ಲರಿ ವಚನಂಗಳು**, ಬೆಂಗಳೂರು ಡಿಪೋ ಮುದ್ರಾಕ್ಷರ ಶಾಲೆ, ಬೆಂಗಳೂರು

(ಸಂ), ೧೮೯೦, **ಕೈವಲ್ಯ ಕಲ್ಪವಲ್ಲರಿ**, ಬಿ.ನಾರಾಯಣಯ್ಯನರವರ ಸತ್ಸಂಪ್ರದಾಯ ಕಳಾನಿಧಿ ಮುದ್ರಾಕ್ಷರ ಶಾಲೆ, ಬೆಂಗಳೂರು

ದೊಡ್ಡಬೆಲೆ ನಾರಾಯಣಶಾಸ್ತ್ರಿ(ಸಂ), ೧೮೯೧, **ಕೈವಲ್ಯ ಕಲ್ಪವಲ್ಲರಿ(ಸಟೀಕ ತಾತ್ಪರ್ಯ)**, ಬಳ್ಳಾರಿ-ಕರ್ನಾಟಕ ಬುಕ್ ಡಿಪೋ, ಏಜೆಂಟ್ ಶಿವಲಿಂಗಂ ಶೆಟ್ಟರ ಗ್ರಂಥರತ್ನಾಕರ ಮುದ್ರಾಕ್ಷರ ಶಾಲೆ, ಬಳ್ಳಾರಿ

ತಿರುಮಲೆ ಶ್ರೀನಿವಾಸಾಚಾರ್ಯ(ಸಂ), ೧೮೯೨, ಷಡಕ್ಷರಯ್ಯ ವಚನ 'ತಾತ್ಪರ್ಯ ನಿರ್ಣಯ', ಕರ್ನಾಟಕ ಬುಕ್ ಡಿಪೋ ಏಜೆಂಟ್ ಎಸ್.ಶಿವಲಿಂಗಂ ಶೆಟ್ಟರ ಗ್ರಂಥರತ್ನಾಕರ ಮುದ್ರಾಕ್ಷರ ಶಾಲೆ, ಬಳ್ಳಾರಿ

ಬಸವಲಿಂಗ ಸ್ವಾಮಿಗಳು(ಸಂ), ೧೯೦೮, ಕೈವಲ್ಯ ದರ್ಪಣ ಮತ್ತು ಘನಮಠೇಶರ ತತ್ವಪದಗಳು, ಮುಳುಗುಂದ ಗವಿಮಠ

ಸೂರ್ಯಕಾಂತ ಸುಜ್ಯಾತ್(ಸಂ), ೧೯೧೫, ದೇವಾಂಗದ ತತ್ವಪದಗಳು,

ಶಿವನಾಗಪ್ಪ ಎ.ಆರ್.(ಸಂ), ೧೯೧೫, ಶಿಶುನಾಳ ಶರೀಫರ ಗೀತೆಗಳು, ಶಿವನಾಗಪ್ಪ ಮತ್ತು ಸನ್ಸ್, ಹುಬ್ಬಳ್ಳಿ

ವಿಶಾಲಾಕ್ಷಂಬ ತಾಯಿ (ಸಂ), ೧೯೧೯, ಆದಿ ಅಮಾತ್ಯಪ್ಪನ ಕೈವಲ್ಯನವನೀತ, ಶ್ರೀ ತೋಂಟದಾರ್ಯ ಮಠ, ಗದಗ

ಪ್ರಕಾಶಕರು(ಸಂ), ೧೯೨೩, ಕೈವಲ್ಯ ನವನೀತ, ಕರ್ನಾಟಕ ಬುಕ್ ಡಿಪೋ ಪ್ರೆಸ್, ಬಳ್ಳಾರಿ

ಮಿರ್ಲೆ ನಂಜುಂಡಯ್ಯ(ಸಂ), ೧೯೨೬, ಸಟೀಕಾ ಕೈವಲ್ಯ ಪದ್ಧತಿಗೆ ಟೀಕು, ಕೆ.ಎಸ್. ನರಸಿಂಹಯ್ಯನವರ ಮುದ್ರಾಕ್ಷರ ಶಾಲೆ, ಮೈಸೂರು

ಸುಬ್ರಹ್ಮಣ್ಯ ಶಾಸ್ತ್ರಿ ಸಿ.(ಸಂ), ೧೯೨೭, ಕೈವಲ್ಯ ಪದ್ಧತಿ (ತಾತ್ಪರ್ಯ ಟಿಪ್ಪಣಿ), ಕರ್ನಾಟಕ ಬುಕ್ ಡಿಪೋ, ಬಳ್ಳಾರಿ

ಹಳಕಟ್ಟಿ ಫ.ಗು.(ಸಂ), ೧೯೨೮-೨೯, ಮೈಲಾರ ಬಸಪ್ಪನವರ 'ಶಿವಾನುಭವ ದರ್ಪಣ', ಬಿಜಾಪುರದ ಶಿವಾನುಭವ ಗ್ರಂಥಮಾಲೆ

ಭೀಮಕವಿ, ೧೯೩೦, ಶಂಕರ ಕೈವಲ್ಯ ಕಲ್ಪದ್ರುಮ

ಪ್ರಕಾಶಕರು(ಸಂ), ೧೯೩೩, ಸೋಮೇಕಟ್ಟಿ ಕರಿವೃಷಭೇಂದ್ರರ ಕೈವಲ್ಯಪದಗಳು, ಶಿವಾನುಭವ ಮಾಸಿಕದಲ್ಲಿ ಬಂದವುಗಳು

ಹರ್ಡೇಕರ ಮಂಜಪ್ಪ(ಸಂ), ೧೯೪೦, ಸುಭೋಧಸಾರ, ಶ್ರೀ ಮುರುಘಾಮಠ, ಧಾರವಾಡ

ಸಿದ್ಧಾಶ್ರಮದ ಶ್ರೀಗಳು(ಸಂ), ೧೯೪೧, ನಿಜಗುಣ ಶಿವಯೋಗಿ ವಿರಚಿತ ವೇದಾಂತ ಗ್ರಂಥಾವಳಿ(ಕೈವಲ್ಯ ಪದ್ಧತಿ), ಶ್ರೀ ಸಿದ್ಧಾಶ್ರಮದ ಶ್ರೀ ಜಹಾಕೃಷ್ಣಾನಂದಸ್ವಾಮಿಗಳು, ಹುಬ್ಬಳ್ಳಿ

ಭೂಸನೂರಮಠ ಸಂ.ಶಿ.(ಸಂ), ೧೯೪೩, ಘನಮಠ ಶಿವಯೋಗಿಗಳ ಕೈವಲ್ಯ ಪದಗಳು, ಶ್ರೀ ಮುರುಘಾಮಠ, ಧಾರವಾಡ

